# ತುಳುವರ ಆಚರಣೆಗಳಲ್ಲಿ ಕಲಾವಂತಿಕೆ



ಕರ್ನಾಟಕ ಲಲಿತಕಲಾ ಅಕಾಡೆಮಿ

**ಈ ಕೃತಿಯಲ್ಲಿ :**

ಈ ಕೃತಿಯ ಪ್ರಯೋಜನವನ್ನು ಕ್ರೋಂಚ ಬಿಡಿಸಿ ಹೇಳಬಹುದು - ನಮ್ಮ ಕಲೆಗಳ (ಚಿತ್ರ-ಶಿಲ್ಪ; ದರ್ಶನ ಕಲೆಗಳು) ಅಭಿವೃದ್ಧಿಗೆ ಅವಶ್ಯವಾದ ಒಂದು ಐತಿಹಾಸಿಕ-ಧಾರ್ಮಿಕ- ಕಲಾಪ್ರಜ್ಞೆಯು, ಇದರಿಂದ ಒಡಮೂಡಬಹುದೆಂಬ ಭರವಸೆಯು ನಮಗಿದೆ. ಈ ಗ್ರಂಥದಲ್ಲಿ ಜಾನಪದ ಹಂತದ ಪರಿಶೀಲನೆಯು ಮುಖ್ಯ ವಾಗಿರಬಹುದಾದರೂ ಇಲ್ಲಿಯ ತಾಂತ್ರಿಕಪ್ರಜ್ಞೆ ಕೂಡ ನಮ್ಮ ಕಲಾಪ್ರಕಾರಗಳಿಗೆ ದರ್ಶನಶಕ್ತಿ (visual strength)ಯನ್ನು ಒದಗಿಸಬಲ್ಲುದು. ಅಲ್ಲದೆ ಇಂಥ ಪ್ರಯತ್ನಗಳಲ್ಲಿ ಪ್ರಾದೇಶಿಕ ವಸ್ತು - ಎಷ್ಟರಮಟ್ಟಿಗೆ ಮುಖ್ಯವೋ ಅಷ್ಟೇ ತಾಂತ್ರಿಕ ಪ್ರಜ್ಞೆಯೂ ಮುಖ್ಯ ವಾಗಿರುತ್ತದೆಯಷ್ಟೆ. ಆದುದರಿಂದ ಈ ಗ್ರಂಥವು ನಮಗೆಲ್ಲಾ ಪ್ರಯೋಜನಕಾರಿಯೆಂಬ ಭರವಸೆಯು ನಮಗಿದೆ.

ಎಸ್. ಎಂ. ಪಂಡಿತ

(ಅಧ್ಯಕ್ಷರು)
ಲಲಿತ ಕಲಾ ಅಕಾಡೆಮಿ

# ತುಳುವರ ಆಚರಣೆಗಳಲ್ಲಿ ಕಲಾವಂತಿಕೆ

ಸಂಪಾದಕ :

**ಕ.ನೆಂ.ರಾಜಗೋಪಾಲ**



**ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-1**

**1989**

Artifacts of Tuluva Rituals : (ತುಳುವರ ಆಚರಣೆಗಳಲ್ಲಿ ಕಲಾವಂತಿಕೆ) collection
of Research Articals by scholars :
First Edition 1989 : 1000 copies. PP. 128 + 24 = 152.

Financial Assistance :
Lalithakala Academy, New Delhi, India

R.M. HADAPAD
Chairman
Karnataka LaLithakala Academy

Publisner :
B.C. VENKATAPPA
Registrar
Karnataka Lilithakala Academy

Printers :
Pallavi printers
No.1 ,3rd Cross, Balajinagar
Bangalore-29

Pictures :
Brindhavan Printers and Publishers Pvt. Ltd.
12/13, Lalbhag Fort Road
Bangalore-560004

ಬೆಲೆ : ಇಪ್ಪತ್ತೈದು ರೂಪಾಯಿ

ಮುಖಪುಟದ ಕಲೆ : ಆರ್.ಎಂ. ಹಡಪದ

# ಮೊದಲ ಮಾತು

ಲಲಿತ ಕಲೆಗಳು ಜನಜೀವನದ ಸತ್ವವನ್ನು ಒಳಗೊಂಡು ರೂಪಿತವಾಗುತ್ತವೆ. ಅಲ್ಲದೆ ತಮ್ಮದೇ ಆದ ಪ್ರಾದೇಶಿಕತೆಯ ಜೀವಂತತನದಿಂದ ಉಳಿಯುತ್ತವೆ ಹಾಗೂ ಬೆಳೆಯುತ್ತವೆ. ನಮ್ಮ ಇಂದಿನ ಪರಿಸ್ಥಿತಿಯಲ್ಲಿ ಜಗತ್ತಿನ ಎಲ್ಲಾ ಕಲೆಗಳ ಸ್ವರೂಪ ಮತ್ತು ಪರಿಣಾಮಗಳನ್ನು ಅಧ್ಯಯನ ಮಾಡುವ ನಾವು "ನಮ್ಮ ಸ್ವಂತಿಕೆ ಮತ್ತು ಕಲೆಗಳನ್ನು ಪರಿಶೀಲಿಸುವ ಕ್ರಮ"ಗಳಲ್ಲಿ ಹಗುರವಾದ ಧೋರಣೆಯಿಂದ ಕೂಡಿರುತ್ತೇವೆಂಬ ಅನುಮಾನವು ಪ್ರಚಲಿತವಾಗಿ ಕಂಡುಬರುತ್ತಿದೆ. ಆದುದರಿಂದ ನಮ್ಮ ಕಲೆಗಳ ಒಂದು ಆಧುನಿಕ-ಸೂಕ್ಷ್ಮ ಪರಿಶೀಲನೆಗೆ ಗುರುತಾಗಿರುವಂತೆ ಕೃತಿಯೊಂದನ್ನು ಪ್ರಕಟಿಸಲು ನಮ್ಮ ಅಕಾಡೆಮಿಯು ಉದ್ದಿಶ್ಯಪಟ್ಟಿತು. ಇದಕ್ಕೆ ನಮ್ಮ ಸಮಿತಿಯೂ ತನ್ನ ಬೆಂಬಲವನ್ನು ನೀಡಿತು.

ಈ ಗ್ರಂಥದ ಪ್ರಕಟಣೆಗಾಗಿ ನಾವು ಕೇಂದ್ರ ಅಕಾಡೆಮಿಯ ನೆರವನ್ನು ಕೋರಿ ವಿವರಗಳನ್ನು ನೀಡಿದೆವು. ಕೂಡಲೆ ಅವರ ನೆರವೂ ದೊರಕಿ ಕಾರ್ಯ ಸಾಧನೆಯು ನೇರವಾಯಿತು. ಫಲವಾಗಿ ಈ ಕೃತಿ "**ತುಳುವರ ಆಚರಣೆಗಳಲ್ಲಿ ಕಲಾವಂತಿಕೆ**"ಯು ರೂಪತಾಳಿದೆ.

ಇದರ ಪ್ರಯೋಜನವನ್ನು ಕುರಿತು ಹೆಚ್ಚಿಗೆ ಹೇಳಬೇಕಿಲ್ಲವಾದರೂ ನಮ್ಮ ವಿದ್ವಾಂಸರೂ, ಕಲಾವಿದರೂ ಕೂಡಿ ಪರಿಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅಧ್ಯಯನವನ್ನು ಬೆಳೆಸುವಲ್ಲಿ, ಪೂರ್ಣಲಾಭವನ್ನು ಪಡೆಯುವ ಸಾಧ್ಯತೆಯಿದೆ.

ಈ ಕೃತಿಯ ಪ್ರಯೋಜನವನ್ನು ಕೊಂಚ ಬಿಡಿಸಿ ಹೇಳಬಹುದು-ನಮ್ಮ ಕಲೆಗಳ(ಚಿತ್ರ-ಶಿಲ್ಪ: ದರ್ಶನ ಕಲೆಗಳು) ಅಭಿವೃದ್ಧಿಗೆ ಅವಶ್ಯವಾದ ಒಂದು ಐತಿಹಾಸಿಕ-ಧಾರ್ಮಿಕ-ಕಲಾ ಪ್ರಜ್ಞೆಯು, ಇದರಿಂದ ಒಡಮೂಡಬಹುದೆಂಬ ಭರವಸೆಯು ನಮಗಿದೆ. ಈ ಗ್ರಂಥದಲ್ಲಿ ಜಾನಪದ ಹಂತದ ಪರಿಶೀಲನೆಯು ಮುಖ್ಯವಾಗಿರಬಹುದಾದರೂ ಇಲ್ಲಿಯ ತಾಂತ್ರಿಕ ಪ್ರಜ್ಞೆ ಕೂಡ ನಮ್ಮ ಕಲಾಪ್ರಕಾರಗಳಿಗೆ ದರ್ಶನ ಶಕ್ತಿ (visual strength)ಯನ್ನು ಒದಗಿಸಬಲ್ಲುದು. ಅಲ್ಲದೆ ಇಂಥ ಪ್ರಯತ್ನಗಳಲ್ಲಿ ಪ್ರಾದೇಶಿಕ ವಸ್ತು-ಎಷ್ಟರಮಟ್ಟಿಗೆ ಮುಖ್ಯವೋ ಅಷ್ಟೇ ತಾಂತ್ರಿಕಪ್ರಜ್ಞೆಯೂ ಮುಖ್ಯವಾಗಿರುತ್ತದೆಯಷ್ಟೆ. ಆದುದರಿಂದ ಈ ಗ್ರಂಥವು ನಮಗೆಲ್ಲಾ ಪ್ರಯೋಜನಕಾರಿಯೆಂಬ ಭರವಸೆಯು ನಮಗಿದೆ.

ನಮ್ಮ ವಿದ್ವಾಂಸರಲ್ಲಿ ಒಂದು ವಿಶೇಷ ಭಿನ್ನಹವನ್ನು ಈ ಮೂಲಕ ಮಾಡುತ್ತೇವೆ: ಈವರೆಗಾಗಲೇ ನಮ್ಮ ದೇಶದ ಪ್ರಸಂಗದಲ್ಲಿ ಭಾರತೀಯ ರಂಗಭೂಮಿ, ಭಾರತೀಯ ನೃತ್ಯ ಕಲೆ ಮತ್ತು ಜಾನಪದ ಕಲೆಗಳು, ಮುಂತಾದುವುಗಳಲ್ಲಿ ವಿಶೇಷ ಅಧ್ಯಯನಗಳು ಜರುಗುತ್ತಿದ್ದು ಅನೇಕ ಗ್ರಂಥಗಳೂ ಪ್ರಕಟವಾಗಿವೆ; ಆಗುತ್ತಲೂ ಇವೆ. ಹಾಗೆಯೇ ಈ ಗ್ರಂಥದ ನಿಯೋಜನದಂತೆ ಚಿತ್ರ ಮತ್ತು ಶಿಲ್ಪ ಕಲೆಗಳನ್ನು ಕುರಿತ ಹತ್ತು ವಿದ್ವಾಂಸರು ತಮ್ಮ ತಮ್ಮ ಆಯ್ದ ವಿಷಯಗಳ ಮೂಲಕ ಅಧ್ಯಯನವನ್ನು ಆಧುನಿಕ ರೀತಿಯಲ್ಲಿ (ಕ್ಷೇತ್ರಕಾರ್ಯದಿಂದ) ಸಾಧಿಸಿದ್ದಾರೆನ್ನಬಹುದು. ಇಂತಹ ಪ್ರಯತ್ನವು

ಇಷ್ಟು ಸೂಕ್ಷ್ಮವೂ ಆಳವೂ ಆದ ರೀತಿಯಲ್ಲಿ ನಡೆದಿರುವುದನ್ನು ಬೇರೆಲ್ಲಿಯೊಗಲಿ ಕಾಣದಿರಲೂಬಹುದು.(ಅದರಲ್ಲಿಯೂ ಶುದ್ಧ ದೃಶ್ಯ ಮಾಧ್ಯಮವನ್ನು ಕುರಿತ ಅಧ್ಯಯನವು ಇಲ್ಲವೆಂದೇ ಹೇಳಬಹುದು) ಆದುದರಿಂದ ನಮ್ಮ ವಿದ್ವಾಂಸರೂ, ಕಲಾವಿದರೂ ಹಾಗೂ ಕಲಾಪ್ರೇಮಿಗಳೂ ಈ ಕೃತಿಯನ್ನು ಸ್ವಾಗತಿಸುವುದರ ಮೂಲಕ ಮುಂದಿನ ಹಂತದ ಅಧುನಿಕವೂ, ವೈಜ್ಞಾನಿಕವೂ ಆದ ಪರಿಶೀಲನೆಗೆ ಬೆಂಬಲ ನೀಡುವರೆಂಬ ಆಶಯವನ್ನು ನಾವು ಹೊಂದಿರುತ್ತೇವೆ.

**ಆರ್. ಎಂ. ಹಡಪದ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ

**Art is governed not by Time but by cultural development.**
**-D M.Field**

# ಪ್ರಸ್ತಾವನೆ

ದ.ಕನ್ನಡ ಜಿಲ್ಲೆಯು ಕರ್ನಾಟಕದ ಕರಾವಳಿ-ಕಡಲ ತೀರಪ್ರದೇಶವೆಂದು ಪ್ರಸಿದ್ಧವಾಗಿದೆ. ಇಲ್ಲಿಯ ಜನಜೀವನವು ಹಲವು ರೀತಿಯಲ್ಲಿ ವಿಶಿಷ್ಟವಾಗಿದೆ-ಇಲ್ಲಿಯ ವಿದ್ಯಾವಂತಿಕೆಯು ಬೇರೆಯ ಜಿಲ್ಲೆಗಳಿಗಿಂತ ಅಧಿಕವಾಗಿರುವುದಾದರೂ ಹಳೆಯ ಸಂಸ್ಕೃತಿಯ ಅಂಶಗಳು ಇನ್ನೂ ಬದುಕುತ್ತಿವೆ. ಕಡಲಿನ ದೆಸೆಯಿಂದಾಗಿ ಪರದೇಶಗಳಿಗೆ ಇದೊಂದು ತಂಗುದಾಣದಂತೆ ಐತಿಹಾಸಿಕವಾಗಿ ಉಳಿದುಕೊಂಡು ಬಂದಿದೆ. ಅಲ್ಲದೆ ಇಲ್ಲಿಯ ಬುಡಕಟ್ಟು ಜನಾಂಗಗಳು ಹೊರಗಿನ ಪ್ರಭಾವಗಳಿಗೆ ಒಳಗಾದರೂ ತನ್ನ ಬೃಹತ್ ಶಿಲಾಯುಗದ ಲಕ್ಷಣಗಳನ್ನೂ ಸುಂದರವಾಗಿಸಿ ಕಾಪಾಡಿಕೊಂಡು ಬಂದಂತಿದೆ.

ಇಲ್ಲಿಯ ಬಂಟ-ಬಿಲ್ಲವ, ಮೊಗೇರ, ಬೈರ, ಕುಡುಂಬಿ, ಕೊರಗ, ನಲಿಕೆ, ಪಾಣಾರ ಮೊದಲಾದವರು ಬಯಲುಸೀಮೆಯಿಂದ ಬೇರ್ಪಡಿಸಿರುವ ಘಟ್ಟಸಾಲುಗಳನ್ನು ನಂಬಿಕೊಂಡು ಕಡಲ ಕಡೆಗಿನ ಇಳಿಜಾರಿನಲ್ಲಿ ವ್ಯವಸಾಯವನ್ನೂ ಮಾಡಿಕೊಂಡು ಬದುಕುತ್ತಿರುವಂತೆ ಕಂಡುಬರುತ್ತದೆ. ಇಲ್ಲಿನ ಗದ್ದೆ-ತೋಟಗಳಲ್ಲಿ ದುಡಿಯುವವರು ಕೆಳದರ್ಜೆಯ ನಿರ್ಗತಿಕ ಜನರೆಂಬುದನ್ನು ಮರೆಯಬಾರದು. ಆದರೆ ಇಂಥವರ ಪುರಾತನ ನಂಬಿಕೆಗಳು ಗಾಢವಾಗಿ ಪ್ರಭಾವಕಾರಿಯಾಗಿ ಎಲ್ಲಾ ವರ್ಗದ ಜನರನ್ನೂ ಆಕರ್ಷಿಸುತ್ತಾ ಬಂದಿವೆ. ಇಲ್ಲಿಯ ಆಚರಣೆಗಳನ್ನು ಇಲ್ಲಿಯ ಪ್ರಾದೇಶಿಕವಾದ ಸಂಸ್ಕೃತಿಯೆಂದೂ ಗುರುತಿಸಬಹುದಾಗಿದೆ. ಇದನ್ನೇ ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯ ಒಂದು ರೂಪವೆಂದೂ ಪರಿಚಯಿಸಬಹುದಾಗಿದೆ,

ಇಲ್ಲಿಯ ಆಚರಣೆಗಳಲ್ಲಿ ಕಲಾವಂತಿಕೆಯ ಅಂಶಗಳನ್ನು ಗುರುತಿಸುವ ಹಾಗೂ ದಾಖಲಿಸುವ ಸಲುವಾಗಿ ಹತ್ತು ವಿಷಯಗಳನ್ನು ಸಧ್ಯಕ್ಕೆ ಗಮನಿಸಲಾಗಿದೆ. ಇವುಗಳಲ್ಲಿ ನಾಗಾರಾಧನೆ ಮತ್ತು ಭೂತಾರಾಧನೆಗಳು ಮುಖ್ಯವಾಗಿ ಇವು ಒಳಗೊಳ್ಳುವ ಅಲಂಕರಣ ಮತ್ತು ಚಿತ್ರಣಗಳ ವಿವರಗಳನ್ನು ಈ ಗ್ರಂಥದಲ್ಲಿ ಪರಿಶೀಲಿಸುವ ಪ್ರಯತ್ನವನ್ನೂ ಮಾಡಲಾಗಿದೆ. ಇದಕ್ಕಾಗಿ ಪ್ರಾದೇಶಿಕತೆಯ ಗಾಢ ಪರಿಚಯವಿರುವ ವಿದ್ವಾಂಸರನ್ನು ಕೇಳಿಕೊಂಡುದರ ಫಲವಾಗಿಯೇ ಈ ಲೇಖನಗಳೂ ಅವುಗಳಿಗೆ ಸಂಬಂಧಿಸಿದ ಚಿತ್ರಗಳೂ ಇದರಲ್ಲಿವೆ.

ಇವುಗಳೆಲ್ಲಾ ಮುಖ್ಯವಾಗಿ ಜನಪದ ಆಚರಣೆಗಳ ಅಧ್ಯಯನವೆಂದು ಹೇಳುವುದು ಒಂದು ಬಗೆಯಾದರೆ ನಮ್ಮ (ಇಲ್ಲಿಯ) ಸಾಂಪ್ರದಾಯಿಕತೆಯಲ್ಲಿ ಹುದುಗಿರುವ ಕಲೆಗಳ ದರ್ಶನವೂ ಆಗಿರುವುದು ಮತ್ತೊಂದು ಮುಖ್ಯ ವಿಚಾರವಾಗಿದೆ. ಈ ಎರಡನೆಯ ಬಗೆಯನ್ನೇ ಈ ಗ್ರಂಥದ ದಾಖಲಾತಿಗೆ ಗಮನಿಸಲಾಗಿದೆ. ಇವರ ನಾಗಮಂಡಲದ ಚಿತ್ತಾರ ಮತ್ತು ಇದು ಉಳಿದುಕೊಂಡುಬಂದಿರುವ ಬಗೆಯನ್ನೂ ಗುರುತಿಸಲಾಗಿದೆ. ಇವರ ಭೂತಾರಾಧನೆಯಲ್ಲಿ ಧಾರ್ಮಿಕವಾಗಿ ಮೆರೆಯುವ ಬಣ್ಣಗಾರಿಕೆ, ಮುಖವಾಡಗಳು, ಶಿಲ್ಪಗಳು(ಆಚರಣೆಯಿಂದ ಬೇರ್ಪಡಿಸಲಾಗದ ರೀತಿಯಲ್ಲಿವೆ); ಇವುಗಳನ್ನು ಅಲುಗಿಸಲಾಗದ ಜಾತಿಧರ್ಮಗಳೂ ಸಹ ಹೊಂದಿಕೊಂಡಂತೆ ಉಳಿದಿವೆ. ಆದುದರಿಂದ ಇಲ್ಲಿಯವರ ಪ್ರಾದೇಶಿಕವಾದ ಭಿತ್ತಿಚಿತ್ರಗಳು; ಇತರ ಸಹಕಾರಿ ಕಲೆಗಳು ಮತ್ತು ನಂಬಿಕೆಗಳಿಂದ ಕಥಾನಕಗಳಾಗಿ ಮೆರೆಯುವ

ಗೊಂಬೆಯಾಟವು ಪುರಾಣಪುಣ್ಯಕಥೆಗಳೂ ಆಗಿರುವುದನ್ನು ಕಡೆಗಣಿಸುವಂತಿಲ್ಲವಷ್ಟೆ. ಇಲ್ಲಿಯ ಅತ್ಯಂತ ಪ್ರಸಿದ್ಧವಾದ ಯಕ್ಷಗಾನ ಬಯಲಾಟವು ಈ 'ಗೊಂಬೆಯಾಟಕ್ಕೆ' ಜೀವವನ್ನು ನೀಡಿದಂತೆ ಕಂಡುಬಂದರೂ ಉಳಿದ ಜಾನಪದ ಕಲೆಗಳಂತೆ ಮತ್ತು ಯಕ್ಷಗಾನ ಬಯಲಾಟದಂತೆ ಉಳಿದಿರಬಹುದಾಗಿದೆ. ಬಹುಶ ಯಕ್ಷಗಾನವು ರೂಢಿಸಿಕೊಂಡ ಶಿಷ್ಟ ಸಾಹಿತ್ಯದ, ಸಂಗೀತದ ಮತ್ತು ನೃತ್ಯಾಂಶಗಳ ಪ್ರಭಾವಗಳನ್ನೂ ಒಳಗೊಂಡಿರುವುದನ್ನು ಗಮನಿಸಿದಲ್ಲಿ ಅದರ ಒತ್ತಂಬವೆಲ್ಲಾ ಈ ಗೊಂಬೆಯಾಟದಲ್ಲೂ ಕಂಡುಬರುವಂತೆ ತೋರುತ್ತದೆ. ಒಟ್ಟಿನಲ್ಲಿ ಇದೂ ಒಂದು ಭಿತ್ತಿ ಚಿತ್ರಣದಂತೆ ಹೆಚ್ಚಾಗಿ ನಮ್ಮ ಕಲೆಗಳು ಹಾಗೂ ಧರ್ಮಗಳಿಗೆ ಒಳಗಾಗಿರುವುದೇ ಆಗಿದೆ.

ಈ ಹತ್ತು ಲೇಖನಗಳಲ್ಲಿ ಒಂದು ಅನುಕೂಲ ಕ್ರಮವನ್ನೂ ಗುರುತಿಸಬಹುದಾಗಿದೆ: ಹೇಗೆಂದರೆ ಮೊದಲಿಗೆ ಜನಪದ ಅಲಂಕರಣ, ಸಿರಿಜಾತ್ರೆ, ನಂತರ ನಾಗಮಂಡಲ, ಮೆಕ್ಕೆ ಕಟ್ಟೆಯ ಉರುಗಳು, ಭಿತ್ತಿಚಿತ್ರಗಳು, ಗೊಂಬೆಯಾಟ, ಭೂತಾರಾಧನೆಯ ಅಲಂಕರಣಗಳು, ಮುಖವಾಡಗಳ ಒಂದು ವಿಶೇಷ ಅಧ್ಯಯನ-ಹೀಗೆ ವಿದ್ವಾಂಸರಿಂದ ಈ ಗ್ರಂಥಕ್ಕಾಗಿಯೇ ನಡೆಸಿದುದರ ಫಲವಾದ ಸಂಶೋಧಕ ಲೇಖನಗಳು ಸೇರಿವೆ.

ಭೂತಾರಾಧನೆಯ ಪರಿಶೀಲನೆಯು ಇಲ್ಲಿ ಒಂದು ವಿಶಿಷ್ಟ ರೀತಿಯಲ್ಲಿ ನಡೆದಿರುತ್ತದೆ: ಹೇಗೆಂದರೆ, 1) ಸ್ತ್ರೀಭೂತಗಳು, 2) ಪುರುಷ ಭೂತಗಳು, 3) ಪ್ರಾಣಿ ಹಾಗೂ ಇತರ ರೀತಿಯ ಭೂತಗಳು-ಎಂದು ವಿಭಜಿಸಿ ನೋಡಲಾಗಿದೆ. ಇದರಿಂದಾಗಿರುವ ಅನುಕೂಲಗಳನ್ನು ಯಾರು ಬೇಕಾದರೂ ಗಮನಿಸಬಹುದು. ಈ ಆಚರಣೆಗಳ ಬಹು ಹಿಂದಿನ ಗುಣಗಳನ್ನು ಗುರುತಿಸಲು ಇದರಿಂದ ಅನುಕೂಲವಾಗಿದೆ. ಅಂದರೆ ಇಲ್ಲಿಯ ಬದುಕಿನ ವಿಕಸನವನ್ನು ಜಾತಿ, ಧರ್ಮ ಮತ್ತು ಹೊರಗಿನ ಪ್ರಭಾವಗಳನ್ನು ಹೊರಪಡಿಸಿ ಪರಿಶೀಲಿಸಬಹುದೆಂದು ಕಂಡುಕೊಳ್ಳಲಾಗಿದೆ. ಮುಖ್ಯವಾಗಿ ನಾಗಾರಾಧನೆ ಮತ್ತು ಭೂತಾರಾಧನೆಗಳೆರಡೂ ನಮ್ಮ ಇತಿಹಾಸದ ಮೊದಲ ಹಂತದಿಂದಲೂ ಬಂದಿರಬೇಕೆಂಬ ಅನುಮಾನಕ್ಕೆ ಸಮರ್ಥನೆ ದೊರಕುವಂತಾಗಿದೆ. ಇಂತಹ ವೈಜ್ಞಾನಿಕವಾದ ಉದ್ದಿಶ್ಯದಿಂದ ಈ ಲೇಖನಗಳನ್ನು ಗಮನಿಸಲಾಗಿದೆ. ಇವರಿಂದ ಮತ್ತೊಂದು ಪ್ರಯೋಜನವೆಂದರೆ ನಮ್ಮ ಕಲೆಗಳ ನ್ಯಾಯವಾದ ತಳಹದಿಯನ್ನು ಗುರುತಿಸುವುದಕ್ಕೂ ಸಾಧ್ಯವಾಗುವುದೇ ಆಗಿದೆ. **ಐದು ಬಣ್ಣ**ದ ಹುಡಿಗಳಿಂದ ಚಿತ್ರಗಳ ರಚನೆ, ಅಲಂಕಾರಗಳು(ಶಿಲ್ಪಗಳೂ ಹೀಗೆಯೇ ಐದು ಬಣ್ಣಗಳಿಂದ ರೂಪ ತಾಳಿರುವುದು) ಬಹುಪುರಾತನವಾದ ಅಂಶಗಳನ್ನು ಒಳಗೊಳ್ಳುತ್ತವೆ-ಎಂಬ ಸತ್ಯವು ಪ್ರಯೋಜನಕಾರಿಯಾದುದೆಂದು ನಂಬಿರುತ್ತೇನೆ.

ಇಷ್ಟರಿಂದಲೇ ದ.ಕನ್ನಡದ ಜನಜೀವನವು ಕಾಪಾಡಿಕೊಂಡು ಬಂದಿರುವ ಎಲ್ಲಾ ಬಗೆಗಳನ್ನೂ ಮುಗಿಸಿಬಿಟ್ಟಿದ್ದೇವೆಂದು ನಮಗನ್ನಿಸಿರುವುದಿಲ್ಲ. ಆದರೆ ಇಲ್ಲಿ ಕಲೆಗಳಿಗೆ ಸಂಬಂಧಿಸಿದಂತೆ ಮುಖ್ಯವಾದುದನ್ನು ಗುರುತಿಸಿದ್ದೇವೆಂಬ ಭರವಸೆಯಿದೆ. ಇಂತಹ ಪ್ರಯತ್ನದ ಮಿತಿಗಳೂ ಸದ್ಯಕ್ಕೆ ಇರುತ್ತವೆಯೆಂಬುದನ್ನೂ ಅರಿತು ನಮ್ಮ ವಿದ್ವಾಂಸರು ಪ್ರಯತ್ನಶೀಲ

ರಾಗಬಹುದೆಂಬ ನಂಬಿಕೆಯನ್ನೂ ತಾಳಿರುತ್ತೇವೆ. ಈ ಆಚರಣೆಗಳೆಲ್ಲವೂ ಎಲ್ಲಾ ಬಗೆಯ ಕಸುಬುಗಾರಿಕೆಯಿಂದ ರಕ್ಷಿತವಾಗಿವೆ-ಇಂಥ ಹೊಣೆಗಾರಿಕೆಯನ್ನು ಹೊತ್ತಿರುವವರು ಪರವ-ಪಂಬದ, ಬೆಲ್ಚಪ್ಪಾಡಿ, ನಲ್ಕೆ, ಪಾಣಾರ, ಕೊರಗ, ಮೊಗೇರ(ಬಂಟ-ಬಿಲ್ಲವರು ಇಲ್ಲಿಯ ಧನಿಕರು) ಮುಂತಾದ ದುಡಿಮೆಯ ವರ್ಗದವರೆಂದೂ ಹೇಳಬಹುದಾಗಿದೆ. ಇವರ ಹಿಂದುಳಿದಿರುವಿಕೆಯೂ ಇಂತಹ ಆಚರಣೆಗಳ ಉಳಿವಿಗೆ ಕಾರಣವಾಗಿದೆಯೆಂದರೂ ತಪ್ಪಾಗಲಾರದು. ಆದರೆ, ಇವರ ದುಡಿಮೆಯನ್ನು ನಂಬಿಕೊಂಡಿರುವ ವಿದ್ಯಾವಂತ ಮೇಲು ವರ್ಗವೂ ಇಲ್ಲದಿಲ್ಲ. ಆದರೆ ಅಂಥವರು ಅರೆಬರೆ ನಂಬಿಕೆಯಿಂದ ಈ ಆಚರಣೆಗಳಿಗೆ ಬೆಂಬಲ. ನೀಡುತ್ತಿರುವವರೇ ಆಗಿದ್ದಾರೆ. ಇಂತಹವರಲ್ಲಿ ವಿದ್ಯಾವಂತ ಕಲಾವಿದರು ತಮ್ಮ ರಚನೆಗಳಿಗೆ ವಸ್ತು ವೈವಿಧ್ಯವನ್ನು ಈ ಕೆಳವರ್ಗದ ಬದುಕಿನಲ್ಲಿ ಕಾಣಲೂ ಅವಕಾಶವಿರುತ್ತದೆಯೆಂಬುದು

ಈ ಸಂಶೋಧಕರು ಕಲಾವಿದರಲ್ಲ; ಆದರೆ ಆಧುನಿಕವಾದ ಸಂಶೋಧನೆಯಲ್ಲಿ ರೀತಿನೀತಿಗಳನ್ನು ಚೆನ್ನಾಗಿ ಅರಿತವರಾಗಿದ್ದಾರೆ. ಅಲ್ಲದೆ ಈ ಪ್ರದೇಶದ ಬದುಕಿನಲ್ಲಿ ಪಾಲುದಾರರೂ ಆಗಿರುತ್ತಾರೆ-ಎಂಬುದು ವಿಶೇಷ ಅರ್ಹತೆಯೂ ಆಗಿರುತ್ತದೆ. ನಮ್ಮ ಅಕಾಡೆಮಿಯ ಇಂದಿನ ಅಧ್ಯಕ್ಷರೂ ಸುಪ್ರಸಿದ್ಧ ಕಲಾವಿದರೂ ಆದ **ಆರ್.ಎಂ. ಹಡಪದ್** ಅವರ ನಿಯೋಜಿತ ನೆರವಿನಿಂದಾಗಿ ಈ ಕೃತಿಯು ಸಂಪಾದನೆ ಸಾಧ್ಯವಾಗಿರುತ್ತದೆ. **ಕೇಂದ್ರ ಲಲಿತ ಕಲಾ ಅಕಾಡೆಮಿ**ಯೂ ಇಂಥ ಒಂದು ಗ್ರಂಥದ ಅವಶ್ಯಕತೆಯನ್ನು ಅರಿತು ಧನಸಹಾಯವನ್ನು ಮಾಡಿರುತ್ತದೆ. ಆದುದರಿಂದ ಇವರಿಗೂ ಈ ಸಂಸ್ಥೆಗಳ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ. ಈ ಪ್ರಯತ್ನದಲ್ಲಿ ತೊಡಗಿದ ಇಲ್ಲಿಯ ಲೇಖಕರಿಗೂ, ಸಮಯೋಚಿತ ನೆರವಾದ ಶ್ರೀ ಗೋವಿಂದ ಪೈ ಸ್ಮಾರಕ ಸಂಸ್ಥೆ(ಉಡುಪಿ)ಯ ನಿರ್ದೇಶಕರಾದ ಪ್ರೊ. ಕು.ಶಿ. ಹರಿದಾಸಭಟ್ಟರಿಗೂ, ತುಳು ಲೆಕ್ಸಿಕನ್ ಸಂಪಾದಕರಾದ ಡಾ. ಯು.ಪಿ. ಉಪಾಧ್ಯಾಯ ದಂಪತಿಗಳಿಗೂ, ಇನ್ನೂ ಹಲವು ಬಗೆಯಲ್ಲಿ ನೆರವಾದ ಗೆಳೆಯ ಎಸ್.ಎ. ಕೃಷ್ಣಯ್ಯ, ರಿಸರ್ಚರು-ಅವರಿಗೂ, ಮಂಗಳ ಗಂಗೋತ್ರಿಯ ನಿರ್ದೇಶಕರಾದ ಡಾ. ವಿವೇಕ ರೈ ಅವರಿಗೂ ನಮ್ಮ **ಲಲಿತಕಲಾ ಅಕಾಡೆಮಿ**ಯ ವತಿಯಿಂದ ವಂದನೆಗಳು ಸಲ್ಲುತ್ತವೆ. ಇಂತಹ ಪ್ರಯತ್ನದಲ್ಲಿ ನೆರವಾದ ನಮ್ಮ ಗೆಳೆಯರಾದ ಹಿ.ಚಿ. ಬೋರಲಿಂಗಯ್ಯ (ರಿಜಿಸ್ಟ್ರಾರ್, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ), ಹಾಗೂ ಎನ್.ಪಿ. ಶಂಕರನಾರಾಯಣರಾವ್ ಮತ್ತು ಮಿಥಿಕ್ ಸೊಸೈಟಿ, ಬೆಂಗಳೂರು-2 ಅವರಿಗೂ, ಶ್ರೀಯುತ ಏರ್ಯ ಲಕ್ಷ್ಮೀನಾರಾಯಣ ಆಳ್ವ ಅವರಿಗೂ, ರಾಜ್ಯ ಸರ್ವೇಕ್ಷಣ ಇಲಾಖೆ ಅಧಿಕಾರಿಗಳಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಸಕಾಲದಲ್ಲಿ ಅಚ್ಚು ಮಾಡಿಕೊಟ್ಟಿರುವ ಗೆಳೆಯ ಎಂ. ಶ್ರೀನಿವಾಸ(ಸಂಪಾದಕ 'ಶೂದ್ರ' ಪತ್ರಿಕೆ) ಪಲ್ಲವಿ ಪ್ರಿಂಟರ್ಸ್, ಬೆಂಗಳೂರು-29 ಅವರಿಗೂ, ಚಿತ್ರಗಳನ್ನು ಅಚ್ಚುಮಾಡಿದ ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ. ಬೆಂಗಳೂರು-4 ಅವರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

**-ಸಂಪಾದಕ**

# ವಿಷಯ

# ತುಳುವರ ಆಚರಣೆಗಳಲ್ಲಿ ಜಾನಪದ ಅಲಂಕರಣ

–ಅಮೃತ ಸೋಮೇಶ್ವರ

ವಿವಿಧ ಭಾಷೆ, ಉಪಭಾಷೆಗಳ, ವಿವಿಧ ಮತಧರ್ಮ ಸಂಸ್ಕೃತಿಗಳ ಆಚಾರ ವಿಚಾರಗಳ ವಿವಿಧ ಜನಪದ ಕಲಾಪ್ರಕಾರಗಳ ಆಗರವಾದ ದಕ್ಷಿಣ ಕನ್ನಡ ಹಲವು ನಿಟ್ಟಿನ ಅಧ್ಯಯನಕ್ಕೆ ಅನುಕೂಲ ಕ್ಷೇತ್ರವಾಗಿದೆ. ಈ ಪ್ರದೇಶದಲ್ಲಿ ಇಂದಿಗೂ ಜೀವಂತವಿರತಕ್ಕ ಜನಪದ ಕಲೆಗಳ ಸಂಖ್ಯೆಯೂ ವೈವಿಧ್ಯವೂ ಬೆರಗು ಹುಟ್ಟಿಸುವಂಥದು. ಧಾರ್ಮಿಕ ಕಲಾಪ (ಅಥವಾ ಮತಕ್ರಿಯಾಚರಣೆ) ಗಳೊಂದಿಗೆ ಅವಿನಾಭಾವ ಸಂಬಂಧವಿರಿಸಿಕೊಂಡು ಬೆಳೆದುಕೊಂಡು ಬಂದಿರುವ ಜನಪದ ಕಲಾಪ್ರಕಾರಗಳನ್ನು (ಹಾಡು, ಕುಣಿತ, ವಾದನ, ವೇಷಭೂಷಣ, ಶಿಲ್ಪ, ಇತ್ಯಾದಿ) ಒಂದೊಂದೂ ಪರ್ಯಾಪ್ತವಾದ ಅಧ್ಯಯನಕ್ಕೆ ತಕ್ಕುದಾಗಿದೆ. ಪ್ರಕೃತ, ದ.ಕನ್ನಡದ ಕೆಲವು ಜನಪದ ಕಲಾಪ್ರಕಾರಗಳಲ್ಲಿ ಕಂಡುಬರುವ ಅಲಂಕರಣ ಪದ್ಧತಿಯ ಕುರಿತಾಗಿ ಕೆಲವು ವಿಚಾರಗಳನ್ನು ಇಲ್ಲಿ ಹೇಳಲು ಉದ್ದೇಶಿಸಿದೆ.

ಯಾವುದೇ ಧಾರ್ಮಿಕ ಅಥವಾ ಅರೆಧಾರ್ಮಿಕ ಆಚರಣ ಪದ್ಧತಿಗಳು ತಮ್ಮ ಜನಾಕರ್ಷಣೆಯನ್ನು ಮುಖ್ಯವಾಗಿ ಉಳಿಸಿಕೊಂಡಿರುವುದು, ಅವುಗಳಲ್ಲಿ ಏರಕಗೊಂಡಿರುವ ಕಲಾಂಶಗಳಿಂದಲೇ ಎಂದರೆ ತಪ್ಪಿಲ್ಲ. ಯಾವುದೇ ಆಚರಣೆಯ ವಿವರ ಮನಸ್ಸಿನಲ್ಲಿ ಸ್ಫುಟವಾಗಿ ಚಿತ್ರವತ್ತಾಗಿ ದೀರ್ಘಕಾಲ ನಿಲ್ಲಬೇಕಿದ್ದರೆ, ವರ್ಣವೈಖರಿ, ಅಲಂಕಾರ ರಮಣೀಯತೆಗಳೂ ಅತ್ಯಗತ್ಯ. ಯಾವುದೇ ಬಣ್ಣ ಬೆಡಗು ಹಾಡು ಕುಣಿತಗಳಿಂದ ಕೇವಲ ಗಂಭೀರ ಶುಷ್ಕವಾದ ಯಾವ ಧಾರ್ಮಿಕಾಚರಣೆಯೂ ಜನತೆಯ ಸಮಷ್ಟಿ ಮನಸ್ಸನ್ನು ಸಂತುಷ್ಟಿಪಡಿಸದು. ಈ ನಾಡಿನ ಬದುಕನ್ನು ಬಹು ದೀರ್ಘಕಾಲದಿಂದ ನಿರ್ದೇಶಿಸುತ್ತ ಬಂದಿರುವ, ಭಯ ಭಕ್ತಿ ಪ್ರಚೋದಕವಾದ ಭೂತಾರಾಧನಾರಂಗವಂತೂ ಹಲವಾರು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ ವಿಶಿಷ್ಟ ಧಾರ್ಮಿಕ ರಂಗಭೂಮಿಯಾಗಿದ್ದು, ತನ್ನ ಅದ್ಭುತರಮ್ಯ ದೃಶ್ಯಾತ್ಮಕತೆಯಿಂದ ಗಮನಾರ್ಹವಾಗಿದೆ. ನಾಗಮಂಡಲದಂಥ ಇತರ ಆರಾಧನಾ ಕ್ರಮಗಳೂ ಏರುಕೋಲ. ಕುದುರೆಕೋಲ, ಪಿಲಿಪಂಜಿ, ಆಟಿಕಳೆಂಜದಂಥ ಕುಣಿತದ ವೇಷಗಳೂ ಕೆಲವೊಂದು ಬಗೆಯ ವಿಶಿಷ್ಟ ಪ್ರಾದೇಶಿಕ ಅಲಂಕಾರ ವಿಧಾನಗಳನ್ನು ಒಳಗೊಂಡಿವೆ.

ಭೂತದ ಒಂದು ಆರಾಧನಾ ವಿಧಿಯನ್ನು 'ಕೋಲ' ಎಂದೇ ಕರೆಯುತ್ತಾರೆ. 'ಕೋಲ' ಎಂದರೆ ಅಲಂಕಾರವೆಂದೂ ಅರ್ಥ. ತುಳುನಾಡಿನ ಭೂತಗಳ ಅಲಂಕಾರ ವೈಭವವನ್ನು ಕಂಡು ಯಾರಾದರೂ ತಲೆದೂಗಲೇಬೇಕು. ಆಯಾ ಭೂತದ ಸ್ಥಾನಮಾನ ಗುಣ ಸ್ವರೂಪಾದಿಗಳ ದ್ಯೋತಕವಾದ ಮುಖವರ್ಣಿಕೆಯೊಂದಿಗೆ ಭೂತವೇಷಧಾರಿಯನ್ನು ಅತಿ ಮಾನವ ಸ್ತರಕ್ಕೆ ಏರಿಸಲೆಳಸುವ ಅದ್ಭುತರಮ್ಯ ವರ್ಣರಂಜಿತ ವೇಷಭೂಷಣಗಳು ಗರ್ಭೀಕರಿಸಿಕೊಂಡ ಕಲಾತ್ಮಕತೆ ಅನನ್ಯಾದೃಶವಾದದ್ದು. ಆ ವಿಲಕ್ಷಣ ಭೂಷಣವರ್ಣಗಳೂ ವೇಷರೇಖೆಗಳೂ ಬಿಂಬಿಸತಕ್ಕ ಭ್ರಮೆ, ಸಾಂಕೇತಿಕತೆಗಳು ಅಪೂರ್ವವಾದವುಗಳು. ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ಜರುಗುವ ಈ ಭೂತಾರಾಧನಾ ವಿಧಿಗಳಲ್ಲಿ ನಿಸರ್ಗ ಸಹಜವಾಗಿಯೆ ಸುಲಭ

ದಲ್ಲಿಯೆ ಸುತ್ತಲಿನ ಪರಿಸರದಲ್ಲೆ ಸದಾ ದೊರಕುವ ತೆಂಗಿನ ಎಳೆಯಗರಿ. ಕವುಂಗಿನ ಹಾಳೆ, ಬಾಳೆಯ ಪಟ್ಟೆ, ವಿವಿಧ ಹೂಗಳು ಇತ್ಯಾದಿಗಳಿಂದಲೇ ಭೂತ ಕಲಾವಿದರು ನಿರ್ಮಿಸುವ ವೇಷಬಿಂಬಗಳೂ ಇತರ ಸಹಾಯಕ ಸಾಮಗ್ರಿಗಳೂ ಕುತೂಹಲ ಕೆರಳಿಸುತ್ತವೆ.

ಭೂತಗಳು ಪ್ರಾಚೀನವಾದಷ್ಟೂ, ಹಾಗೆಯೇ ಆರಾಧಿಸುವ ಜನವರ್ಗ ಸಂಪ್ರದಾಯಶೀಲ ವಾದಷ್ಟೂ ಪ್ರಕೃತಿಸಹಜವಾದ ಸರಳ ವೇಷಪರಿಕರಗಳು ಹೆಚ್ಚಾಗಿ ಕಂಡುಬರುತ್ತವೆ. ಇದು ದೇಶವಿದೇಶಗಳ ಎಲ್ಲ ಜನಪದ ಕಲಾಸಂದರ್ಭದಲ್ಲಿ ಕಂಡು ಬರುವ ಅಂಶ. ಭೂತ ಗಳು ಅರ್ವಾಚೀನವಾದ ಹಾಗೆ, ಅಂತೆಯೇ ಆರಾಧಿಸುವ ಜನವರ್ಗ ಪ್ರತಿಷ್ಠಿತರಾದ ಹಾಗೆ ಭೂತವೇಷಗಳಲ್ಲೂ ಚಿನ್ನ, ಬೆಳ್ಳಿ, ಕಂಚು ಇತ್ಯಾದಿ ಲೋಹಾಭರಣಗಳೂ ಬಣ್ಣದ ಬಟ್ಟೆಗಳ ತೊಡವುಗಳೂ ಸೇರ್ಪಡೆಯಾಗಿ, ಭೂತವೇಷಗಳು ಹೆಚ್ಚು ವೈಭವೀಕರಿಸಲ್ಪಟ್ಟುದನ್ನೆ ಕಾಣಬಹುದು.

ಮೃದುವಾದ ನಸುಹಸುರು ಬಣ್ಣದ ತೆಂಗಿನ ಎಳೆಯ ಗರಿಗಳಿಂದ ಭೂತಪಾತ್ರಿಗಳು ನಿರ್ಮಿಸಿಕೊಳ್ಳುವ ವೈವಿಧ್ಯಪೂರ್ಣ ಅಲಂಕಾರಗಳು ಕುತೂಹಲಕರವಾಗಿವೆ. ಭೂತವೇಷ ಧಾರಿಯು ಬೆನ್ನಿಗೆ ಕಟ್ಟಿಕೊಳ್ಳುವ 'ಅಣಿ' ಎಂಬ ಪ್ರಭಾವಳಿಯಂಥ ರಚನೆ, ತಲೆಯಲ್ಲಿ ಧರಿ ಸುವ ಮುಡಿ, ತಿರುಗುಬ್ಬೆ, ಕದ್ರಿಮುಡಿ, ಒಲಿಕಿರೀಟೊ ಮೊದಲಾದ ಶಿರೋಭೂಷಣಗಳು, ಅಣಿಗೆ ಸಂವಾದಿಯಾಗಿ ಸೊಂಟದ ಎದುರಿಗೆ ಕಟ್ಟಿಕೊಳ್ಳುವ ಅರ್ಧವೃತ್ತಾಕಾರದ ಜಕ್ಕೆಲಣಿ ಎಂಬ ಸಾಧನ, ಸೊಂಟದ ಸುತ್ತಲೂ ಸುತ್ತಿಕೊಳ್ಳುವ ಕಿರುಗಣೆಯಂಥ ರಚನೆ, ಎದೆಗೆ ಧರಿ ಸುವ ತಿಗಲೆಸವರಿ, ಬೆನ್ನಲ್ಲಿ ಹರಡುವ ಬೆರಿಸವರಿ ಮೊದಲಾದುವನ್ನು ಉದಾಹರಿಸಬಹುದು.

ಭೂತದ ಸ್ವರೂಪ, ಸ್ವಭಾವಗಳನ್ನು ಕಲ್ಪಿಸಿಕೊಂಡು ಅರ್ಧವೃತ್ತಾಕಾರ, ಅಶ್ವತ್ಥ ಎಲೆ ಯಾಕಾರ, ಸ್ತಂಭಾಕಾರ, ಕಲಶಾಕಾರ, ಕವಲುರೆಂಬೆಯಾಕಾರ ಇತ್ಯಾದಿ ಆಕೃತಿಯ ವಿವಿಧ ತಲೆತೊಡವುಗಳನ್ನು ಅತ್ಯಂತ ಕುಶಲತೆಯಿಂದ ತೆಂಗಿನ ಎಳೆಯಗರಿ (ತಿರಿ)ಗಳಿಂದ ಸಿದ್ಧಗೊಳಿ ಸುತ್ತಾರೆ. ಇವುಗಳಿಗೆ ನಿಶ್ಚಿತ ಆಕಾರ ಹಾಗೂ ಸಬಲತೆಯನ್ನು ಒದಗಿಸಲು ತೆಂಗಿನ ಸೋಗೆಯ ನಾರು (ಪಾಂದಾವು) ಬಾಳೆಪಟ್ಟೆ, ತೆಂಗಿನಗರಿಯ ಕಡ್ಡಿ ಇತ್ಯಾದಿಗಳನ್ನು ಈ ರಚನೆಗಳ ಹೆಣಿಗೆ ಹಾಗೂ ಕಟ್ಟುಗಳಿಗೆ ಬಳಸುತ್ತಾರೆ. ತೆಂಗಿನ 'ತಿರಿ' ಗಳನ್ನು ವಿವಿಧ ಆಕೃತಿಗಳಲ್ಲಿ ಕತ್ತರಿಸಿ, ಒಟ್ಟು ಸೇರಿಸಿ ಹೆಣೆದು ಶಿರೋಭೂಷಣಗಳ ವಿನ್ಯಾಸವನ್ನು ಸಿದ್ಧ ಗೊಳಿಸುತ್ತಾರೆ. ವಿವಿದ ಹೂಗಳ, ಹಾಳೆಯ ಹಾಗೂ ಲೋಹದ ತೊಡವುಗಳು, ಈ ಶಿರೋಭೂಷಣಗಳಿಗೂ ಉಳಿದ ಅಲಂಕಾರಗಳಿಗೂ ಒಂದು ಸಮತೋಲನ ಒದಗಿಸಿ ಸಾವ ಯವ ಶಿಲ್ಪದ ಕಲ್ಪನೆಯುಂಟುಮಾಡುತ್ತವೆ.

ಬೆನ್ನಿಗೆ ಬಿಗಿಯುವ ಅಣಿಯು ಭೂತದ ವ್ಯಕ್ತಿತ್ವವನ್ನು ವಿಸ್ತಾರಗೊಳಿಸಿ, ಅತಿಮಾನವ ಕಲ್ಪನೆಯನ್ನುಂಟು ಮಾಡುವಂಥದ್ದಾಗಿದೆ. ತೆಂಗಿನ ತಿರಿ, ಕವುಂಗಿನ ಹಾಳೆ, ಮರದ ಹಲಗೆ, ಲೋಹದ ತಗಡು ಇತ್ಯಾದಿಗಳಿಂದ ನಿರ್ಮಿತವಾಗುವ ಅಣಿಗಳಿವೆ. ತಿರಿಯಿಂದ ಸಿದ್ಧಗೊಳಿಸುವ ಅಣಿಗಳಲ್ಲೂ ಹಲವು ಆಕಾರದವು ಇವೆ. ಕೆಸುವಿನ ಎಲೆಯಾಕೃತಿ, ಆಯತಾಕಾರ, ಅರ್ಧ ವೃತ್ತಾಕಾರ, ನೀಳಾಕಾರ, ಹೆಡೆಯಾಕಾರ, ತ್ರಿಕೋಣಾಕಾರ ಮೊದಲಾದ ರೀತಿಯವುಗಳಿವೆ.

ಅಣಿಯು ವಿಶಾಲವಾದ ಭಿತ್ತಿಯು ತೆಂಗಿನ ತಿರಿಗಳಿಂದ ರಚಿತವಾಗಿದ್ದು, ಅದರ ಪರಿಧಿಯು ವಸ್ತ್ರದ 'ದಂಡಮಾಲೆ' 'ಹೂಮಾಲೆ' 'ಪಾಂಜೊಡಿಕಾಯಿ' ಮೊದಲಾದ ಚಿನ್ನ ಬೆಳ್ಳಿಯ ಅಲಂಕಾರಗಳಿಂದಲೂ ಅಣಿಯು ಬಿಡಲು ವಿವಿಧ ಆಭರಣಗಳಿಂದಲೂ ಹೂಮಾಲೆಗಳಿಂದಲೂ ಅಲಂಕರಿಸಲ್ಪಡುತ್ತದೆ. ಅಣಿಯು ಅಂಚಿನ ಗರಿಗಳು ('ಪರ್ತೆ') ಸೊಗಸಾದ ರೀತಿಯಲ್ಲಿ ಕತ್ತರಿಸಲ್ಪಟ್ಟು ಭೂತಚಿತ್ರದ ಚೌಕಟ್ಟಿಗೆ ಅಪೂರ್ವ ವಿನ್ಯಾಸವನ್ನು ನೀಡುತ್ತವೆ. ಕೆಲವು ಬಾರಿ ಹೀಲಿಯಂತೆ ಚಾಚಿಕೊಳ್ಳುವ ಇವು, ಗರಿ ಬಿಚ್ಚಿ ನಲಿಯುವ ನವಿಲಿನ ಬೆಡಗನ್ನು ತೋರುವುದುಂಟು. ಅಣಿಯ ಹಿಂಬದಿಗೆ ಕೆಲವೊಮ್ಮೆ ವರ್ಣರಂಜಿತವಾದ ತ್ರಿಕೋಣಾಕಾರದ ಬಟ್ಟೆಯನ್ನು ಜೋಡಿಸುವುದುಂಟು.

ಕೆಲವು ವೇಳೆ ಭೂತನರ್ತಕನು ತಲೆಯ ಮೇಗಡೆ ಲೋಹದ ಭೂತಮುಖವಾಡವನ್ನು ಹೊರಬೇಕಾಗಿದ್ದು, ಅದನ್ನು ಬಿಗಿಯುವ ಬೆತ್ತದ ಅಟ್ಟೆಯನ್ನು ತೆಂಗಿನ ಗರಿಯ ಪ್ರಭಾವಳಿ ಯಿಂದ ಅಲಂಕರಿಸುತ್ತಾರೆ. ಇದು 'ಮೊಗ' ಕ್ಕೆ ವಿಸ್ತಾರ ಪರಿವೇಷ ಕೊಟ್ಟು ಅಣಿಯ ಶೋಭೆಯನ್ನು ಹೆಚ್ಚಿಸುತ್ತದೆ.

ದೈವಕ್ಕೆ ಕಟ್ಟುವವನು ತನ್ನ ಸೊಂಟದ ಎದುರಿಗೆ ಕಟ್ಟುವ ವಿಸ್ತಾರವಾದ ಜಕ್ಕೆಲಣಿಯು ಭೂತವೇಷಕ್ಕೆ ಸಮಗ್ರತೆಯನ್ನು ಕೊಡುತ್ತದಲ್ಲದೆ ಸುತ್ತಲೂ ಜಾಲರಿಯಂತೆ ಕೆಳಕ್ಕೆ ಚಾಚಿ ಕೊಳ್ಳುವ ಸಾವಿರಾರು ತಿರಿಯ ಸೀಳುಗಳು ಭೂತನರ್ತನಕ್ಕೆ ಸೊಗಾಸಾದ ತರಂಗಿತತೆಯನ್ನು ಕೊಡುತ್ತವೆ. ಗುಳಿಗನಂಥ ದೈವಕ್ಕೆ ಹೆಚ್ಚಾಗಿ ಅಣಿ ಇಲ್ಲದೆ ಇದ್ದರೂ, ಮೈತುಂಬಾ ತಿರಿಯ ತೊಡವುಗಳು ಆವರಿಸಿರುತ್ತವೆ. ತಿರಿಯ ಎದೆಗವಚ (ತಿಗಲೆಸವೆರಿ) ಜನ್ನಿನ ತಿರಿಯ ಗುಚ್ಛ (ಬೆರಿಸವೆರಿ) ಸೊಂಟಕ್ಕೆ ತಿರಿಯ ಉಡೆ, ನೆತ್ತಿ, ಕೈಕಾಲುಗಳಿಗೆ ತಿರಿಯ ಪುಂಡಾಯಿ, ಕಿವಿಗೆ ತಿರಿಯ ದೊಡ್ಡ ಕುಂಡಲ ಇತ್ಯಾದಿಗಳೂ ಅಚ್ಚ ದೇಸೀ ಸೊಬಗಿನ ತೊಡವುಗಳಾಗಿವೆ. ಜಟಾಧಾರಿ, ಭೈರವ, ಅಣ್ಣಪ್ಪ ಮೊದಲಾದ ದೈವವೇಷದ ತಲೆತೊಡಿಗೆಗಳ ಸುತ್ತಲೂ ತಿರಿಯ ಗರಿಗಳನ್ನು ಸಿಕ್ಕಿಸುವುದಿದೆ. ಕಲ್ಕುಡ, ಪಾಷಾಣ ಮೂರ್ತಿಗಳ ಶಿರೋಭಾಗದ ಶಿಖೆಯಂಥ ತಿರಿಯ ರಚನೆಯೂ ಸೊಗಸಾಗಿದೆ. ಕೆಲವೊಮ್ಮೆ ಕೈಯಲ್ಲಿ ಹಿಡಿಯುವ 'ಕುಂಚಲ' (ಚಾಮರ) ವನ್ನೂ ತಿರಿಯಿಂದ ಸಿದ್ಧಗೊಳಿಸುತ್ತಾರೆ. ಕೇರಳ ಮೂಲವಾದರೂ ದ.ಕನ್ನಡದಲ್ಲಿ ಸಾಕಷ್ಟು ಪ್ರಚಾರದಲ್ಲಿರುವ ವಿಷ್ಣುಮೂರ್ತಿ ದೈವದ ನರ್ತಕನು 'ಒತ್ತೆ ಕೋಲ' ಎಂಬ ಅಗ್ನಿಸೇವೆಯ ಸಂದರ್ಭದಲ್ಲಿ ತೊಡುವ ಸ್ತಂಭಾಕೃತಿಯ ತಿರಿಯ ವಿಶಿಷ್ಟ ತೊಡುಗೆ ನರ್ತಕನ ಭುಜದವರೆಗೆ ವ್ಯಾಪಿಸಿದ್ದು, ನರಸಿಂಹನು ಉದ್ಭವಿಸಿದನೆಂದು ಹೇಳಲಾದ ಸ್ತಂಭವನ್ನು ಪ್ರತಿನಿಧಿಸುತ್ತದೆ.

ತಾಂತ್ರಿಕ ವಿಧಿಗಳೂ ಸೇರ್ಪಡೆಯಾದಂತಿರುವ ಭೂತಾರಾಧನೆಯಲ್ಲಿ ಬಲಿಕರ್ಮವೂ ಒಂದು ಅಂಗವಾಗಿದೆ. ಕೆಲವೆಡೆ ಭೂತಗಳಿಗೆ ರಕ್ತಾಹಾರ ಸಲ್ಲುವುದಿದ್ದರೆ ಕೆಲವೆಡೆ ಓಕುಳಿ ಮಿಶ್ರಿತ ಕೆಂಗೂಳು ಅರ್ಪಿತವಾಗುತ್ತದೆ. ಈ 'ಮುದ್ರೆ' ಯನ್ನು ಇರಿಸುವ, ಬಾಳೆದಿಂಡು ಹಾಗೂ ತೆಂಗಿನ ತಿರಿಯ ರಚನೆಗೆ 'ಬಲಿ' ಎನ್ನುತ್ತಾರೆ. ಬಾಳೆಯ ಹಂಬೆಯ ತುಂಡು ಗಳನ್ನು ಆಯಾ ಭೂತಕ್ಕೆ ಸಂಬಂಧಪಟ್ಟ ವಾಡಿಕೆಯಂತೆ ತ್ರಿಕೋಣ, ಚತುಷ್ಕೋಣ,

ಪಂಚಕೋಣ, ಅಷ್ಟಕೋಣಗಳಲ್ಲಿ (ಕೆಲವೊಮ್ಮೆ 16 ಕೋನಗಳ ಬಲಿಯನ್ನು ಕಟ್ಟುವುದಿದೆ) ಜೋಡಿಸಿ, ಅದಕ್ಕೆ ಕಲಾತ್ಮಕವಾಗಿ ವಿವಿಧ ಅಳತೆಗಳಲ್ಲಿ ಕತ್ತರಿಸಿದ ತೆಂಗಿನ ತಿರಿಗಳನ್ನು ಲಂಬವಾಗಿ (ಹೊರಮುಖವಾಗಿ ಸ್ವಲ್ಪ ಓರೆಯಾಗಿ) ನಿಬಿಡವಾಗಿ ಚುಚ್ಚಿ, ಒಂದು ಅಗಲ ಬಾಯಿಯ ಪಾತ್ರೆಯ ಅಥವಾ ಅರಳಿದ ತಾವರೆಯ ಆಕೃತಿಯನ್ನು ಹೋಲುವ ರಚನೆಯನ್ನು ಮಾಡಿ, ಅದರೊಳಗೆ ಬಾಳೆಯೆಲೆ ಹಾಸಿ ಮುದ್ರೆ (ಚರು) ಯನ್ನು ಬಳಸಿ, 'ಕೋಲು' ಸೊಡರನ್ನು ಹೊತ್ತಿಸುತ್ತಾರೆ. ಬಲಿಯ ಕೋನಕ್ಕೆ 'ಕೋಂಟು' ಎನ್ನುತ್ತಾರೆ. ಇಂಥಿಂಥಾ ದೈವಗಳಿಗೆ ಇಂತಿಷ್ಟೇ ಕೋಂಟಿನ ಬಲಿ ಎಂಬ ನಿರ್ಣಯವಿದೆ.

ಕವುಂಗಿನ ಹಾಳೆ ಭೂತವೇಷಕ್ಕೆ ಒದಗುವ ಇನ್ನೊಂದು ಮುಖ್ಯ ಪ್ರಕೃತಿದತ್ತ ವಸ್ತು. ಹೆಚ್ಚಾಗಿ 'ರಾಜ್ಯಂದೈವ' ಗಳಂಥ ಅಂತಸ್ತಿನ ದೈವಗಳ ಅಣಿ, ಜಕ್ಕೆಲಣಿಗಳನ್ನು ಇದರಿಂದ ಮಾಡುತ್ತಾರೆ. ಕವುಂಗಿನ ಹಾಳೆಗಳನ್ನು ಆರಿಸಿ, ಯುಕ್ತ ಆಕಾರದಲ್ಲಿ ಕತ್ತರಿಸಿ ಜೋಡಿಸಿ ವೇಷಸಾಮಾಗ್ರಿಗಳನ್ನು ಸಿದ್ಧಗೊಳಿಸಿ, ಕೆಂಪು, ಹಳದಿ, ಬಿಳಿ, ಕಪ್ಪು ಬಣ್ಣಗಳಿಂದ ಚಿತ್ರರೇಖೆಗಳನ್ನು ಬಿಡಿಸುತ್ತಾರೆ.

ಕೆಲವು ದೈವಗಳಿಗೆ ಸಾವಿರ ಹಾಳೆಗಳ ತುಂಡುಗಳನ್ನು ಜೋಡಿಸಿದ ಬೃಹತ್‌ಗಾತ್ರದ ಅಣಿಯಾಗಬೇಕೆಂಬ ನಿಯಮವಿದೆ. (ಉದಾ : ಸಜೀವ ಎಂಬಲ್ಲಿಯ ನಾಲ್ಕೈತ್ತಾಯ ದೈವ) ಉಪ್ಪಿನಂಗಡಿಯ ಮಾಕಾಳ್ದಿ ಅಬ್ಬೆಯ ಅಣಿ ಸುಮಾರು 30-40 ಅಡಿ ಎತ್ತರವಾಗಿದ್ದು ಹಾಳೆಯಿಂದ ರಚಿತವಾದ ನೂರಾರು ನಾಗರಹೆಡೆಯಂಥ ವರ್ಣರಂಜಿತ ರಚನೆಗಳು ಅದರ ಭವ್ಯತೆಯನ್ನು ಹೆಚ್ಚಿಸುತ್ತವೆ. ಇದಲ್ಲದೆ, ಅದೇ ದೈವದ ಸುಮಾರು 50 ಅಡಿಯಷ್ಟು ನೀಳವಾದ ಭೀಕರವಾದ ಕೆನ್ನಾಲಗೆಯೂ ಹಾಳೆಯಿಂದಲೇ ನಿರ್ಮಿತವಾಗಿದ್ದು, ಅದನ್ನು ಚಾಪೆಯಂತೆ ಸುರುಳಿ ಸುತ್ತಿ ಬಿಡಿಸುತ್ತಾರೆ.

ಅಣಿ, ಜಕ್ಕೆಲಣಿ ಇತ್ಯಾದಿಗಳಲ್ಲಿ ವಿವಿಧ ಬಣ್ಣಗಳಿಂದ ಹಾಳೆಯ ಮೇಲೆ ಬರೆಯುವ ಚೌಕುಳಿ ವೃತ್ತ, ತ್ರಿಕೋಣ, ಪತಾಕೆ, ಅಶ್ವತ್ಥ ಎಲೆ, ತಾವರೆ, ಆನೆ, ನೆಗಳೆ, ಭೂತಾಕೃತಿ, ಚುಕ್ಕಿ ಗೆರೆಗಳು ಜನಪದ ಚಿತ್ರ ಪದ್ಧತಿಯ ಮಾದರಿಯನ್ನು ಒದಗಿಸುತ್ತವೆ.

ಉಳ್ಳಾಲ್ತಿ ದೈವಕ್ಕೆ ಕೆಲವು ಕಡೆ ಹಾಳೆಯ ಮುಖವಾಡ ಇಟ್ಟು ಹಾಳೆಯದೇ ದೀರ್ಘವಾದ ಕೆನ್ನಾಲಗೆಯನ್ನು ಹೊಂದಿಸುತ್ತಾರೆ.

'ಚಪ್ಪರ್‌ಕೊಂಬು' ಎಂಬ ತಲೆಯ ಕವಲು ತೊಡವನ್ನು ಹಾಳೆಯಿಂದ ಮಾಡುವುದಿದೆ. (ಕೋಟಿ- ಚೆನ್ನಯ, ಮುಗ್ಗೆರ್ಲು ಇತ್ಯಾದಿ) ಮೈಸಂದಾಯ ದೈವದ ಮಹಿಷ ಸೂಚಕವಾದ ಕೊಂಬಿನ ಸಂಕೇತವನ್ನೂ ಹಾಳೆಯಿಂದ ಮಾಡುತ್ತಾರೆ. ಕೊರಗತನಿಯ ದೈವವು ಹಾಳೆಯ ನೀಳವಾದ ಮುಟ್ಟಾಳೆ ಎಂಬ ತಲೆತೊಡವನ್ನು ಧರಿಸುತ್ತದೆ.

ಪಂಜುರ್ಲಿ ಭೂತಕ್ಕೆ ಹಂದಿಯ ಮುಖದ ಆಕಾರದ ಮುಖವಾಡದ, ಗುಳಿಗನಿಗೆ ಕರಾಳವಾಗಿ ಹಲ್ಲು ಕಿರಿಯುವ ಮುಖವಾಡಗಳನ್ನು ಹಾಳೆಯಿಂದ ಸಿದ್ಧಗೊಳಿಸಿ ಮುಖದ ಮೇಲೆ ಇರಿಸುವ ಪದ್ಧತಿ ಇದೆ. ಕಾಲಿಗೆ ಗಗ್ಗರ ಕಟ್ಟುವುದಕ್ಕೆ ಮೊದಲು ಕಾರಪಾಳೆ, ಪಾದಪಾಳೆ ಎಂಬ ಹಾಳೆಯ ರಚನೆಗಳನ್ನು ಕಟ್ಟಿಕೊಳ್ಳುತ್ತಾರೆ, ಭುಜಪಾಳೆ, ಎದೆಪಾಳೆಗಳು ಹಾಳೆಯವೇ

ಎಂಬುದು ಆ ವಸ್ತುಗಳ ಹೆಸರುಗಳಿಂದಲೇ ತಿಳಿಯುತ್ತದೆ. ಈಗ ಕಾಣುವ ಅನೇಕ ಲೋಹದ ಆಭರಣಗಳಿಗೆ ಬದಲಾಗಿ ಹಿಂದೆ ಹಾಳೆಯ ತೊಡವುಗಳನ್ನು ಧರಿಸುತ್ತಿದ್ದರೆಂದು ತಿಳಿಯಬಹುದು.

ತೆಂಗಿನಸೋಗೆ ದಿಂಡಿನ ಸಲಾಕೆಗಳನ್ನು ಅಣಿ ಮುಂತಾದ ಅಲಂಕಾರಗಳಲ್ಲಿ ಬಳಸುವುದಲ್ಲದೆ ಬಿಲ್ಲು, ಬಾಣ, ಶೂಲ, ಖಡ್ಗ, ಇತ್ಯಾದಿಗಳ ಪ್ರತೀಕಗಳನ್ನು ನಿರ್ಮಿಸುವುದರಲ್ಲೂ ಬಳಸುತ್ತಾರೆ. ಅಣಿ. ಜಕ್ಕೆಲಣಿ, ಮೊಗ ಇರಿಸುವ ಅಟ್ಟೆ ಇತ್ಯಾದಿಗಳ ಒಳ ಚೌಕಟ್ಟುಗಳನ್ನು ತಯಾರಿಸಲು ಬಿದಿರಿನ ಸಲಾಕೆ, ನಾಗರಬೆತ್ತ, ಹಾಗೂ ಹುರಿಹಗ್ಗಗಳನ್ನು ಬಳಸುತ್ತಾರೆ. ಮೀಸೆ, ಚವಲ, (ಜೊಂಕುದುರಿ) ಇತ್ಯಾದಿಗಳಿಗೆ ಕತ್ತಾಳೆ ನಾರನ್ನು ಬಳಸುತ್ತಾರೆ.

ಭೂತ ವೇಷಾಲಂಕಾರಕ್ಕೆ ಕವುಂಗಿನ ಹೂ (ಹಿಂಗಾರ) ಕೇಪುಳ, ಮಲ್ಲಿಗೆ, ಕನಕಾಂಬರ ಇತ್ಯಾದಿ ಹೂಗಳನ್ನು ಯಥೇಷ್ಟವಾಗಿ ಬಳಸುತ್ತಾರೆ. ಎಂಥ ಉಗ್ರ ಸ್ವಭಾವದ ಭೂತಗಳಾದರೂ ಪುಷ್ಪಾಲಂಕಾರದ ಸುಕುಮಾರತೆಯನ್ನು ಅಪೇಕ್ಷಿಸುತ್ತವೆ. ತೋಳು, ಎದೆ, ನೆತ್ತಿಗಳನ್ನು ಹೂವಿನ ದಂಡೆಗಳಿಂದ ಸಿಂಗರಿಸುತ್ತಾರೆ. ತಲೆತೊಡವು, ಅಣಿ, ಆಯುಧಗಳಿಗೂ ಹೂವಿನ ಅಲಂಕಾರ ಮಾಡುತ್ತಾರೆ. ಉಳ್ಳಾಲ್ತಿಯಂಥ ದೈವ ಮಲ್ಲಿಗೆ ಹಾರಗಳ ಹೊರೆಯಿಂದ ಬಳುಕುತ್ತಾ ವಿಪುಲವಾದ ಹೂಜಲ್ಲಿಯ ಜಡೆಯ ಐಸಿರಿಯೊಂದಿಗೆ ಮದುಮಗಳ ಪುಷ್ಪವೈಭವದ ಬೆಡಗನ್ನು ಬೀರುತ್ತದೆ.

ಭೂತಾರಾಧನೆಯ ರಂಗಸ್ಥಳವಾದ ಚಪ್ಪರವನ್ನೂ, ಭೂತದ ಮುಖವಾಡ, ಆಯುಧ, ಚವಲಾದಿ ಸಾನ್ನಿಧ್ಯವಸ್ತುಗಳನ್ನು ಇರಿಸುವ 'ಕೊಡಿವಾಡ್' ಸ್ಥಳದ ಮೇಲ್ಕಟ್ಟನ್ನೂ ಭೂತಸಿಂಹಾಸನದ ಪ್ರತೀಕವಾದ ಸಿಂಗದನವನ್ನೂ ಸಿಂಗರಿಸಿ ಭೂತರಾಧನೆಗೆ ತಕ್ಕ ಆವರಣ ಸೃಷ್ಟಿ ಮಾಡುತ್ತಾರೆ. ಚಪ್ಪರಕ್ಕೆ ತೆಂಗಿನ ಅಥವಾ ಈಚಲಿನ ಗರಿಗಳನ್ನು ಹೊದಿಸುತ್ತಾರೆ. ಮಾವಿನ ಚಿಗುರಿನ ತೋರಣವಲ್ಲದೆ ಅಲ್ಲಲ್ಲಿ ತೆಂಗಿನ ತಿರಿಯ ಜಾಲರಿಗಳನ್ನೂ ಇಳಿಬಿಡುವುದುಂಟು. ಹಣ್ಣಡಕೆಗೊನೆ, ಬಾಳೆಗೊನೆ, ಸೀಯಾಳಗೊನೆ ಇತ್ಯಾದಿಗಳನ್ನು ಕಟ್ಟುವುದಿದೆ. ಕೊಡಿಯಡಿಯ ವಸ್ತ್ರಕ್ಕೆ ವೀಳ್ಯದೆಲೆ ಹಿಂಗಾರಗಳ ಅಲಂಕಾರ ಮಾಡುತ್ತಾರೆ.

ನಾಗಮಂಡಲವು ನಾಗದೇವತೆಯನ್ನು ಒಲಿಸುವ ಸಲುವಾಗಿ ಆಚರಿಸುವ ಕಲಾತ್ಮಕ ಆರಾಧನೆ. ವಿವಿಧ ಬಣ್ಣದ ಹುಡಿಗಳಿಂದ ಶಾಸ್ತ್ರೋಕ್ತವಾಗಿ ಬರೆಯುವ ಮಂಡಲ ಎಂಬ ರಂಗವಲ್ಲಿ ಇಲ್ಲಿ ಗಮನಾರ್ಹವಾದದ್ದು. ಮಂಡಲ ಬರೆಯಲು ಬತ್ತದ ಹೊಟ್ಟಿನ ಹುಡಿ, ಜಂಗಮ ಸೊಪ್ಪಿನ ಹುಡಿ, ಅರಸಿನ, ಅಕ್ಕಿಪುಡಿಗಳನ್ನು ಉಪಯೋಗಿಸುತ್ತಾರೆ. ಮಂಡಲವು ಸುಮಾರು ನಲವತ್ತು ಚದರಡಿ ವಿಸ್ತೀರ್ಣವಿರುತ್ತದೆ. ಹಿಂಗಾರದ ಗುಚ್ಛಗಳನ್ನು ಇತರ ಫಲಪುಷ್ಪಾದಿಗಳನ್ನು ಮಂಡಲದ ಸುತ್ತಲೂ ಅಲಂಕಾರಪ್ರಾಯವಾಗಿ ಇರಿಸುತ್ತಾರೆ. ಮಂಡಲದ ಚಪ್ಪರದ ಮೇಲ್ಛಾವಿಗೆ ತೆಂಗಿನಕಾಯಿ, ಅಡಕೆ, ಸೌತೆಕಾಯಿ, ಬಾಳೆಗೊನೆಗಳನ್ನೂ, ತೆಂಗಿನ ಗರಿ, ಹಿಂಗಾರಗಳ ಜಾಲರಿಗಳನ್ನೂ ಕಟ್ಟುತ್ತಾರೆ. ಮಂಟಪದ ಮೇಲುಭಾಗದಲ್ಲಿ ತಾವರೆ, ಗಿಳಿ ಮೊದಲಾದ ಆಕೃತಿಗಳನ್ನು ರೂಪಿಸುತ್ತಾರೆ.

ಪಡುಬಿದ್ರೆಯ ವಿಸ್ತಾರವಾದ 'ಬನ' ದಲ್ಲಿ ಎರಡು ವರ್ಷಗಳಿಗೊಮ್ಮೆ ನಡೆಯುವ ಬ್ರಹ್ಮ

ಮಂಡಲವೆಂಬ ನಾಗಾರಾಧನೆಯ ಸಂದರ್ಭದಲ್ಲಿ ಇಡೀ ಬನದ ಮರ ಗಿಡ ಪೊದೆ ಬಳ್ಳಿಗಳಲ್ಲಿ ಪುಷ್ಪಾಲಂಕಾರದ ಐಸಿರಿ ಹೊಮ್ಮುತ್ತ "ಹೂವ ಬಿಟ್ಟಿವೆ, ಹೂವ ತೊಟ್ಟಿವೆ, ಹೂವನುಟ್ಟಿವೆ ಮರಗಳು" ಎಂಬ ಕವಿವಾಣಿಯನ್ನು ನೆನಪಿಗೆ ತಂದುಬಿಡುತ್ತವೆ. ಎಲ್ಲಿ ನೋಡಿದರೂ ಹಿಂಗಾರ ಮತ್ತು ಇತರ ಪುಷ್ಪಗಳ ಜಾಲರಿಗಳು, ವಿವಿಧ ಹಣ್ಣುಹಂಪಲು, ಹಣ್ಣಡಿಕೆ, ಹೂಗಳ ಮೇಲ್ಕಟ್ಟು ತೋರಣಗಳು. ಅಂತೂ ಇಡಿಯ ಪರಿಸರವೇ ಒಂದು ಅದ್ಭುತ ಕಲಾಸೃಷ್ಟಿಯಾಗಿ, ಈ ಫಲವಂತಿಕೆಯ ಆರಾಧನೆಗೊಂದು ಸೂಕ್ತವಾದ ಆವರಣವನ್ನು ನಿರ್ಮಿಸುತ್ತದೆ.

ದ. ಕನ್ನಡದ ಬೇರೆ ಬೇರೆ ಸಂದರ್ಭಗಳಲ್ಲಿ ನಲಿಕೆ, ಮುಂಡಾಲ, ಕೂಸಾಳ, ಕೊರಗ ಮುಂತಾದ ವರ್ಗದವರು ಪ್ರದರ್ಶಿಸುವ ಆಟಿಕಳೆಂಜ, ಎರ್ಕೋಲ, ಕುದ್ರೆಕೋಲ, ಕಂಗಿಲು, ಕರುಂಗೋಲು, ಚೆನ್ನು, ಪಿಲಿಪಂಜಿ, ಬಾಲೆಸಾಂತು, ಮೊದಲಾದ ಕುಣಿತಗಳಿಗಾಗಿ ಕಟ್ಟುವ ವೇಷಗಳಲ್ಲೂ ತೆಂಗಿನ ತಿರಿ, ಕವುಂಗಿನ ಹಾಳೆ, ಹಿಂಗಾರ, ಬಗೆಬಗೆಯ ಹೂಗಳು, ಎಲೆಗಳು ಮೊದಲಾದುವುಗಳಿಂದ ಸಿದ್ಧಪಡಿಸಿದ ಸರಳವಾದ ವೇಷಸಾಮಗ್ರಿಗಳನ್ನು ಕಲಾತ್ಮಕವಾಗಿ ಬಳಸುತ್ತಾರೆ. ನಿತ್ಯ ದೊರಕುವ ನಿಸರ್ಗಸಹಜ ವಸ್ತುಗಳಿಂದ ಈ ಎಲ್ಲ ಜನಪದ ಕಲಾವಿದರು ನಿರಾಯಾಸವಾಗಿ ಸೃಷ್ಟಿಸುವ ಅಲಂಕರಣ ವೈಖರಿಯ ಸೃಜನಾತ್ಮಕ ಪ್ರತಿಭೆಯೂ ಅದು ಉಂಟುಮಾಡುವ ಚಿತ್ರಲೋಕ ಸೃಷ್ಟಿಯೂ ವಿಸ್ಮಯಕರವಾದದ್ದು.

# ತುಳುವರ ಸಿರಿ ಜಾತ್ರೆ

**–ಮುಕುಂದ ಪ್ರಭು ಮಂಜೇಶ್ವರ**

ದಕ್ಷಿಣ ಕನ್ನಡ ಜಿಲ್ಲೆಯ ವಿಶಿಷ್ಟ ಆರಾಧನಾ ಕ್ರಮಗಳಲ್ಲಿ "ಸಿರಿಗಳ ಜಾತ್ರೆ" ಯೂ ಒಂದು, ಸಿರಿಗಳು ಐವರು–ಸಿರಿ (ಅಕ್ಕೆರಸು ಪೂಂಜೆದಿ), ಮಗಳು ಸೊನ್ನೆ, ಸೊನ್ನೆಯ ಜತೆಯಲ್ಲಿಯೇ ಪಾಲಿತಳಾದ ಬ್ರಾಹ್ಮಣಕನ್ಯೆ ಗಿಂಡೆ, ಸೊನ್ನೆಯ ಇಬ್ಬರು ಕುವರಿಯರು ಅಬ್ಬಗೆದಾರಗೆ, ಇದು ಸಾಮಾನ್ಯವಾದ ಗ್ರಹಿಕೆ. ಇವರ ಜತೆಯಲ್ಲಿ ಬಿರ್ಮಾಳ್ವಿನ ಹೆಂಡತಿ ಸೋಮು ಮತ್ತು ಮನೆ ಕೆಲಸದ ವಿಶ್ವಾಸಿ ಹೆಣ್ಣಾಳು ದಾರು, ಇವರನ್ನೂ ಸೇರಿಸಿ ಏಳ್ವರು ಸಿರಿಗಳೆಂದೂ, ಇವರು ಸಪ್ತಮಾತೃಕೆಗಳ ಅವತಾರವೆಂದೂ ಹೇಳುವುದುಂಟು. ಸಪ್ತಮಾತೃಗಳೊಡನೆ ಗಣೇಶನೋ ವೀರಭದ್ರನೋ (ಕೆಲವೊಮ್ಮೆ ಇಬ್ಬರೂ) ಇರುವಂತೆ ಸಿರಿಗಳೊಡನೆ ಸಿರಿಯ ಮಗು, ಕುಮಾರನೂ ಇದ್ದಾನೆ.

ತುಳುವರ ಬಾಯಲ್ಲಿ ಆಡುಮಾತೊಂದಿದೆ : 'ಸಿರಿಗಳ ಹುಟ್ಟು ನಂದಳಿಕೆ, ಬಳೆವು ಹಿರಿಯಡ್ಕ, ಅವತಾರ ಕವತಾರ" ಎಂದು. ನಂದಳಿಕೆ, ಹಿರಿಯಡ್ಕ ಕವತ್ತಾರು–ಈ ಮೂರು ಸಿರಿಗಳ ಜಾತ್ರೆಯ ಪ್ರಧಾನ ಸ್ಥಾನಗಳು. ಇಲ್ಲಿಂದ ಈ ಆರಾಧನಾಕ್ರಮದ ಪ್ರಸಾರ ಜಿಲ್ಲೆಯ ಹಲವು ಕಡೆಗಳಿಗೆ ಆಗಿದೆ. ಸಿಡಿಗಲ್ಲು (ಬೆಳ್ತಂಗಡಿ ತಾಲೂಕು), ಮುಟ್ಲುಪಾಡಿ (ಕಾರ್ಕಳ ತಾಲೂಕಿನ ಮುನಿಯಾಲಿನ ಪೂರ್ವಕ್ಕೆ), ಮಣಿಕಲ್ಲು (ಉಡುಪಿ ತಾಲೂಕು), ಹೆಬ್ರಿ, ಸುರತ್ಕಲ್ಲು, ಬೆಣ್ಣೆ ಕುದ್ರು–ಇತ್ಯಾದಿ. ಹಿಂದೆ ಈ ಜಾತ್ರೆಯಲ್ಲಿ ಸೇವೆಸಲ್ಲಿಸಬೇಕಾದವರು ಜಿಲ್ಲೆಯಲ್ಲೇ ಏಕೆ, ದೂರದ ಮುಂಬೈ ಮದ್ರಾಸುಗಳಿಂದಲೂ ಜಾತ್ರೆಯ ದಿನ ಕವತ್ತಾರಿಗೋ, ಹಿರಿಯಡ್ಕಕ್ಕೋ, ನಂದಳಿಕೆಗೋ ಬರುವುದು ಅನಿವಾರ್ಯವಾಗಿತ್ತು. ಈಗ ಇತರ ಒಂದೆರಡು ಸ್ಥಾನಗಳಲ್ಲೂ ಈ ಜಾತ್ರೆ ನಡೆಯುವುದರಿಂದ ಸೇವೆ ಸಲ್ಲಿಸುವ ಹೆಣ್ಣುಮಕ್ಕಳಿಗೆ ಸೌಕರ್ಯಗಳು ಹೆಚ್ಚಾಗಿವೆ.

ಸಾಮಾನ್ಯವಾಗಿ ಭೂತ-ದೈವಗಳಿಗೆ ಸಾನ (ಸ್ಥಾನ), ಮಾಡ, ಕೊಟ್ಯ ಮೊದಲಾದ ನೆಲೆಗಳಿವೆ. ಸಿರಿಗಳ ನೆಲೆಯನ್ನು "ಸಿರಿಗಳ ಗುಂಡ" ವೆನ್ನುತ್ತಾರೆ. ಸಿರಿಗಳನ್ನು ಉಳಿದು ಈ 'ಗುಂಡ' ವೆಂಬ ಹೆಸರಿನ ನೆಲೆಯನ್ನು ಉಳ್ಳವ 'ಬೆರ್ಮೆ' (ಬ್ರಹ್ಮ) ನೊಬ್ಬನೆ. ತುಳುವರೆಲ್ಲರೂ ಒಂದಲ್ಲ ಒಂದು "ಆಲಡೆ" ಯನ್ನು ನಂಬಿಕೊಂಡು ಬಂದವರು. ಇಂತಹ ಆಲಡೆಗಳು ಈ ನಾಡಿನ ಉದ್ದಗಲಕ್ಕೆ ನೂರಾರು ಇವೆ. ಈ ಆಲಡೆಗಳಲ್ಲಿ ಮುಖ್ಯವಾಗಿ ಪಂಚದೈವಗಳು– ನಾಗ, ಬ್ರಹ್ಮ, ಲೆಕ್ಕೆಸಿರಿ, ಮಹಿಸಂದಾಯ, ನಂದಿಗೋಣ ಇರುತ್ತವೆ. ಹಲವು ಆಲಡೆಗಳಲ್ಲಿ ಇನ್ನೂ ಹೆಚ್ಚಿಗೆ ದೈವಗಳಿಗೆ ನೆಲೆಗಳು ಇವೆ. ಇಂತಹ ಆಲಡೆಗಳಲ್ಲಿ ಕೆಲವುಕಡೆ ಮಾತ್ರ ಸಿರಿಗಳ ಗುಂಡವಿದೆ. ಬಿರ್ಮಾಳ್ವನು ಪಾಳುಬಿದ್ದು ನಷ್ಟವಾದ ತನ್ನ ಆಲಡೆಯನ್ನು ಲಂಕೆ ಲೋಕನಾಡಿನಲ್ಲಿ ಹೊಸದಾಗಿ ಭವ್ಯವಾಗಿ ಕಟ್ಟಿಸಿ, ಪೂಜೆಪುರಸ್ಕಾರಗಳು ನಡೆಯುವಂತೆ ವ್ಯವಸ್ಥೆ ಮಾಡಿದಾಗ, ಆತನಿಗೆ ಅನುಗ್ರಹಿಸಲ್ಪಟ್ಟ ಪ್ರಸಾದದ ಪೊಟ್ಟಣದಲ್ಲಿ ಮಗು ಸಿರಿ ಪ್ರಕಟಳಾದುದರಿಂದ ಸಿರಿಗಳ ಗುಂಡ ಆಲಡೆಗಳಲ್ಲಿ ಮಾತ್ರವಿರುವುದು ಔಚಿತ್ಯ ಪೂರ್ಣ.

ಕವತ್ತಾರು–ನಂದಳಿಕೆ–ಹಿರಿಯಡ್ಕಗಳಲ್ಲಿ ಆಲಡೆಯಲ್ಲಿಯೇ ದೇವಾಲಯವೂ ಇರುವುದರಿಂದ ಇಲ್ಲಿ ಅಬ್ಬಗೆದಾರಗೆಯರ ಕಂಚಿನ ಮೂರ್ತಿಗಳು ದೇವರ ಎಡ ಬಲದಲ್ಲಿ ಇರುತ್ತವೆ. ಸಿರಿ ಗಂಡನ ಮನೆ ತೊರೆದು ಹೋಗುತ್ತ, ದಾರಿಯಲ್ಲಿ ಮಾಲಿಂಗೇಶ್ವರನ ಸನ್ನಿಧಿಗೆ ಬಂದಾಗ 'ದೇವರೇ, ಮುಂದೆ ನನ್ನ ಮೊಮ್ಮಕ್ಕಳು ಇಲ್ಲಿಗೆ ಬಂದಾಗ ಅವರಿಗೆ ಇರಲು ಅವಕಾಶವನ್ನು ಅನುಗ್ರಹಿಸು. ಮುಂದೆ ನಾನೂ ಅವರನ್ನು ಸೇರಿಕೊಳ್ಳುತ್ತೇನೆ" ಎಂದು ಬೇಡಿಕೊಂಡಳು. ಅಬ್ಬಗೆದಾರಗೆಯರು ಸತ್ತು ದೇವರ ಎಡಬಲದಲ್ಲಿ ನಸುನಗುತ್ತ ನಿಂತಿರುವ ಬಾಲೆಯರಾಗಿ ಪ್ರಕಟಗೊಂಡರು, ಎಂಬುದೂ ಸಿರಿಪಾಡ್ದನದ ಹೇಳಿಕೆ.

ಪ್ರಸ್ತುತ ಲೇಖನದಲ್ಲಿ ಕವತ್ತಾರು–ಹಿರಿಯಡ್ಕಗಳಲ್ಲಿ ನಡೆಯುವ ಜಾತ್ರೆಗಳನ್ನು ಮಾತ್ರವೇ ಗಮನದಲ್ಲಿರಿಸಲಾಗಿದೆ.

ಮಂಗಳೂರು ತಾಲೂಕಿನಲ್ಲಿರುವ ಕವತ್ತಾರು ಮೂಲ್ಕಿಯಿಂದ ಸುಮಾರು ಹತ್ತು ಕಿಲೋ ಮೀಟರ್ ಪೂರ್ವಕ್ಕೆ ಇರುವ ಚಿಕ್ಕಗ್ರಾಮ. ಹಿಂದೆ ಈ ಪ್ರದೇಶವನ್ನು ಅಜಿಲರೆಂಬ ತುಂಡರಸರು ಆಳುತ್ತಿದ್ದರು. ಈಗಲೂ ಇವರ ವಂಶದವರು ದೇವಸ್ಥಾನದ ಬಳಿಯಲ್ಲಿಯೇ ಇರುವ ಅವರ 'ಅರಮನೆ'ಯಲ್ಲಿ ವಾಸವಾಗಿದ್ದಾರೆ. ದೇವಸ್ಥಾನದೊಡನೆ ಇವರ ಮನೆತನದ ಸಂಬಂಧವೂ ಈಚಿನವರೆಗೆ ನಡೆದು ಬಂದಿತ್ತು. ಇಲ್ಲಿ ಪ್ರಾಚೀನವಾದೊಂದು ನಾಗಬನ, ಅಜಿಲರು ತಮ್ಮ ದೈವವಾದ ಜುಮಾದಿಗೆ ಕಟ್ಟಿಸಿ ಕೊಟ್ಟ 'ಸ್ಥಾನ' ವಲ್ಲದೆ ಆಲಡೆ–ಮಾಲಿಂಗೇಶ್ವರ ದೇವಾಲಯ–ಗುಡಿಗಳ ಸಂಕೀರ್ಣವೂ ಇದೆ. ಈ ಸ್ಥಳದ ಪ್ರಧಾನ ದೈವ ಜುಮಾದಿ. ಅಬ್ಬಗೆ ದಾರಗೆಯರು ನಂದಳಿಕೆಯಿಂದ ಬಂದು ಇಲ್ಲಿ ನೆಲೆಯಾಗಲು ಅಪೇಕ್ಷಿಸಿದಾಗ ಈ ಜುಮಾದಿ ಯೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡ ಬಳಿಕವೇ ಅವರಿಗೆ ನೆಲೆಯಾಗಲು ಅವಕಾಶ ದೊರಕಿತು. ಅಬ್ಬಗೆದಾರಗೆಯರು ಪರಊರವರಿಂದ ಮಾತ್ರವೇ ಕಾಣಿಕೆ–ಹರಕೆ–ಸೇವೆ ಗಳನ್ನು ಪಡೆದುಕೊಳ್ಳುವರೆಂದೂ, ಸ್ಥಳೀಯರಿಂದ ಏನೊಂದನ್ನೂ ಬಯಸುವುದೂ ಇಲ್ಲ, ಪಡೆಯುವುದೂ ಇಲ್ಲವೆಂಬುದು ಕರಾರಿನ ಮುಖ್ಯ ಅಂಶ. ಇಂದಿಗೂ ಇಲ್ಲಿಗೆ ಬಂದು ಹರಕೆ-ಕಾಣಿಕೆ–ಸೇವೆ ಸಲ್ಲಿಸುವವರೆಲ್ಲರೂ ಪರ ಊರಿನವರೇ.

ಕವತ್ತಾರಿನ ಈ ಸಂಕೀರ್ಣದಲ್ಲಿ ಬ್ರಹ್ಮರ ಗುಂಡ, ರಕ್ತೇಶ್ವರಿಯ ಮಾಡ, ನಾಗ–ಜುಮಾದಿ–ಪಂಜುರ್ಲಿಯ ಚಿಕ್ಕಗುಡಿಗಳು, ಮಹಿಸಂದಾಯ–ಭೂತರಾಜನನ್ನು ಪ್ರತಿನಿಧಿಸುವ ಮುರ ಕಲ್ಲಿನ ಕಂಭಗಳು ಹಾಗೂ ಸಿರಿಗಳ ಗುಂಡ ಮತ್ತು ಮಹಾಲಿಂಗೇಶ್ವರನ ದೇವಾಲಯಗಳು ಇವೆ. ಚೌಕಾಕಾರದ ಮುರಕಲ್ಲಿನಿಂದ ಕಟ್ಟಿರುವ ಈ ಗುಡಿಗೆ ಒಂದು ಅಟ್ಟ (ಮಾಳಿಗೆ) ಇದೆ. ಮಾಡಿಗೆ ತಾಮ್ರ ಹೊದಿಕೆ ಇದೆ. ಈ ಅಟ್ಟದಲ್ಲಿ ಒಂದು ಉಯ್ಯಾಲೆ ಇದೆ. ಪಕ್ಕದ ಕೋಣೆಯಲ್ಲಿ ನಂದಿಗೋಣ, ಅಜಿಲರ ಪಾಪೆಗಳು (ಮರದ ದೊಡ್ಡ ಮೂರ್ತಿಗಳು), ಬಸವ, ಪಟ್ಟದ ಮಂಚವೆಂಬ ಉಯ್ಯಾಲೆ, ಉಳ್ಳಯ ಗುಂಡವೆಂಬ ಮರದ ಮಾಡವಿದೆ. ಗೋಡೆ ಗಳಿಲ್ಲದೆ ಬರಿಯ ವೇದಿಕೆ, ಇದರ ನಾಲ್ಕು ಮೂಲೆಗೆ ನಾಲ್ಕು ಕಂಭಗಳು, ಹೆಂಚಿನ ಛಾವಣಿ ಇರುವ ಒಂದು ಕೊಟ್ಟಿಗೆಯಲ್ಲಿ ಅಬ್ಬಗೆ–ದಾರಗೆ–ಸೊನ್ನೆ–ಗಿಂಡಿಯರ ಮರದ ಪಾಪೆಗಳಿವೆ. ಇವುಗಳಿಗೆ ಸುಣ್ಣಬಣ್ಣ ಬಳೆದಿದ್ದಾರೆ. ಜಾತ್ರೆಗೆ ಹದಿನೈದು ದಿನಗಳ ಮೊದಲು ಈ ಪಾಪೆಗಳಿಗೆ

ಒಂದು ಕೊಡ ತಣ್ಣೀರನ್ನು ಹೊಯ್ದು, ಪೌಳಿಯ ದಕ್ಷಿಣ ದ್ವಾರವನ್ನು ತೆರೆದಿಡುತ್ತಾರೆ. ಈ ಶಕ್ತಿಗಳೇ ಸೇವೆ ಸಲ್ಲಿಸಲು ಬರುವ ಹೆಂಗಸರಿಗೆ ಸೂಚನೆ ಕೊಡುತ್ತವೆ ಎಂದು ನಂಬಿಕೆ, ಇದೇ ಜಾತ್ರೆಯ ಘೋಷಣೆ. ಪ್ರತ್ಯೇಕವಾದ ಆಮಂತ್ರಣ, ಪ್ರಕಟಣೆಗಳು ಇಲ್ಲಿಂದ ಹೊರಡುವುದಿಲ್ಲ. ಜಾತ್ರೆಯ ದಿನ ಮಹಾಲಿಂಗೇಶ್ವರನ ಬಲಿಮೂರ್ತಿಯನ್ನು ಸಿರಿಗಳ ಗುಂಡದ ಅಟ್ಟದಲ್ಲಿರುವ ಚಿಕ್ಕ ಉಯ್ಯಾಲೆಯಲ್ಲಿಟ್ಟು ತೂಗುವುದಿದೆ.

ಅಬ್ಬಗೆದಾರಗೆಯರ ಕಂಚಿನ ಮೂರ್ತಿಗಳಲ್ಲಿ ಬಾಲೆಯರು ಎರಡು ಜಡೆ, ಅರ್ಧಲಂಗ, ರವಿಕೆಯನ್ನು ತೊಟ್ಟಂತೆ ಕಾಣುತ್ತಾರೆ. ಪ್ರಾಚೀನವೆಂದು ಹೇಳಲಾಗುವ ಎರಡು ಚಿಕ್ಕ ಚಿನ್ನದ ಮೂರ್ತಿಗಳಿವೆ. ಇವುಗಳಲ್ಲಿ ಅವರು ಕಿರೀಟವನ್ನು ಧರಿಸಿರುತ್ತಾರೆ. ವಿಶೇಷ ದಿನಗಳಲ್ಲಿ ಮಾತ್ರ ಈ ಮೂರ್ತಿಗಳನ್ನು ಕಾಣಲು ಸಾಧ್ಯ. ಬೆಳ್ಳಿಯ ಚೆನ್ನೆಮಣೆ ಚಿನ್ನದ ಕಾಯಿಗಳೂ ಇಲ್ಲಿ ಇವೆ.

ಇಲ್ಲಿಯ ಜಾತ್ರೆ ವೈಶಾಖ ಹುಣ್ಣಿಮೆಯಂದು ನಡೆಯುತ್ತದೆ. ಚತುರ್ದಶಿಯಂದು ಧ್ವಜವೇರುತ್ತದೆ. ಕೊಡಿ ಮರಕ್ಕೆ ಹಿಂದೆ ಬಟ್ಟೆಯ ಬತ್ತಲೆ ಬೇತಾಳವನ್ನು ಏರಿಸುತ್ತಿದ್ದರು. ಈಚೆಗೆ ಮುವತ್ತು ವರ್ಷಗಳಿಂದ ಈಶ್ವರನ ವಾಹನ 'ಬಸವ'ನಿರುವ ಧ್ವಜವನ್ನು ಏರಿಸುತ್ತಾರೆ. ಹುಣ್ಣಿಮೆಯ ರಾತ್ರೆ ದೇವಾಲಯದಲ್ಲಿ ಮಹಾ ಪೂಜೆಯಾದೊಡನೆ ಅಜಿಲರ ಅರಮನೆಯಿಂದ 'ಗೋಲಕ' ವೆಂಬ ಡಬ್ಬಿಯನ್ನೂ ಅಜಿಲರ ಮನೆಯ ಹಿರಿಯರನ್ನೂ ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ದೇವಾಲಯದ ಅಂಗಳಕ್ಕೆ ಕರೆದುತರುತ್ತಾರೆ. ಭೂತದ ಮೂರ್ತಿಗಳನ್ನೂ ಇತರ ಸಾಮಗ್ರಿಗಳನ್ನೂ ಇನ್ನೊಂದು ಪಲ್ಲಕ್ಕಿಯಲ್ಲಿ ಇರಿಸಿ ದೇವಾಲಯದ ಸುತ್ತ 'ಬಲಿ' ಬರುತ್ತಾರೆ.

ಸಾಧಾರಣ ಇದೇ ಹೊತ್ತಿಗೆ ಸೇವೆ ಸಲ್ಲಿಸಲು ಬಂದಿರುವ ಹೆಂಗಸರು ಹಾಗೂ ಕುಮಾರರು ಸ್ನಾನಮಾಡಿ ಮಡಿ ಉಟ್ಟುಕೊಂಡು ಬಂದು ತಮ್ಮತಮ್ಮ ನಿಗದಿತ ಸ್ಥಾನಗಳಲ್ಲಿ ಒಟ್ಟು ಸೇರುತ್ತಾರೆ. ಹೆಂಗಸರು ಬಿಳಿಸೀರೆ, (ಅಂಚು ಯಾವ ಬಣ್ಣವೂ ಇರಬಹುದು). ಬಿಳಿ ರವಕೆ, ಬಿಳಿ ಹೂವುಗಳು–ಪಿಂಗಾರ (ಅಡಿಕೆಯ ಹೂ) ಮಲ್ಲಿಗೆ, ಬಿಳಿ ಮಂದಾರವೇ ಮೊದಲಾದುವನ್ನು ಧರಿಸಿರುತ್ತಾರೆ. ಉಳಿದಂತೆ ಹೆಂಗಸರ ಮೈಮೇಲೆ ಅವರು ನಿತ್ಯ ಹಾಕಿಕೊಳ್ಳುವ ಆಭರಣಗಳು ಇರುತ್ತವೆ. ಕುಮಾರರು ಬಿಳಿಪಂಚೆ, ಹೆಗಲಿಗೊಂದು ಬಿಳಿ ಶಾಲು ಹಾಕಿಕೊಳ್ಳುತ್ತಾರೆ. ಅವರವರ ಸ್ಥಿತಿಗೆ ತಕ್ಕಂತೆ ಬೆಳ್ಳಿಯ ಉಡಿದಾರ, ಚಿನ್ನದಸರ, ಚಿನ್ನದ ಕಡಗಗಳನ್ನು ಧರಿಸುವುದು ಇದೆ. ''ಸಿರಿಗಳ ಸೇವೆ' ಯಲ್ಲಿ ಶುಭ್ರತೆ, ಸ್ವಚ್ಛತೆಗೇ ಪ್ರಾಧಾನ್ಯ. ಈ ಪಾವಿತ್ರ್ಯಗಳೇ ಸಿರಿಯ ಬಾಳನ್ನು ಬೆಳಗಿದವಷ್ಟೆ. ಈಚಿನ ದಿನಗಳಲ್ಲಿ ಸ್ವಲ್ಪ ಬದಲಾವಣೆ ಆಗಿರುವುದನ್ನು ಕಾಣಬಹುದು. ''ಅನುಭವೀ'' ಹೆಂಗಸರು–ಐದಾರು ವರ್ಷಗಳಿಂದ ಸೇವೆ ಸಲ್ಲಿಸಿರುವವರು ಕಿತ್ತಳೆ ಬಣ್ಣದ ಸೀರೆಯನ್ನು ಉಡುತ್ತಾರೆ. ಕುಮಾರರಲ್ಲಿ ಕೆಲವರು ಕೆಂಪು ಬಣ್ಣದ ಪಟ್ಟೆಯನ್ನು ಉಡುತ್ತಾರೆ. ದೇವಸ್ಥಾನದ ಒಳಾಂಗಣ ಹೊರಾಂಗಣ, ಆಮೇಲೆ ಗದ್ದೆಗಳು, ಇನ್ನೂ ತಗ್ಗಿನ ಗದ್ದೆಗಳಲ್ಲಿ 20–30 ಹೆಂಗಸರ ಗುಂಪು ನಡುವಿಗೊಬ್ಬ ಕುಮಾರ. ಇಲ್ಲಿಯೂ ಸಾಮಾಜಿಕ ಸ್ತರದಲ್ಲಿರುವ ಜಾತಿ ಪ್ರಾಶಸ್ತ್ಯವನ್ನು

ಕಾಣಬಹುದು. ಮೇಲುಜಾತಿಯವರು ಒಳಾಂಗಣ, ಹೊರಾಂಗಣದಲ್ಲಿ ಸೇರಿದರೆ, ಕೆಳಜಾತಿಯವರು ಕೆಳಗಿನ ಗದ್ದೆಗಳಲ್ಲೂ, ಪರಿಶಿಷ್ಟ ಜನಾಂಗದವರು ತೀರ ದೂರದ ತಗ್ಗಿನ ಗದ್ದೆಗಳಲ್ಲಿ ಸೇರುವುದೂ ಕಾಣಬಹುದು. ಗುಂಪಿನಲ್ಲಿ ಕೆಲವರು ಸಿರಿಯ ಪಾಡ್ದನವನ್ನು ಹಾಡುತ್ತಲೇ ಎಲ್ಲರ ಮೇಲೆಯೂ ಆವೇಶ ತುಂಬಿ ಬರುತ್ತದೆ. ಹೆಂಗಸರು ಸಾಲಾಗಿಯೋ, ಅರ್ಧವೃತ್ತಾಕಾರವಾಗಿಯೋ ನಿಂತು, ತುಸು ಮುಂದಕ್ಕೆ ಬಾಗಿ ತೋಳುಗಳನ್ನು ಬೀಸುತ್ತಾ ಬಾಯಲ್ಲಿ ಸೂ ಎಂದು ನಿಟ್ಟುಸಿರು ಬಿಡುತ್ತಾ, ಆವೇಶಗ್ರಸ್ತರಾಗುತ್ತಾರೆ. ಸಿರಿಪಾಡ್ದನದಲ್ಲಿ ಸಿರಿಗಳು ಅನುಭವಿಸಿದ ದಾರುಣ ಪರಿಸ್ಥಿತಿಗಳು ಇವರ ಜೀವನದಲ್ಲೂ ಹಾಸುಹೊಕ್ಕಾಗಿರುವುದರಿಂದ ಅಲ್ಲಲ್ಲಿ ಈ ಅನುಭವಕ್ಕೆ ಸಮಾನವಾದ ಅನುಭವ ಇರುವ ಹೆಣ್ಣುಗಳಿಗೆ ಪಾಡ್ದನದ ಆ ಭಾಗ ಹಾಡುವಾಗ ವಿಪರೀತವಾದ ಆವೇಶ ಬಂದು ಕೆಲವೊಮ್ಮೆ ಮೂರ್ಛೆ ಹೋಗುವುದೂ ಇದೆ. ಅಂತಹವರನ್ನು ಉಪಚರಿಸಿ, ಆವೇಶ ಬಂದ ಸಿರಿ ಯಾರೆಂದು ಕೇಳಿದಾಗ ಗ್ರಸ್ತಳು ಯಾರು ತನ್ನ ಮೇಲೆ ಆವೇಶ ಬಂದಿರುತ್ತಾಳೆ, ಎಂಬುದನ್ನು ಹೇಳುತ್ತಾಳೆ. ನಡುನಡುವೆ ಆವೇಶ ಗ್ರಸ್ತ ಹೆಣ್ಣು ತನ್ನ ಸಮಸ್ಯೆಯನ್ನು ಹಾಡುತ್ತಾ ತಿಳಿಸುವುದೂ ಇದೆ. ಕುಮಾರನು ಅದಕ್ಕೆ ಹಾಡಿನಲ್ಲೇ ಉತ್ತರವನ್ನು ಪರಿಹಾರವನ್ನು ಕೊಡುತ್ತಾನೆ. "ನಿನ್ನ ಕಷ್ಟಗಳು ಇಲ್ಲಿಗೇ ಪರಿಹರಿಸಿದವು. ಇನ್ನು ಮುಂದಿನ ಜೀವನ ಚೆನ್ನಾಗಿರುತ್ತದೆ. ವ್ಯಥೆ ಮಾಡಬೇಡ" ಇತ್ಯಾದಿ ಈ ಕುಮಾರರಲ್ಲಿ ಅನುಭವಿಗಳು ಇಂತಹ ಸಮಸ್ಯೆಯನ್ನು ಎಷ್ಟು ಚಾಣಕ್ಯತನದಿಂದ ಬಿಡಿಸಿ, ಹೆಣ್ಣುಗಳಿಗೆ ಮನಶ್ಶಾಂತಿಯನ್ನು ಒದಗಿಸುತ್ತಾರೆಂಬುದನ್ನು ನೋಡಿಯೇ ತಿಳಿಯಬೇಕು. ಈಚೀಚೆಗೆ ಕುಮಾರರು ಪರಿಹಾರವನ್ನು ಅಲ್ಲಿಯೇ ಸೂಚಿಸದೆ, 'ನಿರ್ಣಯ' ಕೊಡಲು ದಿನವನ್ನು ಸೂಚಿಸಿ, ಆದಿನ ಆ ಹೆಂಗಸರನ್ನು ಮನೆಗೆ ಕರೆತರಿಸಿ 'ನಿರ್ಣಯ' ಕೊಡುವ ಪರಿಪಾಠ ಪ್ರಾರಂಭವಾಗಿದೆ. ಕಾರಣ, ಸ್ಥಳದಲ್ಲಿ ಏನು ಕಾಣಿಕೆ, ಉಡುಗೊರೆ ಕುಮಾರನಿಗೆ ಕೊಡಲ್ಪಡುತ್ತದೋ, ಅವನ್ನು ಸ್ಥಳಕ್ಕೇ ಒಪ್ಪಿಸಬೇಕು, ಅವನಿಗೆ ಕೇವಲ 'ಸೇವೆ' ಸಲ್ಲಿಸುವ ಅಧಿಕಾರವಿರುವುದು. ನಿರ್ಣಯವನ್ನು ಬೇರೆ ದಿನ ಅವನ ಮನೆಯಲ್ಲೇ ಕೊಟ್ಟರೆ ಕಾಣಿಕೆಗಳು ಅವನಿಗೇ ಸೇರುತ್ತವೆ.

ಸಮಾಜದಲ್ಲಿ ವಿಷಮ ಪರಿಸ್ಥಿತಿಗಳಿಂದ ಮಾನಸಿಕ ಆಘಾತ ಹೊಂದಿದ ಹೆಂಗಸರಿಗೆ ಒಂದು ರೀತಿಯಲ್ಲಿ ತಮ್ಮ ಬವಣೆಗಳನ್ನು ನಿವೇದಿಸಿಕೊಂಡು ಶಾಂತಿ ಪಡೆಯಲು ಅವಕಾಶ ಈ ಜಾತ್ರೆ. ಅದನ್ನು ಈ ರೀತಿಯಲ್ಲಿ ಸ್ವಾರ್ಥಕ್ಕೆ ಬಳಸಿಕೊಳ್ಳುವುದು ಒಂದು ವಿಪರ್ಯಾಸ. ಹರಕೆಯಾಗಿ ಬರುವ ವಸ್ತುಗಳು ಹಲವಾರು. ಸಂತಾನಾಪೇಕ್ಷಿಗಳು ಬೆಳ್ಳಿಯ ತೊಟ್ಟಿಲು, ಮಗು ; ಇತರರು ತಮ್ಮತಮ್ಮ ಅಪೇಕ್ಷೆಗಳು ನೆರವೇರಬೇಕೆಂದು ಬೆಳ್ಳಿಯ ಸರ, ನೇವಳ, ದನದ ಕರು, ಬೆಳ್ಳಿಯ ಸೀಯಾಳ (ಎಳನೀರು), ಹುರುಳಿ, ನಗದು ಇತ್ಯಾದಿ. ಈಚೆಗೆ ಬೀಡಿ ಉದ್ಯಮದಲ್ಲಿ ತೊಡಗಿರುವ ಹೆಂಗಸರಿಗೆ ಕೈಯಲ್ಲಿ, ಬೆರಳುಗಳಲ್ಲಿ ಬೇನೆ ಬಂದಾಗ ಬೆಳ್ಳಿಯ ಬೀಡಿಗಳನ್ನು ಹರಕೆ ಸಲ್ಲಿಸಿರುವುದೂ ಇದೆ. ಬೆಳ್ಳಿಯ ಕೈ, ಮೆಟ್ಟು (ಪಾದರಕ್ಷೆ), ನಾಲಿಗೆ, ಹಿಡಿಸೂಡಿ ಮೊದಲಾದವೂ ಹರಕೆಯಲ್ಲಿ ಬರುವ ವಸ್ತುಗಳು.

ನಡುರಾತ್ರಿಯ ನಂತರ ಜಾತ್ರೆಯ ಒಂದು ಅಂಗವಾಗಿ **ಅಂಬೊಡಿ** ಎಂಬ 'ಹೊಡೆದಾಟ'

ಪ್ರಾರಂಭವಾಗುತ್ತದೆ. ಹೊಲೆಯ ಜಾತಿಯವರು ಎರಡು ಪಂಗಡಗಳಾಗಿ ಬೆತ್ತಬಡಿಗೆಗಳನ್ನು ಹಿಡಕೊಂಡು ಅಣಕು ಯುದ್ಧ ಮಾಡುತ್ತಾರೆ. ಅಜಿಲರು ಹಾಗೂ ಇತರ ಗಣ್ಯರು ಈ ಅಣಕು ಯುದ್ಧ ಮಿತಿಮೀರದ ಹಾಗೆ ಮೇಲ್ವಿಚಾರಣೆ ನಡೆಸಿಕೊಂಡು ಅದನ್ನು ಮುಗಿಸಿ ಇತ್ತಂಡದವರಿಗೂ ಬುದ್ಧಿ ಹೇಳಿ ಅಂಬೊಡಿಯನ್ನು ಮುಗಿಸುತ್ತಾರೆ. ಭೂತದ ಮೂರ್ತಿ ಪರಿಕಗಳನ್ನು ಇಟ್ಟಿರುವ ಪಲ್ಲಕ್ಕಿಯನ್ನು ಪುನಃ ದೇವಾಲಯದ ಸುತ್ತ ಬಲಿ ಹೊತ್ತು, ಕ್ಷೇತ್ರಪಾಲ ಕಂಭದ ಸುತ್ತ ಬಂದು 'ಬ್ರಹ್ಮರ ಗುಂಡ'ದವರೆಗೆ ತಂದು, ಆಮೇಲೆ ಪಲ್ಲಕ್ಕಿಯನ್ನು ದೇವಾಲಯದ ಒಳಕ್ಕೆ ಕೊಂಡು ಹೋಗುತ್ತಾರೆ. ಇಷ್ಟು ಹೊತ್ತಿಗೆ ನಸುಕು ಹರಿದಿರುತ್ತದೆ. ಇಷ್ಟು ಸಮಯ ಈ ಹೆಂಗಸರ–ಕುಮಾರರ ಗುಂಪುಗಳು ' ಆವೇಶ''ದ ಸ್ಥಿತಿಯಲ್ಲಿರುತ್ತಾರೆ. ಒಂದೊಂದು ಗುಂಪಿನಲ್ಲೂ ಇರುವ ಎಲ್ಲಾ ಹೆಂಗಸರ ಸಮಸ್ಯೆಗಳಿಗೆ ಪರಿಹಾರ ಸಿಗಬೇಕಲ್ಲ. ಬೆಳಗಿನ ಹೊತ್ತಿಗೆ ಎಲ್ಲರೂ ಬಾಡಿ ಬಸವಳಿದ ಸ್ಥಿತಿಯಲ್ಲಿರುತ್ತಾರೆ. ಪಲ್ಲಕ್ಕಿ ದೇವಾಲಯದೊಳಗೆ ಸೇರಿದೊಡನೆ ''ಆವೇಶ'' ಮುಗಿಯುತ್ತದೆ.

ಹಿರಿಯಡ್ಕ ಉಡುಪಿಯಿಂದ ಪೂರ್ವಕ್ಕೆ ಕಾರ್ಕಳಕ್ಕೆ ಹೋಗುವ ದಾರಿಯಲ್ಲಿದೆ. ಇದನ್ನು 'ಅಡ್ಕತ್ತಾಯ' ಕ್ಷೇತ್ರ ಎನ್ನುವುದೂ ಇದೆ. ಬೊಮ್ಮರ ಬೆಟ್ಟು ಎಂದು ಗ್ರಾಮದ ಹೆಸರು. ಇಲ್ಲಿಯ ದೇವಾಲಯ ಸಂಕೀರ್ಣದಲ್ಲಿ ಪ್ರಧಾನ ದೈವತ ವೀರಭದ್ರ. ಗರ್ಭಗುಡಿಯಲ್ಲಿ ವೀರಭದ್ರ, ಆದಿಬ್ರಹ್ಮ, ನಾಗ, ಅಬ್ಬಗೆ-ದಾರಗೆ, ಮಹಾಕಾಳಿ, ಲಕ್ಷ್ಮೀ, ಸರಸ್ವತಿ ಹೀಗೆ ಹಲವು ಮೂರ್ತಿಗಳಿವೆ. ಪ್ರಮಥಗಣಗಳ ಗುಡಿಯಲ್ಲಿ ನಾಲ್ಕು ಹೆಣ್ಣು, ಒಂದು ಗಂಡುಗಳ ಮರದ ಪಾಪೆಗಳಿವೆ. ಮರದಲ್ಲಿ ಕೆತ್ತಿದ ಧೂಮಾವತಿ, ವಾರಾಹಿ, ಕೆಚ್ಚರಾವುತ, ನಂದಿ-ಪಾಪೆಗಳೂ ಇವೆ. ಹಿಂದೆ ಇಲ್ಲಿ ಬ್ರಾಹ್ಮಣ 'ಪಾತ್ರಿ' ಇದ್ದು ಈಗ ಈ ಮನೆತನದವರು ಯಾರೂ ಇಲ್ಲದೆ ಬ್ರಾಹ್ಮಣ ಪಾತ್ರಿ ಇಲ್ಲ. ಈ ಪಾತ್ರಿಯ ಮನೆತನದವರು ಪಾಂಡೇಶ್ವರ ಸಾಸ್ತಾನದ ಕೋಟ ಬ್ರಾಹ್ಮಣರಿದ್ದರು. ಸದ್ದಣ್ಣಾಯ ಎಂಬ ಕುಲದ ಬ್ರಾಹ್ಮಣ ಪಾತ್ರಿಯ ಮನೆತನದವರೂ ಈಗ ಇಲ್ಲ. ಅರ್ಚಕತನ ಈಗಲೂ ಬ್ರಾಹ್ಮಣರ ಕೈಯಲ್ಲಿದೆ.

ಇಲ್ಲಿಂದ ಜಾತ್ರೆ ಕೂಡ ವೈಶಾಖ ಹುಣ್ಣಿಮೆಯಂದೇ ನಡೆಯುತ್ತದೆ. ಕವತ್ತಾರಿನಲ್ಲಿ ಸೇವೆ ಸಲ್ಲಿಸುವವರು ಎಲ್ಲರೂ 'ತುಳು' ಮನೆ ಮಾತಾಡುವವರಾದರೆ, ಇಲ್ಲಿ ಸೇವೆ ಸಲ್ಲಿಸುವವರಲ್ಲಿ 75 ಪ್ರತಿಶತ ಕನ್ನಡ ಮಾತಿನವರು, ಉಳಿದವರು ತುಳು ಆಡುವವರು. ಕವತ್ತಾರಿನಲ್ಲಿ ಆವೇಶ ಬರುವ ಹೆಂಗಸರು ನಿಂತುಕೊಂಡಿರುವವರಾದರೆ, ಇಲ್ಲಿ ಹೆಂಗಸರು ಕೂತುಕೊಂಡಿರುತ್ತಾರೆ. ಸಾಯಂಕಾಲ ಮಿಂದು ಶುಭ್ರ ಬಿಳಿ ಸೀರೆ, ರವಕೆಗಳನ್ನು ಉಟ್ಟು, ಕೂದಲು ಬಿಟ್ಟು, ಒಂದೊಂದು ಸಾಲಿನಲ್ಲಿ ಏಳ್ವರಂತೆ ಕೂತುಕೊಳ್ಳುತ್ತಾರೆ. ದೇವಾಲಯದ ಹೊರಗಡೆ ಸೇರುವ ಕೆಳಜಾತಿಯವರು ವೃತ್ತಾಕಾರವಾಗಿ ಕೂರುವುದೂ ಇದೆ. ಒಂದೊಂದು ಗುಂಪಿಗೆ ಒಬ್ಬ ಕುಮಾರನಿರುತ್ತಾನೆ. ಈ ಕುಮಾರರು ಎಲ್ಲರೂ ಹೊರಗಿನಿಂದ ಬಂದವರೇ. ಕೂತಲ್ಲಿಯೇ ಆವೇಶ ಬಂದು ಸೊಂಟದ ಮೇಲ್ಭಾಗವನ್ನು ಮುಂದುಗಡೆ ಹಿಂದುಗಡೆ ವಾಲಿಸಿ ವೃತ್ತಾಕಾರವಾಗಿ ಸುತ್ತುವುದೂ ಇದೆ. ಇಲ್ಲಿಯೂ ಶುಭ್ರತೆ, ಸ್ವಚ್ಛತೆ, ಬಿಳುಪಿಗೆ ಪ್ರಾಧಾನ್ಯ. ಬಿಳಿಬಟ್ಟೆ, ಬಿಳಿ ಹೂವುಗಳು, ಕೈತುಂಬ ಬಳೆಗಳನ್ನು ಹಾಕಿಕೊಳ್ಳುವುದು ಇಲ್ಲಿಯ ವಿಶೇಷ. ಸಾಯಂಕಾಲ

ದಿಂದ ನಡುರಾತ್ರೆಯುವರೆಗೂ ಇವರು ಕೂತಲ್ಲೇ ಆವೇಶಭರಿತರಾಗಿ ತುಳು–ಕನ್ನಡಗಳಲ್ಲಿ ಸಿರಿಯ ಹಾಡನ್ನು ಹಾಡುತ್ತ, ನಡುನಡುವೆ ತಮ್ಮ ಸಮಸ್ಯೆಗಳನ್ನು ತೋಡುತ್ತ ಕುಮಾರ ರಿಂದ ಪರಿಹಾರವನ್ನು ಕಾಣುತ್ತ ಇರುತ್ತಾರೆ. ನಡುರಾತ್ರಿಯ ಹೊತ್ತಿಗೆ ವೀರಭದ್ರ ಹಾಗೂ ದೈವಗಳ ಉತ್ಸವ ಹೊರಡುವಾಗ ಈ ಹೆಂಗಸರೂ ಎದ್ದು ಮೆರವಣಿಗೆಯಲ್ಲಿ ಪಾಲು ಗೊಳ್ಳುತ್ತ, ಬಾಯಲ್ಲಿ 'ನಾರಾಯಣ–ನಾರಾಯಣ' ಎಂದು ಹೇಳುತ್ತಾ ಸುತ್ತು ಬರುವಾಗ ಅವರ ಮೈಮೇಲಿನ ಆವೇಶ ತಿಳಿಯಾಗುತ್ತದೆ. ಇಲ್ಲಿ ಸಂತಾನಾಪೇಕ್ಷಿಯಾದ ಹೆಂಗಸು ತಲೆಯ ಮೇಲೆ ತೊಟ್ಟಿಲನ್ನು ಹೊತ್ತುಕೊಂಡು ದೇವಾಲಯದ ಸುತ್ತು ಬಲಿ ಬರುತ್ತಾಳೆ. ಅವಳ ಗಂಡ ಅವಳ ಜತೆಯಲ್ಲಿಯೇ ನಡೆದುಕೊಂಡು ಬರುತ್ತಾನೆ. 'ಕಂಜಿಲು ಸೇವೆ' ಇಲ್ಲಿಯ ಇನ್ನೊಂದು ವೈಶಿಷ್ಟ್ಯ. ಅಬ್ಬಗೆದಾರಗೆಯರು ನರನಾರಾಯಣರ ತಪಸ್ಸನ್ನು ಕೆಡಿಸಲು ಇಂದ್ರನಿಂದ ಕಳುಹಿಸಲ್ಪಟ್ಟ ಅಪ್ಸರೆಯರು, ಶಾಪಗ್ರಸ್ತರಾಗಿ ಮಾನವಜನ್ಮ ತಳೆದರೆಂದೂ, ನಾರಾಯಣ ಸ್ಮರಣೆಯಿಂದ ಇವರು ಶಾಪಮುಕ್ತರಾದರೆಂದೂ ಇಲ್ಲಿಯ ನಂಬಿಕೆ.

ಸ್ತ್ರೀ ಪ್ರಧಾನವಾದ 'ಅಳಿಯಕಟ್ಟು' ಎಂಬ ಸಾಮಾಜಿಕ ಪದ್ಧತಿ ತುಳುವರಲ್ಲಿ ಹಿಂದಿನಿಂದಲೂ ಪ್ರಚಲಿತವಿತ್ತು. ಕಾಲಕ್ರಮೇಣ. ಎಲ್ಲ ಸಮಾಜಗಳಲ್ಲೂ 'ಕೆಳ' ಜಾತಿ ಅನಿಸಿಕೊಂಡವರು ''ಮೇಲು'' ಜಾತಿಯವರ ಪದ್ಧತಿಗಳನ್ನು ಸ್ವೀಕರಿಸಿ ತಮ್ಮ ಸ್ತರವನ್ನು ಏರಿಸುವ ಪ್ರಯತ್ನ ನಡೆಯುತ್ತ ಇದ್ದದು ವಾಸ್ತವ. ಅಂತಹ ಪ್ರಯತ್ನವನ್ನು ಪ್ರತಿಭಟಿಸಿ ಸ್ತ್ರೀಯ ಸಾಮಾಜಿಕ ಸ್ಥಾನಮಾನವನ್ನು, ಪ್ರಧಾನತೆಯನ್ನು ಉಳಿಸಿಕೊಳ್ಳುವ ಧೀರಪ್ರಯತ್ನ ಮಾಡಿದವಳು ಸಿರಿ. ಸಿರಿಗಳ ಜೀವನ ಅತ್ಯಂತ ದಾರುಣವಾದದ್ದಾದರೂ ತಮ್ಮ ತ್ಯಾಗದಿಂದ, ದೈವತ್ವವನ್ನು ಪಡೆದು ತುಳುವರ ಸ್ತ್ರೀ ಸಮಾಜಕ್ಕೆ ಇಂದಿಗೂ ವಿಶಿಷ್ಟವಾದ ರೀತಿಯಲ್ಲಿ ಸಾಂತ್ವನವನ್ನು ಕೊಡುತ್ತಾ ಇರುವುದಂತೂ ವಾಸ್ತವ.

### ಟಿಪ್ಪಣಿ

ಈ ಲೇಖನದ ಸಿದ್ಧತೆಗೆ ಸಹಕರಿಸಿದ ಕವತ್ತಾರು ದೇವಾಲಯದ ಪ್ರಧಾನ ಅರ್ಚಕ ಶ್ರೀಯುತ ಅನಂತಪದ್ಮನಾಭ ಭಟ್ಟರಿಗೆ, ಹಿರಿಯಡ್ಕದ ರಾಜ್ಯ ಪ್ರಶಸ್ತಿ ವಿಜೇತ ಶ್ರೀಯುತ ಗೋಪಾಲ ರಾಯರಿಗೆ, ವೀರಭದ್ರ ದೇವಾಲಯದ ಆಡಳಿತೆ ಮೊಕ್ತೇಸರರಿಗೆ ಹಾಗೂ ವಿವರಗಳನ್ನು ಒದಗಿಸಿದ ಶ್ರೀಯುತ ಗಣಪತಿ ಅಡಿಗಳಿಗೆ ಲೇಖಕನು ಋಣಿಯಾಗಿದ್ದಾನೆ.

# ನಾಗಮಂಡಲ-ಡಕ್ಕೆಬಲಿ

–ಎ. ವಿ. ನಾವಡ

ನಾಗಮಂಡಲ– ಡಕ್ಕೆಬಲಿ ದಕ್ಷಿಣ ಕನ್ನಡದ ಕರಾವಳಿಯಲ್ಲಿ ಉಳಿದು ಬಂದಿರುವ ಅತ್ಯಂತ ಸುಂದರ, ಕಲಾತ್ಮಕ ನೃತ್ಯಾಚರಣೆಗಳಲ್ಲಿ ಒಂದು. ನಾಗಮಂಡಲ ನಾಗನಿಗೆ, ಹಾಗೂ ಡಕ್ಕೆ ಬಲಿ ಸ್ಲಳೀಯ ಆರ್ಯೇತರ ದೈವಗಳಿಗೆ ಸಂಬಂಧಿಸಿದ ನೃತ್ಯ ಉಪಚಾರ. ಇಂದು ನಾಗ ಮಂಡಲ ಶುದ್ಧವೈದಿಕ ಆಚರಣೆಯಂತಿದೆ. ಬ್ರಾಹ್ಮಣ ಪುರೋಹಿತ, ಬ್ರಾಹ್ಮಣ ನಾಗಪಾತ್ರಿ, ಬ್ರಾಹ್ಮಣ ನರ್ತಕ (ವೈದ್ಯ)ರ ಕೂಡುವಿಕೆಯಿಂದ ಮಂತ್ರೋಕ್ತ ಹೋಮಹವನಾದಿಗಳ ಹಿನ್ನೆಲೆಯಲ್ಲಿ ನಡೆಯುತ್ತಿದೆಯಾದರೂ ಇದೊಂದು ಆರ್ಯೇತರ–ತಾಂತ್ರಿಕ ವಿಧಿಯಾಗಿರ ಬಹುದು. "ಇಲ್ಲಿನ ದಕ್ಷಿಣ–ಉತ್ತರ ಕನ್ನಡ ಕರಾವಳಿ ಪ್ರದೇಶಕ್ಕೆ ನಾಗರಖಂಡವೆಂದು ಹೆಸರಿತ್ತಲ್ಲದೆ, ಇಲ್ಲಿ 'ನಾಗರೆಂಬ ಆದಿವಾಸಿಗಳು ವಾಸಿಸುತ್ತಿದ್ದರು. ಸರ್ಪಕುಲಲಾಂಛನ ವಾಗಿದ್ದ ಈ ಜನರಲ್ಲಿ ಸರ್ಪಾರಾಧನೆ ಒಂದು ಸ್ಥಳೀಕ ಮತಾಚರಣೆಯಾಗಿ ಬಳಕೆಯಾಗುತ್ತಿದ್ದಿರ ಬೇಕು" (1947, ಪೈ) ಮುಂದೆ ಈ ನೆಲಕ್ಕೆ ವೈದಿಕಧರ್ಮವು ಪ್ರವೇಶವಾದ ಬಳಿಕ ಈ ನಾಗಾರಾಧನೆ ವೈದ್ಯ (ಬಾಹ್ಮಣ)ರ ಪಾಲಿಗೆ ಬಂದಿರಬೇಕು.[1] ಕರಾವಳಿಯ ಭೂತಮಾಧ್ಯಮ ಜನಾಂಗಗಳಲ್ಲಿ ಒಂದಾದ **ನಲ್ಕೆ** ಅಥವಾ ಪಾಣರು ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡ ಪ್ರದೇಶ ಗಳಲ್ಲಿ ಸ್ವಾಮಿ ದೈವಕ್ಕೆ ನಡೆಸುತ್ತ ಬರುತ್ತಿರುವ ಡಕ್ಕೆಬಲಿಯಲ್ಲಿ ನಾಗಮಂಡಲದ ಆದಿಮ ಸ್ವರೂಪವನ್ನು ಗುರುತಿಸಬಹುದಾಗಿದೆ. ಈ 'ಸ್ವಾಮಿ' ಎಂದರೆ (ಬೃಹತ್‌ಗಾತ್ರದ) ಹುತ್ತಗಳಿರುತ್ತವೆ. ಸ್ವಾಮಿಯ ಹೊಗಳಿಕೆಯ[2] ಪಸ್ತುವನ್ನು ಕಂಡರೆ ಅದರ ಕೊನೆಯಲ್ಲಿ ' ಚಿತ್ತಾ ಸಂತೋಷದಲ್ಲಿ ತನ್ನ ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲುವಂತಹಾ ಮುದ್ದುಸ್ವಾಮಿ" ಎನ್ನುವುದನ್ನು ಕಂಡರೆ ಈ ಸ್ವಾಮಿ ದೈವವಾಗಿರುವ ಸುಬ್ರಹ್ಮಣ್ಯರೂಪದ ನಾಗನಲ್ಲದೆ ಬೇರೆ ಅಲ್ಲ. ಕೇರಳದಲ್ಲಿ ಸುಬ್ರಹ್ಮಣ್ಯನನ್ನು ಮುದ್ದುಸ್ವಾಮಿ ಎನ್ನುವುದಿದೆಯಂತೆ (1977 ಕೆದ್ಲಾಯ). ನಾಗಾರಾಧನೆ ಕರಾವಳಿಯ ಆದಿಮ ಆರಾಧನಾ ವಿಧಿಗಳಲ್ಲಿ ಒಂದು. ನಾಗಮಂಡಲ ಇಂದು ವೈಧಿಕವಿಧಿಯಾಗಿ ಆಚರಣೆಗೊಳ್ಳುತ್ತಿದ್ದರೂ ಅದರ ಮೂಲಸ್ವರೂಪವನ್ನು ಪಾಣರು 'ಸ್ವಾಮಿ' ಗೆ ನಡೆಸುತ್ತಿರುವ ಡಕ್ಕೆಬಲಿಯಲ್ಲಿ ಗುರುತಿಸಬಹುದು.[3]

ನಾಗಮಂಡಲ, ಬ್ರಹ್ಮಮಂಡಲ,[4] ಡಕ್ಕೆಬಲಿ[5] ಗಳ ನೃತ್ಯವಿಧಾನಗಳಲ್ಲಿ ವಿಶೇಷ ವ್ಯತ್ಯಾಸ ವಿಲ್ಲ. ಅವುಗಳ ಆರಾಧನಾ ಉದ್ದೇಶ ಮಾತ್ರ ಬೇರೆ ಬೇರೆ. ನಾಗಮಂಡಲ, ಬ್ರಹ್ಮ ಮಂಡಲವನ್ನು ನಡೆಸಿಕೊಡುವವರು ವೈದ್ಯರೆನ್ನುವ ಬ್ರಾಹ್ಮಣ ಕುಲದವರು. ಡಕ್ಕೆಬಲಿ ಯನ್ನು ವೈದ್ಯರು ಹಾಗೂ ಪಾಣರು ಇಬ್ಬರೂ ನಡೆಸಿಕೊಡುವುದುಂಟು. ನಾಗಮಂಡಲದ ಹಾಗೂ ಆರ್ಯೇತರ ದೈವಗಳ ಉಪಚಾರ ಡಕ್ಕೆಬಲಿಗಳ ಸಂದರ್ಭದಲ್ಲಿ ವೈದ್ಯರು ಹಾಡುವ ಹಾಡುಗಳು ಹಿಂದೆ ಬೇರೆ ಬೇರೆ ಇದ್ದಿರಬಹುದಾದರೂ ಇಂದು ಬಹುಮಟ್ಟಿಗೆ ಒಂದೆ.[6] (1985, ನಾವಡ. ಕಾರಂತ 1971) ನಾಗಮಂಡಲ ಖಚಿತವಾಗಿ ಎಂದಿನಿಂದ ನಮ್ಮಲ್ಲಿ ಆರಂಭವಾಯಿತು, ಎನ್ನುವುದು ಸಾಧ್ಯವಿಲ್ಲ. ಕ್ರಿ. ಶ. 1458 ರ ಬಾರಕೂರಿನ ಶಾಸನದಲ್ಲಿ

ಡಕ್ಕೆಬಲಿಯ ಪ್ರಸ್ತಾಪಬರುತ್ತದೆ. 7 13 ನೆ ಶತಮಾನಕ್ಕೆ ಅನ್ವಯಿಸಬಹುದಾದ ನಾಗ ಮಂಡಲದ ಶಿಲ್ಪವೊಂದು ನಂದಳಿಕೆಯಲ್ಲಿ ದೊರೆತಿದೆ. ಕ್ರಿ. ಶ. 1402ರ ಬಾರಕೂರಿನ ಶಾಸನ ವೊಂದರಲ್ಲಿ 'ಮಂಡಲ ಭಂಡಾರಿ' ಎಂಬ ಪದ ಬಳಕೆಯಾಗಿದೆ.

## ಹಿನ್ನೆಲೆ

ನಾಗಮಂಡಲ, ಡಕ್ಕೆಬಲಿ (ಆಚರಣೆಗಳು) ತಾಂತ್ರಿಕ ಮೂಲದ ಆಚರಣೆಗಳು. ಇಂತಹ ಸಂಕೀರ್ಣ ಆಚರಣೆಯ ಹಿಂದಿನ ಅರಿವು ಮರೆಯಾದರೂ ಭಕ್ತವರ್ಗ ಪರಂಪರೆಯ ಬಲದಿಂದ ನಡೆಸಿಕೊಂಡು ಬರುತ್ತಿದ್ದಾರೆ. ಡಕ್ಕೆಬಲಿ/ನಾಗಮಂಡಲದ ಚಿತ್ರಕ್ಕೂ ನಾಗಪಾತ್ರಿಯಲ್ಲಿ ಆವಾಹನೆಗೊಳ್ಳುವ 'ಯಕ್ಷಿಗೂ' ಮಾಂತ್ರಿಕ, ತಾಂತ್ರಿಕ ಸಂಬಂಧವಿರ ಬೇಕು (1982 ಕ. ವೆಂ. ರಾಜಗೋಪಾಲ). ಈ ವಿಧಿ ಆಚರಣೆಗಳ ಸಂದರ್ಭದಲ್ಲಿ ಬರೆವ ಚಿತ್ರ (ಮಂಡಲ) ವನ್ನು ಕುರಿತು ವೈದ್ಯರಲ್ಲಿ ವಿವರಣೆ ಕೇಳಿದಾಗ ನಾಗಯಕ್ಷಿ, ಬ್ರಹ್ಮಯಕ್ಷಿ, ತ್ರಿಶೂಲ, ಗಣಪತಿ, ನಾಗ, ಎನ್ನುತ್ತಾರೆ. ಪಾತ್ರಿಯ ಮೈದುಂಬುವುದು ನಾಗಯಕ್ಷಿಯೇ ಹೊರತು ನಾಗನಲ್ಲ ವೆಂದೂ ಹೇಳುತ್ತಾರೆ. 8

ಡಕ್ಕೆಬಲಿ ಎಂಬ ಮಾತಿನಲ್ಲಿ ಪ್ರಾಣಿಬಲಿಯೂ ಸೇರಿದ್ದು ಅದರ ಆರಾಧಕರು ಜೈನ ಮತ್ತು ವೈದಿಕ ಧರ್ಮಗಳ ಪ್ರಭಾವದಿಂದ ಬಿಟ್ಟುಬಿಟ್ಟಿರಬಹುದು. (1982 ಕ.ವೆಂ.ರಾಜ ಗೋಪಾಲ) ಡಕ್ಕೆಬಲಿಯ ಚಿತ್ರದ ರಚನೆಯಲ್ಲಿ ಬಳಸುವ ಪಂಚವರ್ಣಗಳಲ್ಲಿ ಕೆಂಪು ಈ ರಕ್ತಬಲಿಯನ್ನು ಸೂಚಿಸುತ್ತಿರಬೇಕು. ಡಕ್ಕೆಬಲಿಯು ಮೂಲತಹ ಹಾಯ್ಗುಳಿ, ಮರ್ಲ್ ಚಿಕ್ಕು, ಮಾಂಕಾಳಿಯಮ್ಮ, ಮುಂತಾದ ಆರ್ಯೇತರ ದೈವಗಳಿಗೆ ನಡೆವ ಉಪಚಾರವಾದರೂ ವೈದಿಕ ಪ್ರಭಾವಕ್ಕೆ ವೈದ್ಯರ ಮೂಲಕ ಒಳಗಾಗಿವೆ.

ತ್ರಿಕೋನವನ್ನು ಮೇಲು–ಕೆಳಗು ಮಾಡಿ ಜೋಡಿಸಿದಾಗ ಆ ಸಂಕೇತ ರೂಪವು ತಾಂತ್ರಿಕ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ತಾಂತ್ರಿಕರು ಇದನ್ನೇ 'ಶ್ರೀಚಕ್ರ' ವೆಂದು ಕರೆದುದು. ಇದು ಗಂಡು ಹೆಣ್ಣುಗಳ ಮಿಲನದ ಸಂಕೇತ, ಎಂಬ ಅಭಿಪ್ರಾಯವಿದೆ. ಇದಕ್ಕೇ ಡಕ್ಕೆ ಬಲಿಯ ಸಂದರ್ಭದಲ್ಲಿ 'ಗಣೇಶ' ಎಂದು ಕರೆಯಲಾಗುತ್ತದೆ.

ಡಕ್ಕೆಬಲಿ/ನಾಗಮಂಡಲದಲ್ಲಿ ಬಿಡಿಸಲಾಗುವ ಕೈಕಾಲುಗಳಿಲ್ಲದ ತಲೆಯ ಚಿತ್ರವನ್ನು 'ಬ್ರಹ್ಮ ಯಕ್ಷ' ಎನ್ನುತ್ತಾರೆ. ಈ ಬ್ರಹ್ಮ ವೈದಿಕರ 'ಚತುರ್ಮುಖ ಬ್ರಹ್ಮ' ಅಲ್ಲ. ತುಳುವರು ಹೇಳುವ ಬೆರ್ಮೆರ್- ಇದನ್ನು ಸಂತಾನದ ಅಧಿದೇವತೆ ಎಂದು ಹೇಳಲಾಗುತ್ತದೆ. ಆದರೆ ವೈದ್ಯರಿಗೆ ಈ ಬ್ರಹ್ಮ ಚತುರ್ಮುಖ ಬ್ರಹ್ಮನೆ 9 (1985 ನಾವಡ) ಆಗಿದ್ದಾನೆ.

ನಾಗನ ಹೆಡೆಯನ್ನು ಹೋಲುವ ಆಕೃತಿ ಹಳದಿ, ಬಿಳಿಯಲ್ಲಿ ರೇಖಿಸಲಾಗುವುದು. ಅದನ್ನು ಯಕ್ಷಿ (ಯಕ್ಷೆ) ಎನ್ನುತ್ತಾರೆ. ಈ ಆಚರಣೆಯಲ್ಲಿ ಯಕ್ಷಾರಾಧನೆಯ ಪಳೆಯುಳಿಕೆಯನ್ನು ಗುರುತಿಸುವಲ್ಲಿ ಇದು ಸಂಕೇತವಾಗುತ್ತದೆ. ಈ ಯಕ್ಷಾರಾಧನೆ ಆರ್ಯ-ಧ್ರಾವಿಡರ ನಡುವಣ ಆತ್ಮೀಯತೆಯ ಬೆಸುಗೆ ಏರ್ಪಟ್ಟುದರ ಸಂಕೇತವಾಗುತ್ತದೆ. (1976, ಹಂಪನಾ) ಈ ನಾಗಯಕ್ಷ ಎಂಬುದು ಶಂಖದ ಕಲ್ಪನೆಯಲ್ಲಿ ಸೇರಿರುವ ಯೋನಿಯ ರೂಪವಿರಬಹುದು (1982 ಕ. ವೆಂ. ರಾಜಗೋಪಾಲ).

ನಾಗರಹಾವಿನ ಚಿತ್ರವನ್ನು 'ನಾಗಯಕ್ಷ' ಎನ್ನುತ್ತಾರೆ. ಇದು ತಾಂತ್ರಿಕರು ಹೇಳುವ 'ಪುರುಷ' ಸೂಚನೆಯಿರಬಹುದು. ತ್ರಿಶೂಲ ಶೈವಸೂಚಕವಿರಬೇಕು.

ನಾಗಮಂಡಲ/ಡಕ್ಕೆಬಲಿಗಳಲ್ಲಿ ವೈದ್ಯ ಅರ್ಧನಾರಿವೇಷವನ್ನು ತೊಡುವುದರ ಔಚಿತ್ಯವನ್ನು ವಿವೇಚಿಸಬೇಕಾಗಿದೆ. ಅರ್ಧನಾರಿವೇಷದ ವೈದ್ಯ/ಪಾಣ ಯಕ್ಷಗಾನ ಬಡಗುಟ್ಟಿನ ಸ್ತ್ರೀವೇಷದ ಕೆಂಪುಬಣ್ಣದ ಚೌಕುಳಿ ಸೀರೆ, ಕಾಲಿಗೆ ಪಾಡಗ (ಗೆಜ್ಜೆ), ಎದೆಗೆ ತೋಳಿಲ್ಲದ ರವಕೆ, ಕೊರಳಿಗೆ ಗುಂಡುಸರ, ಸೊಂಟಕ್ಕೆ ಬೆಳ್ಳಿಪಟ್ಟಿ, ಕೈಗೆ ಚಿನ್ನದ ಕಡಗ, ತಲೆಗೆ ಮುಂಡಾಸು, ಅದರ ಸುತ್ತ ಜರಿರುಮಾಲು, ಅವರ ತುದಿಗೆ 'ಕೋರೆಬಂಗಾರ' ಇದಿಷ್ಟು ಅರ್ಧನಾರಿಯ ವೇಷ ಭೂಷಣ. ನಾಗಯಕ್ಷನನ್ನು ತನ್ನಲ್ಲಿ ಆವಾಹಿಸಿಕೊಳ್ಳುವ ಪಾತ್ರಿಗೆ ವಿಶೇಷ ವೇಷಭೂಷಣಗಳಿಲ್ಲ. ಮುಂಗೈಗೆ ಕಡಗ, ಮೈಗೆ ಕೆಂಪುಪಟ್ಟೆ, ಕೆದರಿದ ತಲೆಕೂದಲು ಕುಣಿತಕ್ಕೆ ಭಯಾನಕತೆಯನ್ನೂ ರೌದ್ರತೆಯನ್ನೂ ತುಂಬಿ ಕೊಡುತ್ತವೆ. ತೆಕ್ಕೆತುಂಬ ಒತ್ತಿಕೊಂಡಿರುವ ಹಿಂಗಾರದ ಹೂಗಳನ್ನು ಮುಖಕ್ಕೆ ಆಗಿಂದಾಗ್ಗೆ ತರುಬಿಕೊಳ್ಳುತ್ತಿರುವುದರಿಂದ ಅದರ ಕಾಳುಗಳು ಮುಖದಲ್ಲಿ ಒತ್ತೊತ್ತಾಗಿ ಅಂಟಿಕೊಂಡು ನಾಗನ ನೆನಪು ತರುತ್ತವೆ. ನಾಗ ಪಾತ್ರಿ/ದೈವಪಾತ್ರಿ ರಂಗೋಲಿಯ ನಾಗ (ಯಕ್ಷ) ನನ್ನು ಪ್ರತಿನಿಧಿಸಿದರೆ ಅರ್ಧನಾರಿವೇಷ ತೊಟ್ಟ ವೈದ್ಯ/ಪಾಣ ಅದೇ ಚಿತ್ರದಲ್ಲಿ ಬರೆದ 'ಗಣಪತಿ' ಯ ಪ್ರತಿನಿಧಿ (ಶ್ರೀಚಕ್ರ). ಹೆಣ್ಣುಗಂಡುಗಳ ಮಿಲನದ ಈ ಸಂಕೇತವೇ ಅರ್ಧನಾರಿವೇಷದ ಕಲ್ಪನೆಗೆ ಇಂಬುಕೊಟ್ಟಿರಬೇಕು ಎಂಬ ಕ. ವೆಂ. ರಾಜಗೋಪಾಲರ ಪ್ರಾಕಲ್ಪನೆ ವಿಚಾರಣೀಯ.[10]

ನಾಗಮಂಡಲ/ಡಕ್ಕೆಬಲಿಗಳು ತಾಂತ್ರಿಕ ವಿಧಿಗಳಾಗಿದ್ದು ವೈದಿಕ ವಿಧಿಗಳಷ್ಟೇ ಪ್ರಾಚೀನವಾದುದಾಗಿರಬೇಕೆಂಬ ಅಭಿಪ್ರಾಯವಿದೆ. ಅವೈದಿಕ ಮೂಲದ ತಂತ್ರಪಂಥ ಪ್ರಕೃತಿ ಅಥವಾ ಸ್ತ್ರೀತತ್ವಕ್ಕೆ ಹೆಚ್ಚು ಒತ್ತನ್ನು ನೀಡುತ್ತದೆ. ಜಗತ್ತಿನಲ್ಲಿ ಕೃಷಿ ಪದ್ಧತಿಗೆ ಹೆಣ್ಣೇ ಮೂಲವೆಂದೂ ಅದರಿಂದಲೇ ಈ ತಂತ್ರಪಂಥ ವಿಕಾಸವಾಗಿರಬೇಕೆಂಬ ಅಭಿಪ್ರಾಯವಾಗಿದೆ (1982, ಲೋಕಾಯತದ ಕನ್ನಡಾನುವಾದ-ವೇಣುಗೋಪಾಲ್, ಶೈಲಜ) ನಾಗಮಂಡಲ/ಡಕ್ಕೆಬಲಿಗಳು ಫಲವಂತಿಕೆಯ ಮಾಂತ್ರಿಕ ಕ್ರಿಯೆಗಳಾಗಿದ್ದು ಮೂಲತಹ ಸ್ತ್ರೀಯೆ ಎಲ್ಲಾ ಆರಾಧನಾ ವಿಧಿಗಳಲ್ಲಿ ಪಾಲ್ಗೊಳ್ಳುತ್ತಿದ್ದಿರಬಹುದು. ಅಷ್ಟೇಅಲ್ಲ, ತಂತ್ರಪಂಥದಲ್ಲಿ ಪಾಲ್ಗೊಳ್ಳುತ್ತಿದ್ದವರು ಕೀಳು ಜಾತಿಯ ಸ್ತ್ರೀಯರು[11] ಕಾಲಕ್ರಮೇಣ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ನೆಲೆಗೊಳ್ಳುತ್ತಾ ಪುರುಷ ಪ್ರಧಾನತೆ ಏರ್ಪಟ್ಟ ಹಿನ್ನೆಲೆಯಲ್ಲಿ ಮಹಿಳೆಯರ ಕೆಲಸಗಳು ಪುರುಷರಿಗೆ ವರ್ಗಾವಣೆಗೊಂಡಿರಬಹುದು. ಆದರೂ ಅವರು ಪುರುಷರಾಗಿ ಈ ಆರಾಧನಾ ವಿಧಿಗಳಲ್ಲಿ ಪಾಲ್ಗೊಳ್ಳುವಂತಿರಲಿಲ್ಲ. ಅವರು ತಮ್ಮ ಸ್ವರೂಪವನ್ನು ಸ್ತ್ರೀಯಾಗಿ ಮಾರ್ಪಡಿಸಿಕೊಂಡಾಗ ಮಾತ್ರ ಈ ವಿಧಿಗಳಲ್ಲಿ ಪಾಲ್ಗೊಳ್ಳುವಂತಿತ್ತು. ಸಾಮಾನ್ಯವಾಗಿ ಈ ರೀತಿಯ ಮಾರ್ಪಾಡನ್ನು ಅವರು ಸ್ತ್ರೀಯ ಉಡುಗೆಯನ್ನು ಧರಿಸುವ ಮೂಲಕ ಮಾಡಿಕೊಳ್ಳುತ್ತಿದ್ದರು. ಈ ತತ್ವವನ್ನು ನಾಗಮಂಡಲ/ಡಕ್ಕೆಬಲಿಗಳ ಅರ್ಧನಾರಿವೇಷದಲ್ಲಿ ಗುರುತಿಸಬಹುದು.

ನಾಗಮಂಡಲದ ಕಲ್ಪನೆಯಲ್ಲಿ ಡಾ. ಶಿವರಾಮಕಾರಂತರು ದ್ರಾವಿಡ–ಆರ್ಯ ಸಂಪ್ರದಾಯಗಳ ಸಮ್ಮಿಲನವನ್ನು ಗುರುತಿಸುತ್ತಾರೆ. (1972 ಡಾ. ಕಾರಂತ) ದ್ರಾವಿಡ ಸಂಸ್ಕೃತಿಯ

ಪ್ರತೀಕವಾದ ದ.ಕನ್ನಡದ ಭೂತಾರಾಧನೆಯಲ್ಲಿ ಪಾತ್ರಿಯು ತಾನು ದೈವವೇದೇ ನಂಬಿ ಕುಣಿ ದರೆ ಮುಂದೆ ಜನಸಂಸ್ಕೃತಿ ಬದಲಾದ ಫಲವಾಗಿ ದೈವದ ಘೋರ ಸ್ವರೂಪವನ್ನು ಪುರುಷನಾಗಿ ಚಿತ್ರಿಸಿ ಅದನ್ನು ಒಲಿಸುವ ಕೆಲಸ 'ಪ್ರಕೃತಿಗೆ' ಒಪ್ಪಿಸುವ ರೂಪಾಂತರ ಅನಂತರ ಬಂದ ಆರ್ಯ ಸಂಸ್ಕೃತಿಯ ಫಲವಿರಬೇಕು. (1972 ಡಾ ಕಾರಂತ) ಸುಂದರವಾಗಿ ರೇಖಿಸಿದ ಮಂಡಲದ ಸುತ್ತಲೂ ಪಾತ್ರಿ ಮತ್ತು ವೈದ್ಯ ಅಂದರೆ ಕ್ರಮವಾಗಿ ಪುರುಷ ಮತ್ತು ಪ್ರಕೃತಿ ಯರು ಕುಣಿಯುತ್ತಾರೆ. ನಾಗಪಾತ್ರಿ ಮೊದಲಿಗೆ ಕುಪಿತನಾಗಿ, ಸುತ್ತಿಸುಳಿದು ಶರೀರ ವನ್ನು ಸುರುಳಿಸುರುಳಿಯಾಗಿ ಗಂಟಿಕ್ಕಿಕೊಂಡು ಹಡೆಯೆತ್ತುತ್ತಾನೆ. ಮುಂದೆ ಪ್ರಕೃತಿಯು ಭಕ್ತಿಗೆ ಮಣಿದು ಒಲಿಯುತ್ತಾನೆ. ಈ ಭಾವನೆ ಕುಣಿತದ ತರಂಗಿತತೆಯಲ್ಲಿ ರಸಾವಿಷ್ಕಾರಕ್ಕೆ ಎಡೆಮಾಡಿಕೊಡುತ್ತದೆ. ನೃತ್ಯ ವೈವಿಧ್ಯಕ್ಕೆ ಅನುವು ಮಾಡಿಕೊಡುತ್ತದೆ. ಹಾಡುವ ಹಾಡು ನಾಗನಿಗೆ ಅಥವಾ ಸಂಬಂಧಿತ ದೈವಕ್ಕೆ[12] ಕುರಿತಿರುತ್ತದೆ.

## ನಾಗಮಂಡಲದ ಚಿತ್ತಾರ

ನಾಗಮಂಡಲ–ವಿಧಿ ಆಚರಣೆಯ ಸ್ವರೂಪ (ನಾಲ್ಕು ಪವಿತ್ರ ಗಂಟುಗಳಿದ್ದರೆ 1/4 ಮಂಡಲ ಎಂಟು ಪವಿತ್ರಗಂಟುಗಳಿದ್ದರೆ 1/2 ಮಂಡಲ, ಹದಿನಾರು ಪವಿತ್ರ ಗಂಟುಗಳಿದ್ದರೆ ಪೂರ್ಣ ಮಂಡಲ) ವಿಶಾಲವಾದ ಬಯಲಿನ ನಡುವೆ ಎತ್ತರಿಸಿದ ವೇದಿಕೆಯನ್ನು ಸಜ್ಜುಗೊಳಿಸ ಲಾಗುತ್ತದೆ. ರಂಗದ ನಡುವೆ ಕಂಬಬಾರದ ಚಪ್ಪರ ನಿರ್ಮಿಸಿ, ಅದರ ಕೆಳಗೆ ಮೇಲ್‌ಗಟ್ಟು ಕಟ್ಟಿ ವಸ್ತ್ರದ ಜಾಲರಿ ಇಳಿಬಿಡಲಾಗುತ್ತದೆ. ಇಳಿಬಿಟ್ಟ ಸಿರಿಯೊಲಿ (ತೆಂಗಿನ ಮರದ ಎಳೆ ಗರಿ) ಯಿಂದ ತಾವ್ರೆಮೆಟ್ಟಿ (ತಾವರೆ ಮೊಗ್ಗು) ತಾವರೆ ಹೂ, ಗಿಳಿ ಮುಂತಾದ ರಚನೆ ಗಳನ್ನು ಮಾಡಿ (ವನಪ್ರದೇಶ ಎಂಬ ಭಾವನೆ ಬರುವ ಸಲುವಾಗಿ) ಮೇಲ್‌ಗಟ್ಟಿನಿಂದ ಇಳಿಬಿಡಲಾಗುವುದು.

ನಾಗಮಂಡಲದ ಸ್ವರೂಪಕ್ಕನುಸರಿಸಿ ವೈದ್ಯರು ಬಾಳೆಹಂಬೆ (ಬಾಳೆದಿಂಡಿನ ಹೊರಕವಚ) ಯ ಅಳತೆಪಟ್ಟಿಯಿಂದ ಮಂಡಲಕ್ಕೆ ಹೊರ ಚೌಕಟ್ಟನ್ನು ಹಳದಿಬಣ್ಣದ ಹುಡಿಯಿಂದ ರೇಖಿಸು ತ್ತಾರೆ. ಮೊದಲಿಗೆ ಮಂಡಲದ ಮಧ್ಯಭಾಗದಲ್ಲಿ ಗಣಪತಿ ★ ಯನ್ನು ಬರೆದು, ನಾಗ ಮಂಡಲವನ್ನು ನಡೆಸುವ ಯಜಮಾನ, ಪುರೋಹಿತ ಹಾಗೂ ವೈದ್ಯರ ಸಮಕ್ಷಮದಲ್ಲಿ ಮಂಡಲ ರಚನೆಗೆ ಯಾವುದೇ ಅಡೆತಡೆ ಬಾರದಂತೆ ಪ್ರಾರ್ಥನೆ ಸಲ್ಲಿಸಲಾಗುತ್ತದೆ. ಪೂರ್ಣ ಮಂಡಲಕ್ಕೆ (16 ಪವಿತ್ರ) ರಂಗೋಲಿ ಚಿತ್ತಾರ ಬರೆಯಲು 6 ಮಂದಿಗೆ ಸುಮಾರು ಆರು ಗಂಟೆಗಳ ಕಾಲ ತಗಲುತ್ತದೆ. ಏಳು ಹೆಡೆಯ ಸರ್ಪದ ಭೀಮಕಮನೀಯ ಆಕೃತಿಯನ್ನು ಸುರುಳಿಸುರುಳಿಯಾಗಿ ಪವಿತ್ರಗಂಟುಗಳೊಂದಿಗೆ ಬರೆವ ಮೊದಲಿಗೆ ಜೀವರೇಖೆ[13] ಅಥವಾ ಆಧಾರರೇಖೆಯನ್ನು ಎಳೆಯುತ್ತಾರೆ. ಇದನ್ನು ಒಬ್ಬನೇ ಮೊದಲಿಂದ ಕೊನೆಯವರೆಗೆ ಬರೆಯಬೇಕಾಗುತ್ತದೆ. ಮಂಡಲದ ಸ್ವರೂಪಕ್ಕನುಸರಿಸಿ ಪವಿತ್ರ ಗಂಟುಗಳನ್ನು ಹಾಕು ತ್ತಾರೆ. ಜೀವರೇಖೆಯ ಇಕ್ಕೆಲಗಳಲ್ಲಿ ಹಳದಿಬಣ್ಣದಲ್ಲಿ ಹಾವಿನ ನಕ್ಷೆ ಬಿಡಿಸುತ್ತಾರೆ. ಹಾವಿನ ಕಣ್ಣಿಗೆ ಕೆಂಪುಬಣ್ಣವನ್ನು ಬಳಸುತ್ತಾರೆ. 'ಪವಿತ್ರ' ದೊಳಗಿನ 'ಹೊಗ್ಗು ಹೊರಡು ವಿಕೆ' ಯನ್ನು ಕಪ್ಪು ಬಣ್ಣದಲ್ಲಿ ರೇಖಿಸುತ್ತಾರೆ. ಬಿಳಿ ಹುಡಿಯನ್ನು ಬಳಸಿ ಚುಕ್ಕಿಚುಕ್ಕಿ

ಯಾಕಾರದಲ್ಲಿ ನಾಗನಿಗೆ 'ಕಾಲು' ಬಿಡಿಸುತ್ತಾರೆ. ನಾಗನ ಆಕೃತಿಯ ನಡುನಡುವೆ 'ಮರಿ ಮಟ್ಟೆ' (ಮರಿಮೊಟ್ಟೆ) ಗಳನ್ನು ಬಿಳಿಹುಡಿಯಿಂದ ರೂಪಿಸುತ್ತಾರೆ. ಮೊದಲು ಹಸುರು ಬಣ್ಣದ ಹುಡಿ, ಮೇಲೆ ಬಿಳಿ, ಅರಸಿನ, ಕೆಂಪು, ಕಪ್ಪು-ಹೀಗೆ ಐದುಬಣ್ಣಗಳನ್ನು ಬಳಸಿ ಹೆಡೆಯ 'ಉಬ್ಬ'ನ್ನು ರಚಿಸುತ್ತಾರೆ. ಹೆಡೆಯ ಕೆಳಭಾಗದಲ್ಲಿ ವಿಷ್ಣುಪಾದವನ್ನು s ಆಕಾರದಲ್ಲಿ ರೇಖಿಸುತ್ತಾರೆ. (ಇದು ಕೃಷ್ಣ ಕಾಳಿಂಗನ ಹೆಡೆ ಮೆಟ್ಟಿದುದರ ಸಂಕೇತ) ಹೆಡೆಯ ಮೇಲೆ ದೊಡ್ಡ ಪ್ರಭಾವಳಿ (ಪ್ರಭಾವಲಯ) ವೊಂದನ್ನು ಬಿಡಿಸಿ ಅದರ ಒಳಗೆ ಬ್ರಹ್ಮನ ಮುಖ, ದ್ರಾಕ್ಷೆಬಳ್ಳಿ ಎಲೆಗಳನ್ನು ಕಪ್ಪು ಬಣ್ಣದಲ್ಲಿ 2" ಅಗಲ ಬಿಡಿಸುತ್ತಾರೆ. ಜಂಗಮನ ಸೊಪ್ಪಿನ ಹಸುರು ಹುಡಿಯಿಂದ ದಂಡೆ ಕಟ್ಟಿ ಅದರ ಮೇಲೆ ಸ್ವಸ್ತಿಕವನ್ನು ಇಡುತ್ತಾರೆ. ಚಿತ್ತಾರದ ಪಕ್ಕದಲ್ಲೇ ಸೀಯಾಳ, ಹಿಂಗಾರ, ಅಡಕೆ, ವೀಳ್ಯದೆಲೆ, ಹಣ್ಣಿನ ರಾಶಿ ಇರಿಸುತ್ತಾರೆ.

**ವಾದ್ಯ :** ನಾಗಮಂಡಲ/ಡಕ್ಕೆಬಲಿಯಲ್ಲಿ ಬಳಸುವ ವಾದ್ಯಗಳೆಂದರೆ ಮರದ ಡಕ್ಕೆ, ಕಂಚಿನ ಡಕ್ಕೆ, ತಾಳ, ಚಕ್ರತಾಳ, ಅರ್ಧನಾರಿವೇಷ ತೊಟ್ಟ ವೈದ್ಯನ ಕೈಯಲ್ಲಿರುವುದು ಕಂಚಿನ ಡಕ್ಕೆ. ಕುಣಿಸುವ ವೈದ್ಯನ ಕೈಯಲ್ಲಿರುವುದು ಮರದ ಡಕ್ಕೆ. ಜೊತೆಗಿರುವ ಇಬ್ಬರು ಮೇಳದವರ ಕೈಯಲ್ಲಿ ತಾಳ ಮತ್ತು ಚಕ್ರತಾಳಗಳಿರುತ್ತವೆ. ಡಕ್ಕೆ ತುಳುವರ ದುಡಿಯನ್ನು ಹೋಲುತ್ತದೆ. ಈ ಜನಪದ ವಾದ್ಯದ ಸಂಸ್ಕೃತೀಕರಣಗೊಂಡ ರೂಪ ಶಿವನ ಕೈಯಲ್ಲಿನ ಡಮರು ಇರಬಹುದೋ ಏನೊ ? ಖದಿರ ಅಥವಾ ಕಾಚು ಮರದ ಕಳಸಿಗೆ ಮತ್ತು ಆಡಿನ ಜಠರಕೋಶದ ಚರ್ಮವನ್ನು ಡಕ್ಕೆಯಲ್ಲಿ ಬಳಸಲಾಗುವುದು. ಈ ಎರಡು ಬಗೆಯ ಡಕ್ಕೆಗಳು ವಿಧವಿಧವಾದ ನಾದತರಂಗಗಳನ್ನು ಹೊಮ್ಮಿಸಬಲ್ಲವು. ಇಂದು ಯಕ್ಷಗಾನದಲ್ಲಿ ಬಳಸಲಾಗುವ ಮದ್ದಲೆ ದಕ್ಷಿಣಾದಿಯ ಪ್ರಭಾವದಿಂದ ಬಂತು ಎನ್ನಲಾಗುತ್ತಿದೆ. ಯಕ್ಷಗಾನದ ಮದ್ದಲೆಗಿಂತ ಉದ್ದವಾದ ಡಕ್ಕೆಯ ಧ್ವನಿಗೆ ಹೋಲುವ ಪಟಹ ತಿಮಿಲೆ-ಎನ್ನುವ ಚರ್ಮವಾದ್ಯವನ್ನು ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ದೇವಾಲಯಗಳಲ್ಲಿ ಇಂದಿಗೂ ಕಾಣಬಹುದು. ಹೀಗಾಗಿ ಜಿಲ್ಲೆಯ ಹರಿಜನ ವರ್ಗದವರ ಕೈಯಲ್ಲಿನ ದುಡಿ, ವೈದ್ಯ/ಪಾಣರ ಕೈಯಲ್ಲಿನ ಡಕ್ಕೆಯೇ ವಿಕಾಸಗೊಂಡು ಯಕ್ಷಗಾನದ ಮದ್ದಲೆಗೆ ಇಂಬುಕೊಟ್ಟಿರಬಹುದೋ ಏನೊ ? ಡಕ್ಕೆಯಲ್ಲಿ ಮದ್ದಲೆಯ ಎಲ್ಲಾ ನುಡಿತಗಳು ಸ್ಪಷ್ಟವಾಗಿ ಕಂಡುಬಾರದಿದ್ದರೂ, ತಾಳಗಳ ದಸ್ತುಗಳು, ಬಿಡ್ತಿಗೆಗಳು, ಚಾಲುಗಳು ಯಕ್ಷಗಾನದಲ್ಲಿನಂತೆಯೇ ಇವೆ. ವೈದ್ಯರು ಬಳಸುವ ಚಕ್ರತಾಳ ಹಾಗೂ ಅದನ್ನು ಬಾರಿಸುವ ಕ್ರಮಕ್ಕೂ ತೆಂಕುತಿಟ್ಟಿನಲ್ಲಿ ಚಕ್ರತಾಳವನ್ನು ಬಳಸುವ ಕ್ರಮಕ್ಕೂ ಸಾಮ್ಯತೆ ಇದೆ. ಅಲ್ಲಿ ಚಂಡೆಯೊಡನೆ ಅದು ಮೇಳಗೊಂಡು ವಿಶೇಷ ನಾದ-ತರಂಗಿತತೆಯನ್ನು ಸೃಷ್ಟಿಸುವಂತೆಯೇ ಇಲ್ಲಿ ಡಕ್ಕೆಯೊಡನೆ ಇದು ವರ್ತಿಸುತ್ತದೆ.

**ಕುಣಿತ :** ನಾಗಮಂಡಲ/ಡಕ್ಕೆಬಲಿಗಳ ಮಂಡಲ ಚಿತ್ತಾರಗಳ ಹೊರಸುತ್ತಿನಲ್ಲಿ ವೈದ್ಯರು/ಪಾಣರು ಪ್ರದರ್ಶಿಸುವ ಕುಣಿತ ಸುಂದರವೂ, ತರಂಗಬದ್ಧವೂ ಬಗೆಬಗೆಯ ಭಾವರಸಕ್ಕೆ ಒದಗಿ ಬಂದಿರುವ ಒಂದು ನೃತ್ಯವಿಧಾನವಾಗಿದೆ. ಹಿಗ್ಗು-ಉತ್ಸಾಹ-ವೀರಾವೇಶಗಳ ಅಭಿವ್ಯಕ್ತಿ ಸಾಮಾನ್ಯವಾಗಿ ಜನಪದ ಕುಣಿತಗಳಲ್ಲಿ ಕಾಣಿಸುವ ಭಾವಗಳಾದರೆ. ಈ ಆಚರಣೆಯ ಕುಣಿತದಲ್ಲಿ ಹೆಚ್ಚಿನ ಭಾವವಿಸ್ತಾರವನ್ನು ಕಾಣುತ್ತೇವೆ. ಪ್ರಕೃತಿ (ಅರ್ಧನಾರಿವೇಷ) ಹಾಗೂ

ಪುರುಷ (ನಾಗ ಪಾತ್ರಿ ಅಥವಾ ದೈವದ ಪಾತ್ರಿ) ರ ಕುಣಿತದಲ್ಲಿ ಒಮ್ಮೆ ಕಲಹ, ಇನ್ನೊಮ್ಮೆ ಸ್ನೇಹ, ಮಗದೊಮ್ಮೆ ದೀನತೆ, ಮತ್ತೊಮ್ಮೆ ಆಕ್ರೋಶ-ಹೀಗೆ ಬಹುಬಗೆಯ ಭಾವ ಪ್ರದರ್ಶನ ಕಾಣುತ್ತದೆ. ದೇಹದ ಎಲ್ಲಾ ಭಾಗಗಳಿಗೂ ಕೆಲಸ ನೀಡುವ, ಬಹುಭಾವಗಳಿಗೆ ಅವಕಾಶ ನೀಡುವ ಈ ಕುಣಿತ ಮುಂದೆ ಯಕ್ಷಗಾನ ಬಯಲಾಟಕ್ಕೆ ಎಡೆಮಾಡಿ ಕೊಟ್ಟಿರ ಬಹುದು ಎಂಬ ಅಭಿಪ್ರಾಯ ಡಾ. ಶಿವರಾಮ ಕಾರಂತರದು (1963 ಡಾ. ಕಾರಂತ). ಜನ ಪ್ರಿಯ ಕಥಾನಕಗಳನ್ನೊಳಗೊಂಡ ರಾಮಾಯಣ ಮಹಾಭಾರತಗಳ ರೋಚಕ ಪ್ರಸಂಗಗಳು ಘಟನಾವಳಿಗಳು ಅರ್ಧನಾರಿವೇಷದ ನಾಗನರ್ತಕನ ಕುಣತ ಮುಂದೆ ನಾಲ್ಕಾರು ಮಂದಿಯ ಕುಣಿತಕ್ಕೆ ತಿರುಗಿರಬೇಕು. (ಗ್ರೀಸ್ ದೇಶದಲ್ಲೂ ಮತಾಚರಣೆಯ ಸಂದರ್ಭದಲ್ಲಿ ಮೇಳ ನಾಯಕನು ತನ್ನ ಸಹಚರರೊಂದಿಗೆ ನಡೆಸುತ್ತಿದ್ದ ಮೇಳನೃತ್ಯಗೀತವೇ ಮುಂದೆ ನಾಲ್ಕಾರು ಪಾತ್ರಧಾರಿಗಳ ಬೆಳವಣಿಗೆಯೊಂದಿಗೆ ನಾಟಕ ಸ್ವರೂಪವನ್ನು ಪಡೆಯಿತು ಎನ್ನುವುದನ್ನು ಗಮನಿಸಬೇಕು).

ವೈದ್ಯರು/ಪಾಣರು ವಿಧಿ ಆಚರಣೆಗಳ ಸಂದರ್ಭಗಳಲ್ಲಿ ಹಾಡುವ 'ಹೊಗಳಿಕೆ'ಗಳ ಧಾಟಿ, ಮಟ್ಟುಗಳು, ಯಕ್ಷಗಾನದ ರಾಗಗಳಂತೆಯೇ ಇವೆ. ಹೆಚ್ಚಾಗಿ ನಾಟಿ, ಮಧ್ಯಮಾವತಿ, ಸುರುಟಿ, ಆರಭಿ ಅಠಾಣ, ಕನಡಾ, ಮೋಹನ, ಭೂಪಾಳಿ ರಾಗಗಳು ಯಕ್ಷಗಾನದಲ್ಲಿ ನಂತೆಯೇ ಒಂದು ಪದವನ್ನು ಮೊದಲು ಮಂದಗತಿಯ ತಾಳದಲ್ಲಿ ಪ್ರಾರಂಭಿಸಿ ನಡುವೆ ಮುಕ್ತಾಯ ಮುರಿದು ಮುಂದೆ ಚುರುಕುಗತಿಯ ಬೇರೆ ಬೇರೆ ತಾಳಕ್ಕೆ ಬದಲಾಯಿಸುವ ಕ್ರಮವೂ ಇದೆ.

ನಾಗಮಂಡಲದ ವೈದ್ಯರು ಭರತನ ನಾಟ್ಯಶಾಸ್ತ್ರವನ್ನು ಅಭ್ಯಾಸ ಮಾಡದಿದ್ದರೂ ತಲೆಮೊರೆ ಯಿಂದ ಈ ಮಂಡಲದ ಕುಣಿತವನ್ನು ಅಂತಸ್ಥಗೊಳಿಸಿಕೊಂಡು ಬಂದವರು. ತಮ್ಮ ಕುಣಿತ ದಲ್ಲಿ ಭಾವಪ್ರಕಾಶನಕ್ಕಾಗಿ ಹಸ್ತಮುದ್ರೆಯನ್ನು ಬಳಸುತ್ತಾರೆ. ಇಲ್ಲಿ ಕೆಲವು ಮುದ್ರೆಗಳು ನಾಟ್ಯಶಾಸ್ತ್ರದಲ್ಲಿ ಬಳಕೆ ಇರುವಂತಹವುಗಳು. ಕೆಲವು, ಹೊಸದಾದವು.

1 ಪತಾಕ ಹಸ್ತ : ನಾಗದೇವತೆಯನ್ನು ಶಾಂತಗೊಳ್ಳುವಂತೆ ಪ್ರಾರ್ಥಿಸುವ ಸಂದರ್ಭ

2 ತ್ರಿಪತಾಕ : ದೇವಾನುದೇವತೆಗಳ ಪ್ರಾರ್ಥನೆಯ ಸಂದರ್ಭ

3 ಅರ್ಧಚಂದ್ರ : ಪ್ರಾಥನಾ ಸಂದರ್ಭ

4 ಸೂಚಕ : ಕ್ರೋಧ ಅಸಹನೆಯ ಅಭಿವ್ಯಕ್ತಿಯ ಸಂದರ್ಭ

5 ಅಲಪಲ್ಲವಿ

6 ಪದ್ಮಕೋಶ

7 ಶಿಖರ : ದೈವಕೃಪೆ ಕರುಣೆ ಒಲವಿನ ಹಾರೈಕೆಯ ಸಂದರ್ಭ

8 ಸರ್ಪಶೀರ್ಷ:ನಾಗನ ಸೂಚಕ

9 ಮೃಗಶೀರ್ಷ

10 ಸಿಂಹಮುಖ

11 ಕಪಿತ್ಥ

12 ಅಂಗುಲ

13 ಅಭಯ

14 ಕರ್ತರಿ ಮುಖ

15 ಸುಖ ತುಂಡ

ನಾಗಮಂಡಲ/ಡಕ್ಕೆಬಲಿಗಳು ಆರಾಧನಾ ವಿಧಿಗಳಾದರೂ ಅಲ್ಲಿ ಕಲೆಯ ಅಂಶವನ್ನು ಖಚಿತವಾಗಿ ಗುರುತಿಸಬಹುದಾಗಿದೆ. ಕಲಾವಿದನೊಬ್ಬನ ವ್ಯಕ್ತಿವಿಶಿಷ್ಟವಾದ ಸಂವೇದನೆ ನೃತ್ಯ, ಚಿತ್ರ, ಗೀತ ಮುಂತಾದವುಗಳಲ್ಲಿ ಪ್ರಕಟಗೊಳ್ಳುವಾಗಲೂ ಮಾಧ್ಯಮವಾಗಿ ಬಣ್ಣರೇಖೆ, ತರಂಗಿತತೆ, ನಾದ ಇರಲೇಬೇಕಷ್ಟೆ ! ಇಂತಹ ಕಲೆಗಳು ಮೊದಲಿಗೆ ವ್ಯಕ್ತಿವಿಶಿಷ್ಟ ಅಭಿವ್ಯಕ್ತಿಯಾದರೂ ಮುಂದೆ ಸಮಾಜದ ಸಂವೇದನಾತ್ಮಕ ಸ್ವರೂಪವನ್ನು ಸ್ವೀಕರಿಸಿಕೊಳ್ಳುತ್ತವೆ. ನಾಗಮಂಡಲ/ಡಕ್ಕೆಬಲಿಗಳಲ್ಲಿ ಧಾರ್ಮಿಕಾಂಶಗಳೇ ಪ್ರಧಾನವಾಗಿದ್ದರೂ ಒಬ್ಬ ಸಹೃದಯ ಕಲಾವಿಮರ್ಶಕ ಅಲ್ಲಿ ಕಲೆಯ ಹಲವು ಅಂಶಗಳನ್ನು ಗುರುತಿಸುತ್ತಾನೆ. ಯಾವುದೇ ಲಿಖಿತ ರೂಪವನ್ನು ಪಡೆಯದೆ ಪ್ರಯೋಗದಲ್ಲೇ ತನ್ನ ಅಸ್ತಿತ್ವವನ್ನು ಪಡೆಯುವ ಇಲ್ಲಿನ ರಂಗಪರಿಕರ, ಮಂಡಲಚಿತ್ತಾರ, ಕುಣಿತ, ಗೀತಗಳಿಂದ ಕಲಾಪ್ರಕಾರ ಪೂರ್ಣತೆಯನ್ನು ಪಡೆಯುತ್ತದೆ.

ಪ್ರಕೃತಿಯ ಗೂಢತೆ, ಅದೃಶ್ಯ ಶಕ್ತಿಗಳನ್ನು ಕುರಿತ ಭಯ ಅವುಗಳನ್ನು ಒಲಿಸಿ ಸಂತೃಪ್ತಗೊಳಿಸುವ ಆಶಯಗಳನ್ನು ನಾಗಮಂಡಲ/ಡಕ್ಕೆಬಲಿಗಳಲ್ಲಿ ಗುರುತಿಸಬಹುದು. ಆರಂಭದಲ್ಲಿ ಇದೊಂದು ತಾಂತ್ರಿಕ ವಿಧಿಯಾಗಿದ್ದಿರಬಹುದಾದುದರಿಂದ ಅಲ್ಲಿ ರೇಖಿತವಾಗುವ ಸುಂದರವಾದ ಮಂಡಲ, ಅಲ್ಲಿನ ಬಣ್ಣಗಳ ಹದವಾದ ಮೈತ್ರಿ, ಅರ್ಧನಾರಿವೇಷ ತೊಟ್ಟವನ ವಿಶಿಷ್ಟ ವೇಷಭೂಷಣ, ಅವನ ಕೈಯಲ್ಲಿನ ಕಂಚಿನ ಡಕ್ಕೆಯ ನುಡಿತ ನಿರ್ಮಿಸುವ ಶ್ರವ್ಯಾತ್ಮಕ ವಾತಾವರಣ, ಆತನ ವಿವಿಧ ಬಗೆಯ ಬಾಗುಬಳುಕು, ತರಂಗಿತತೆ, ಹಾಡುವ ವೈದ್ಯನ 'ಸಾಹಿತ್ಯ' ನಿರ್ಮಿಸುವ ರಾಗಸಂಚಾರ-ಇವುಗಳಿಂದಾಗಿ ಪ್ರೇಕ್ಷಕ ವರ್ಗದಲ್ಲುಂಟಾಗುವ ಆನಂದ ತೃಪ್ತಿಯಲ್ಲಿ ಕಲೆಯ ಅಸ್ತಿತ್ವವನ್ನು ಗುರುತಿಸಬಹುದಾಗುತ್ತದೆ.

## ಟಿಪ್ಪಣಿಗಳು

1 ಬ್ರಾಹ್ಮಣನಾದವನು ಚರ್ಮವಾದ್ಯವನ್ನು ನುಡಿಸುವುದು ಶಾಸ್ತ್ರನಿಷಿದ್ಧವಂತೆ. ಆದರೆ ಇಂದು ನಾಗಮಂಡಲ/ಡಕ್ಕೆಬಲಿಗಳಲ್ಲಿ ವೈದ್ಯರು ಡಕ್ಕೆ ನುಡಿಸುತ್ತಾರಷ್ಟೆ. ಇದರ ಸಮರ್ಥನೆಗಾಗಿ ವೈದ್ಯರು ತಮ್ಮ ಡಕ್ಕೆ ಶಿವನ ಡಮರು ಅಲ್ಲದೆ ಬೇರೆ ಅಲ್ಲ. ಸಾಕ್ಷಾತ್ ಶಿವನೇ ಮಂಡಲ ಬರೆದು ಮಂಗಳಾಂತ್ಯದವರೆಗೆ ಡಮರು ಬಾರಿಸುವ ಅಧಿಕಾರವನ್ನು ಬ್ರಾಹ್ಮಣನಿಗೆ ನೀಡಿದನೆನ್ನುವುದು-ವೈದ್ಯರು ಹೇಳುವ ಪುರಾಣಕತೆ. ಇದರಿಂದ ಮೂಲತಹ ಬ್ರಾಹ್ಮಣರದ್ದಲ್ಲದ ಒಂದು ಆಚರಣೆಯನ್ನು ಮತ್ತೆ ಸ್ವೀಕರಿಸಿದ್ದು, ಎಂಬ ಪ್ರಾಕ್ಕಲ್ಪನೆಯನ್ನು ಮಾಡಬಹುದು.

2. ತುಳುವರ ಭೂತಗಳ ಹುಟ್ಟು-ಪ್ರತಾಪ-ಸಂಚಾರವನ್ನು ವಿವರಿಸುವ ಹಾಡಿನ ರೂಪದ ಗೀತಸಾಹಿತ್ಯವನ್ನು ಪಾಡ್ದನ ಎಂದು ಕರೆದಂತೆ ಜಿಲ್ಲೆಯ ಕನ್ನಡ ಪ್ರದೇಶಗಳ ದೇಸೀಯ

ದೈವಗಳ ಆರಾಧನೆ-ಡಕ್ಕೆಬಲಿಯ ಸಂದರ್ಭದಲ್ಲಿ ವೈದ್ಯರು/ಪಾಣರು ಹಾಡುವ ಗೀತರೂಪವೇ ಹೊಗಳಿಕೆ.

3. ನಾಗನಿಗೆ ಸಮಾಜದ ಎಲ್ಲಾ ಸ್ತರಗಳಿಂದಲೂ ಆರಾಧನೆ ನಡೆದು ಬರುತ್ತಿತ್ತು-ಎನ್ನುವುದಕ್ಕೆ ಕುಂದಾಪುರ, ಉಡುಪಿ ತಾಲೂಕುಗಳ ಹರಿಜನವರ್ಗದ **ನೇರ** ಜನಾಂಗದವರು ನಡೆಸಿಕೊಂಡು ಬರುತ್ತಿರುವ **ಕಾಡ್ಯನ** ಕೋಲವೇ ಸಾಕ್ಷಿ. ಕಾಡ್ಯ ಎಂದರೆ ಅಷ್ಟಕುಲದ ನಾಗಗಳಲ್ಲಿ ಒಂದಾದ 'ಕಾಳಿಂಗ.'

4. ಬ್ರಹ್ಮಮಂಡಲವು ಬ್ರಹ್ಮನ ಪ್ರೀತ್ಯರ್ಥವಾಗಿ ಜರಗುವ ವಿಧಿ ಆಚರಣೆ. ಇಲ್ಲಿ ಬ್ರಹ್ಮನೆಂದರೆ ಚತುರ್ಮುಖ ಬ್ರಹ್ಮನಲ್ಲ. ತುಳು ಭಾಷೆಯಲ್ಲಿ ಬೆರ್ಮೆರ್ ಎಂದು ಜನಜನಿತವಾಗಿರುವ ದೈವ. ಬೆರ್ಮೆರ್ ತುಳುವರ ಆದಿಮೂಲ ದೈವ. ಹಿರಿಯಡ್ಕ, ಮಂದರ್ತಿ, ಮಾರಣಕಟ್ಟೆ, ಪಡುಬಿದ್ರಿ-ಇಲ್ಲಿನ ಗುಡಿಗಳಲ್ಲಿ ಬ್ರಹ್ಮನಿಗಾಗಿ ಈ ಆರಾಧನಾ ವಿಧಿ ಜರಗುವುದುಂಟು.

5. ಡಕ್ಕೆಬಲಿ, ಮಂಡ್ಲಭೋಗ, ಮಂಡ್ಲಸೇವೆ, ಹೊಡಿಸೇವೆ, ದೈವಮಂಡ್ಲ, ಡಮರುಸೇವೆ-ಇವು ಈ ಆರಾಧನಾವಿಧಿಯ ಪರ್ಯಾಯನಾಮಗಳು.

6. ಹಾಡು ಮತ್ತು ಆಚರಣೆಗಳೊಳಗಿನ ಸಂಬಂಧ ತಪ್ಪಿಹೋಗಿ ಯಾವುದೇ ಹಾಡನ್ನು ಇನ್ಯಾವುದೇ ಸಂದರ್ಭದಲ್ಲಿ ಹಾಡುವುದನ್ನು ಅನೇಕ ಜನಪದ ಆಚರಣೆಗಳಲ್ಲಿ ಕಾಣುತ್ತೇವೆ ಇದನ್ನು Folk shift ಎನ್ನುತ್ತಾರೆ. ವಿವರಗಳಿಗೆ ನೋಡಿ : ಡಾ. ಕೆ. ಶಿವರಾಮ ಕಾರಂತರ **ದಕ್ಷಿಣ ಕನ್ನಡದ ಜನಪದ ಗೀತೆಗಳು.** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

7. SII ಸಂ. VII ಸಂ. 315

8. ವೈಯಕ್ತಿಕ ಸಂಭಾಷಣೆ : ಶ್ರೀ ಕೋಟಿಲಿಂಗ ವೈದ್ಯರೊಂದಿಗೆ

9. ಎ. ವಿ. ನಾವಡ ಅವರು ಸಂಪಾದಿಸಿರುವ **ವೈದ್ಯರ ಹಾಡುಗಳು** ಪುಸ್ತಕದ ಪುಟ 10ನ್ನು ಗಮನಿಸುವುದು.

ಕರವು ಎಂಟು ನಿಮಗೆ ಶಿರವು ನಾಲ್ಕು
ಹಿರಿದಪ್ಪಂತ ದೇಹ ಬ್ರಹ್ಮರಾಯರೆ
ಹರಿದ ತಲೆ, ನಿಮಗೆ ಮುರಿದ ಮೀಸೆ

ಈ ಬ್ರಹ್ಮನ ಮೇಲೆ ಜೈನಬ್ರಹ್ಮನ ಪ್ರಭಾವವನ್ನು ಗುರುತಿಸಬಹುದು-
ಕಾಶ್ಮೀರದಿಂದ ಹೊರವಂಟಂತವರು
ಹಾರುಕುದ್ರೆಯನ್ನೆ ಏರಿಕೊಳ್ಳುವಂಥವರು (**ವೈದ್ಯರ ಹಾಡುಗಳು** ಪುಟ 4)

10. ಪ್ರೊ: ಕ.ವೆಂ. ರಾಜಗೋಪಾಲ, ಯಕ್ಷಗಾನ-ತಂತ್ರ-ಡಕ್ಕೆಬಲಿ-ನಾಗದರ್ಶನ ಇತ್ಯಾದಿ **ಸಾಧನೆ** ಬೆಂಗಳೂರು ವಿಶ್ವವಿದ್ಯಾನಿಲಯ 1982 ಪುಟ 107.

11. ವಿವರಗಳಿಗೆ ದೇವಿಪ್ರಸಾದ ಚಟ್ಟೋಪಾಧ್ಯಾಯರ Lokayata ನೋಡಿ

ತಂತ್ರಪಂಥಕ್ಕೆ ಸೇರಿದ 'ಕುಬ್ಜಿಕಾ' ಶಾಖೆಯು ಕೆಳಜಾತಿಯಲ್ಲಿ ಒಂದಾದ ಕುಂಬಾರ ಜನಾಂಗದ್ದು ಎನ್ನಲಾಗಿದೆ. ಆದುದರಿಂದಲೇ ಈ ಶಾಖೆಯನ್ನು 'ಕುಲಾಲಿಕಾಮ್ನಾಯ' ಎಂದು ಕರೆಯುತ್ತಾರೆ.

12. ನಾಗಮಂಡಲ/ಡಕ್ಕೆಬಲಿಗಳಲ್ಲಿ ಹಾಡುವ ಹಾಡುಗಳು ಕೃಷ್ಣನಿಗೋ ಇನ್ನಾವ ಲಲಿತ ದೇವತೆಗೋ ಸಂಬಂಧಿಸಿದ್ದು, ಆರ್ಯ ಪೌರಾಣಿಕ ದೇವತೆಗೆ ಸಂಬಂಧಿಸಿದವು ಎಂಬ ಅಭಿಪ್ರಾಯ ಡಾ. ಶಿವರಾಮ ಕಾರಂತರದು (ದ.ಕನ್ನಡ ಜಿಲ್ಲೆಯಲ್ಲಿ ನೃತ್ಯಕಲೆಯ ವಿಕಾಸ ಪುಟ 241-242 ಪ್ರಕಟಣೆ **ಬಿಡಿಬರಹಗಳು** ಸಂ. ಶೇಖರ ಇಡ್ಯ-ಅಕ್ಷರಪ್ರಕಾಶನ ಸಾಗರ 1972) ಆದರೆ ವೈದ್ಯರು ಹಾಗೂ ಪಾಣರು ಈ ಆಚರಣೆಗಳಲ್ಲಿ ನಾಗನಿಗೆ, ಬ್ರಹ್ಮನಿಗೆ, ಯಕ್ಷಿಗೆ, ನಂದಿಗೆ, ಕ್ಷೇತ್ರಪಾಲನಿಗೆ, ಬೊಬ್ಬರ್ಯನಿಗೆ, ವೀರಭದ್ರನಿಗೆ, ಹಳೆಯಮ್ಮನಿಗೆ, ಮರ್ಲ್ ಚಿಕ್ಕು ಮುಂತಾದ ದೈವಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾರೆ.

ವೈದ್ಯರು ನಾಗಮಂಡಲದಲ್ಲಿ ಕೆಲವೊಂದು ಕನಕದಾಸ, ಪುರಂದರದಾಸರ ಕೀರ್ತನೆಗಳನ್ನೂ ಹಾಡುವುದುಂಟು. ಆದರೆ ಇದು ಈ ವಿಧಿ ಆಚರಣೆಗಳಿಗೆ ಹೊಂದತಕ್ಕದ್ದಲ್ಲ ಎಂಬ ಅರಿವು ಅವರಿಗಿದ್ದಂತಿಲ್ಲ.

13. ನಾಗಮಂಡಲ/ಡಕ್ಕೆಬಲಿಯ ಚಿತ್ತಾರಕ್ಕೆ ಬಳಸುವ ಬಣ್ಣಗಳು ಹೀಗಿವೆ:
ಹಳದಿ ಬಣ್ಣ–ಅರಿಶಿನ ಬೇರಿನ ಹುಡಿ
ಕೆಂಪು ಬಣ್ಣ–ಅರಿಶಿನ + ಸುಣ್ಣದಹುಡಿ
ಕಪ್ಪು ಬಣ್ಣ–ಬತ್ತದ ಹೊಟ್ಟನ್ನು (ಉಮಿ) ಕರಿಕುಗೊಳಿಸಿದ ಹುಡಿ
ಹಸಿರು ಬಣ್ಣ–ಜಂಗಮನ ಎಲೆಯ ಹುಡಿ
ಬಿಳಿ ಬಣ್ಣ–ಬೆಳ್ತಿಗೆ ಅಕ್ಕಿಯ ಹುಡಿ
ಇವನ್ನು ಸಾಮಾನ್ಯವಾಗಿ **ಪಂಚವರ್ಣ** ಎನ್ನಲಾಗುತ್ತದೆ.

14. ★ ಈ ಮಂಡಲದ ವಿಸ್ತಾರಿತ ಚಿತ್ರವನ್ನು ಚಿತ್ರಪುಟದಲ್ಲಿ ನೋಡಿರಿ

**ಉಲ್ಲೇಖನಗಳು**

ಡಾ|| ಕಾರಂತ ಕೆ. ಎಸ್.

–1963 **ಯಕ್ಷಗಾನ ಬಯಲಾಟ** ಹರ್ಷ ಪ್ರಕಟಣಾಲಯ, ಪುತ್ತೂರು(ದ್ವಿ. ಮುದ್ರಣ) ಪು. 114-131

–1971 **ದ. ಕನ್ನಡದ ಜಾನಪದ ಗೀತೆಗಳು** (ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪು. 14

–1972 **ಬಿಡಿಬರಹಗಳು** ಸಂ. ಶೇಖರ ಇಡ್ಯ ಅಕ್ಷರ ಪ್ರಕಾಶನ ಸಾಗರ, ಪು. 236-245

ಕೆದ್ಲಾಯ ಕೆ. ಎಸ್.

–1977 ಪಾಣಾರಾಟ **ಕುಂದದರ್ಶನ** ಭಂಡಾರ್ಕಾರ್ಸ್ ಕಾಲೇಜ್, ಕುಂದಾಪುರ ಪು. 41-48

ದೇವಿಪ್ರಸಾದ ಚಟ್ಟೋಪಾಧ್ಯಾಯ
–1983 (ಕನ್ನಡ ಸಂಕ್ಷೇಪಾನುವಾದ) **ಲೋಕಾಯತ** ಟಿ.ಎಸ್.ವೇಣುಗೋಪಾಲ, ಶೈಲಜ, ಭಾರತೀ ಪ್ರಕಾಶನ ಮೈಸೂರು-9

ನಾವಡ ಎ. ವಿ.
–1985 **ವೈದ್ಯರ ಹಾಡುಗಳು**-ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ, ಈ ಪುಸ್ತಕದ ಪ್ರಸ್ತಾವನೆ.

ಗೋವಿಂದ ಪೈ. ಎಂ.
–1947 ತುಳುನಾಡು ಪೂರ್ವಸ್ಮೃತಿ '**ತೆಂಕನಾಡು**' ಕಾಸರಗೋಡು ಸಾಹಿತ್ಯ ಸಮ್ಮೇಳನ ಸಂಚಿಕೆ, ಕಾಸರಗೋಡು.

# ಭೂತಾರಾಧನೆಯಲ್ಲಿ ಅಲಂಕರಣ–ಒಂದು

–ಕೆ. ಚಿನ್ನಪ್ಪಗೌಡ

**ಭೂ**ತಾರಾಧನೆಯು ಒಂದು ಧಾರ್ಮಿಕ ಜನಪದ ರಂಗಭೂಮಿಯಾಗಿ ದಕ್ಷಿಣ ಕನ್ನಡದಲ್ಲಿ ವಿಕಾಸ ಹೊಂದಿದೆ-ಎನ್ನಬಹುದು. ಭೂತಗಳನ್ನು ತೃಪ್ತಿಗೊಳಿಸುವ ದೃಷ್ಟಿಯಿಂದ ಜನಪದರು ಈ ಆರಾಧನೆಯನ್ನು ನಡೆಸುತ್ತಾ ಬಂದಿರುತ್ತಾರೆ. ಪ್ರಶಸ್ತವಾದ ಕಾಲ, ಸ್ಥಳ ಮತ್ತು ಪರಿಸರಗಳಿಗೆ ಬದ್ಧವಾಗಿ ನಿರ್ಮಾಣಗೊಳ್ಳುವ ಈ 'ಮಧ್ಯಂತರ ಜಗತ್ತು' ಜನಪದರ ಮಾನಸಿಕ ನಂಬಿಕೆ ಕಲ್ಪನೆಗಳನ್ನೊಳಗೊಂಡಿದ್ದುದಾಗಿದೆ.

ಆರಾಧನೆಯ ಸಂದರ್ಭದಲ್ಲಿ ಭೂತಗಳು ಕುಣಿತ ಮತ್ತು ಮಾತುಗಳ ಮೂಲಕ ತೃಪ್ತಿಯನ್ನು ವ್ಯಕ್ತಪಡಿಸುತ್ತವೆ. ಇದಕ್ಕಾಗಿ ಬಣ್ಣ, ಕುಣಿತ, ಹಾಡು. ಹಾಗೂ ಹಿಮ್ಮೇಳಗಳನ್ನು ಬಳಸಲಾಗುತ್ತದೆ. ಜನಪದರ ದೃಷ್ಟಿಯಲ್ಲಿ ಭೂತಾರಾಧನೆಯೆಂದರೆ ಎಲ್ಲರೂ ಸೇರಿ ಸಾಮೂಹಿಕವಾಗಿ ನಡೆಸುವ ಒಂದು, ಧಾರ್ಮಿಕ ಆಚರಣೆಯೇ ಆಗಿದೆ. ಈ ಧಾರ್ಮಿಕ-'ಆರಾಧನೆಯ' ಉದ್ದೇಶವನ್ನು ದೃಶ್ಯ ಮತ್ತು ಶ್ರವ್ಯ ಮಾಧ್ಯಮಗಳ ಮೂಲಕ ನಿರ್ವಹಿಸಲಾಗುತ್ತದೆಯಷ್ಟೆ. ಕಣ್ಣಿಗೆ ಕಾಣುವ ಅಲಂಕಾರವು ಒಂದು ಪಾಲಾದರೆ ಕಿವಿಗೆ ಕೇಳಿಸುವ ಮಾತು, ಅಟ್ಟಹಾಸ, ಹಾಡು, ವಾದನಗಳು ಮತ್ತೊಂದು ಪಾಲು. ಇವೆರಡೂ ಒಂದಕ್ಕೊಂದು ಪೂರಕವಾಗಿ ಅಭಿವ್ಯಕ್ತಿಗೊಳಿಸುವಲ್ಲಿ (ಭೂತಾರಾಧನೆಯು) ಕೆಲಸ ಮಾಡುತ್ತದೆ. ಒಟ್ಟಾರೆ ಲೌಕಿಕ ಸ್ವರೂಪವನ್ನು ಮರೆಮಾಚಿ ಒಂದು ಅಪೂರ್ವ ಅಲೌಕಿಕ ವಾತಾವರಣವನ್ನು ಪ್ರತಿಬಾರಿಯೂ ಸೃಷ್ಟಿ ಮಾಡುವುದಕ್ಕೆ ಅನುಕೂಲವಾಗುತ್ತದೆ.

ಇಲ್ಲಿ ಬಳಕೆಯಾಗುವ ರೀತಿ-ನೀತಿಗಳನ್ನು ಬರಿಯ 'ಕಲೆ' ಯೆಂದು ಪರಿಗಣಿಸದೆ ಧಾರ್ಮಿಕವಾದ ಒಂದು ಆರಾಧನೆಯ ಪರಿಕರಗಳೆಂಬುದಾಗಿಯೇ ತಿಳಿಯಬೇಕಾಗುತ್ತದೆ. ಇವು ಒಂದು ಪ್ರದರ್ಶನದಲ್ಲಿ Performance ಅನ್ವಯವಾಗುವ ರೀತಿಯು ಧಾರ್ಮಿಕವೇ ಆಗಿರುತ್ತದೆ. ಅಥವಾ ಇದೆಲ್ಲಾ ಆರಾಧಕರ ದೃಷ್ಟಿಯಲ್ಲಿ 'ಒಂದು ಕಲೆ' ಯೆಂತೂ ಆಗಿರುವುದಿಲ್ಲ. ಆದುದರಿಂದ ಇದನ್ನೆಲ್ಲಾ 'ಒಂದು ಕ್ರಿಯಾವಿಧಿ'ಯೆಂಬುದಾಗಿ ತಿಳಿದುಕೊಂಡು ಅಲ್ಲಿ ಬಳಕೆಯಾಗುವ ಬಣ್ಣ, ಆಭರಣ, ಆಯುಧ ಮತ್ತು ವಸ್ತುವಿನ್ಯಾಸಗಳ ಔಚಿತ್ಯ ಹಾಗೂ ಸಾಂಕೇತಿಕ ಅರ್ಥಗಳನ್ನು ಗ್ರಹಿಸಬೇಕಾಗುತ್ತದೆ.[1] ಇಲ್ಲಿಯ ಸಂಗತಿಗಳೆಲ್ಲವೂ ಕಂಠಸ್ಥ ಪರಂಪರೆ Oral Tradition ಯ ಮೂಲಕ ಮುಂದುವರಿದುಕೊಂಡು ಬಂದದ್ದೆ ಆಗಿವೆ. ಒಂದು ತಾತ್ವಿಕ ಹಿನ್ನಲೆಯನ್ನಿಟ್ಟುಕೊಂಡು ಈ ಆರಾಧನೆಯ ಮುಖವರ್ಣಿಕೆ, ಆಭರಣ. ಮುಖವಾಡ. ಆಯುಧ, ಅಲಂಕಾರದ ವಸ್ತುಗಳು-ಇವುಗಳನ್ನೆಲ್ಲಾ ಇಲ್ಲಿ ಸ್ಥೂಲವಾಗಿ ವಿವೇಚಿಸಬಹುದಾಗಿದೆ.

**ಮುಖವರ್ಣಿಕೆ :** ಭೂತದ ವೇಷಕಟ್ಟುವ ಸಂದರ್ಭದಲ್ಲಿ ಬಣ್ಣದ ಕೆಲಸಕ್ಕೆ ಮುಖ್ಯವಾಗಿ ಮುಖವನ್ನು ಬಳಸಿಕೊಳ್ಳುತ್ತಾರೆ. ಕೆಲವು ರೀತಿಯ ಬಣ್ಣ, ಮುದ್ರೆ ಮತ್ತು ರೇಖೆಗಳಿಂದ

ಮುಖವನ್ನು ಪಾತ್ರಿಗಳೇ ಅಲಂಕರಿಸಿಕೊಳ್ಳುತ್ತಾರೆ. ಜಟಾಧಾರಿ, ಜಗಬಂಟ, ಪುರುಷಭೂತ, ವಿಷ್ಣುಮೂರ್ತಿ, ಇಂತಹ ವೇಷಹಾಕುವಲ್ಲಿ ಮುಖಕ್ಕೆ ಮಾತ್ರವಲ್ಲದೆ ಕೈ, ತೋಳು, ಎದೆ, ಬೆನ್ನುಗಳ ಮೇಲೂ ಕಲಸಿದ ಅಕ್ಕಿಹಿಟ್ಟನ್ನೂ ಲೇಪಿಸಿಕೊಳ್ಳುತ್ತಾರೆ. ಕೆಂಪು ಅಂಗಿ ಮತ್ತು ಇಜಾರವನ್ನು ಹಾಕಿಕೊಳ್ಳುವುದು, ಕೆಂಪು-ಹಸುರು-ಬಿಳಿ ಬಣ್ಣಗಳ ಅನೇಕ ಬಗೆಯ ಅಲಂಕಾರ ಸಾಮಗ್ರಿಗಳನ್ನು ಕಟ್ಟಿಕೊಳ್ಳುವುದು ಇಂಥದೆಲ್ಲವೂ ಒಂದು ವಿಶಾಲಾರ್ಥದಲ್ಲಿ ಬಣ್ಣಗಾರಿಕೆಯ ವ್ಯಾಪ್ತಿಗೆ ಸೇರುತ್ತವೆ.

ಭೂತಗಳ ಮುಖವರ್ಣಿಕೆಯಲ್ಲಿ ಕೆಲವೇ ಬಣ್ಣ ಹಾಗೂ ರೇಖೆಗಳನ್ನು ಕಾಣುತ್ತೇವೆ. ಕೆಂಪು, ನೀಲ, ಹಳದಿ, ಕಪ್ಪು, ಬಿಳಿ, ಇವು ಸಾಮಾನ್ಯವಾಗಿ ಬಳಕೆಯಾಗುತ್ತವೆ. ಇದನ್ನೆ 'ಅರದಲ ಹಾಕುವುದು' ಎನ್ನುತ್ತಾರೆ. ಈ 'ವಿಧಿ' ಯಲ್ಲಿ ಭೂತದ ಪಾಡ್ದನ(ಕಥಾನಕ) ಗಳನ್ನು ಹಾಡುತ್ತಾರೆ. ಭೂತದ ವೇಷಕಟ್ಟುವ ಪಾತ್ರಿಯು ಬಣ್ಣ ಮತ್ತು ರೇಖೆಗಳ ಸಂಯೋಜನೆಯಿಂದ ಪಾತ್ರದ ಸ್ವಭಾವವನ್ನು ಚಿತ್ರಿಸಿಕೊಳ್ಳುತ್ತಾನೆ. ಕಣ್ಣು, ಹಣೆ, ಗಲ್ಲ, ಮೂಗು, ತುಟಿ ಇವುಗಳ ಮೇಲೆ ಬಣ್ಣಲೇಪಿಸಿ ರೇಖೆ-ಚುಟ್ಟಿಗಳನ್ನು ಬರೆಯುತ್ತಾನೆ. ಮೂಗಿನ ತುದಿ ಮತ್ತು ತುಟಿಗೆ ಕೆಂಪು ಬಣ್ಣವನ್ನು ಲೇಪಿಸಿಕೊಳ್ಳುತ್ತಾನೆ. ಗಲ್ಲದ ಮೇಲೆ ವಳಿ ಮುದ್ರೆಯನ್ನು ಚಿತ್ರಿಸುತ್ತಾನೆ. ಆದರೆ ಹಳದಿ ಬಣ್ಣದ ಅರದಲವನ್ನು ಮುಖಕ್ಕೆ ಮೂಲ ಬಣ್ಣವಾಗಿ ಬಳಿದುಕೊಂಡಿರುತ್ತಾನೆ. ಹಣೆಯನ್ನೂ ರೇಖೆ, ಚುಟ್ಟಿ ತಿಲಕಗಳನ್ನು-ಬಣ್ಣದಿಂದ ತುಂಬಿಸಿ ಕಣ್ಣುಗಳ ಸುತ್ತ ಕಪ್ಪು, ಕೆಂಪು ರೇಖೆಗಳನ್ನು ಎಳೆದು, ಕಣ್ಣಿನ ಕೆಳಗೆ ಕೆನ್ನೆಗಳ ಮೇಲೆ ಕೆಂಪು, ಬಿಳಿ ಮುದ್ರೆಗಳನ್ನು ಬರೆದು, ಕಿವಿಯ ಬದಿಯಿಂದ ಮುಖದ ವಿಸ್ತಾರದ ಒಂದು ಗಡಿರೇಖೆಯಾಗಿ ಕಪ್ಪು ಅಥವಾ ಕೆಂಪು ರೇಖೆಯನ್ನು ಎಳೆದುಕೊಳ್ಳುತ್ತಾನೆ. ಹೀಗೆ ಚುಟ್ಟಿಯ ಸಾಲನ್ನು ಇಡುವಲ್ಲಿಗೆ ಒಂದು ವಿಧಿ ಮುಗಿಯುತ್ತದೆ.

ಕಥಾನಕ ಮತ್ತು ಆರಾಧನೆಯ ಅಭಿವ್ಯಕ್ತಿಗೆ ಅನುಗುಣವಾಗಿ ಬಣ್ಣ ಮತ್ತು ರೇಖಾವಿನ್ಯಾಸಗಳು ಇರುತ್ತವೆ. ಇದರ ತಿಳಿವಳಿಕೆಯು ತಲೆಮಾರಿನಿಂದ ತಲೆಮಾರಿಗೆ ದಾಟಿಕೊಂಡು ಬಂದಿರುತ್ತದೆ. ಇಲ್ಲಿಯ ಪ್ರಭೇದಗಳು ಮತ್ತು ಸೂಕ್ಷ್ಮಗಳನ್ನು ಗಮನಿಸಿದರೆ ಈ 'ಪಾತ್ರಿ' ಗಳಲ್ಲಿ ಜಾಗೃತವಾಗಿರುವ ಪರಂಪರೆಯ ಜ್ಞಾನ ಮತ್ತು ಸೌಂದರ್ಯ ಪ್ರಜ್ಞೆ-ಇವು ಸ್ಪಷ್ಟವಾಗುತ್ತವೆ. ಹಣೆ ಮತ್ತು ಗಲ್ಲದಲ್ಲಿ ರೇಖಾ ವಿನ್ಯಾಸ ಹಾಗೂ ಬಣ್ಣದ ಚುಟ್ಟಿಗಳಲ್ಲಿ ಕಣ್ಣಿನಲ್ಲಿ ಕೆಂಪು ಅಥವಾ ಕಪ್ಪು ತುಂಬುವಲ್ಲಿ ಹಣೆಯಲ್ಲಿ ಅಂಕಣ, ಸೂರ್ಯಚಂದ್ರ, ನಾಮ, ಅಡ್ಡಪಟ್ಟಿ, ಕವಲು ನಾಮಗಳಲ್ಲಿ ಬಣ್ಣ ಮತ್ತು ರೇಖೆಗಳ ಸಂಯೋಜನೆಯ ಸೌಂದರ್ಯವು ಗೋಚರವಾಗುತ್ತದೆ. ಭೂತಗಳ ಉಗ್ರ ಸ್ವಭಾವ, ಅತಿಮಾನುಷ ವ್ಯಕ್ತಿತ್ವ ಮತ್ತು ಅಲೌಕಿಕತೆಯನ್ನು ಹಣೆಯಲ್ಲಿ ಕಡುಕೆಂಪು ಮತ್ತು ರೇಖಾ ವಿನ್ಯಾಸದಿಂದ ಸಾಧಿಸಿರುತ್ತಾರೆ. ಇದರಿಂದುಂಟಾಗುವ ಭ್ರಾಮಕತೆ fantasy ಮತ್ತು ಸಂಕೇತಿಕತೆ ಗಮನಾರ್ಹವಾಗಿದೆ. ಇದರಿಂದ ಭೂತಾರಾಧನೆಯ ಇತಿಹಾಸಕ್ಕೆ ವಿಶೇಷ ಮಹತ್ವವಿದೆ. ಪಂಚ ದೀವಟಿಗೆಯ ಹೊನಲು ಬೆಳಕಿನಲ್ಲಿ, ಕತ್ತಲೆಯಿಂದ ಮೂಡುವ ಅಪಾರಕತೆಯಲ್ಲಿ, ಅಟ್ಟಹಾಸವನ್ನು ಕೊಡುತ್ತ ವೇಗವಾಗಿ ಕುಣಿಯುವ ಭೂತವು ಭಯವಿಸ್ಮಯಗಳನ್ನು ಹುಟ್ಟಿಸಿ ಆರಾಧಕರನ್ನು ಆಕರ್ಷಿಸುತ್ತದೆ

ತಲೆಯ ಆಭರಣಗಳು, ತೆಂಗಿನ ಗರಿಯ ವಸ್ತುಗಳು, ಎತ್ತರವಾದ ಅಣಿ, ಜಕ್ಕೆಲಣೆ (ಸೊಂಟಕ್ಕೆ ಕಟ್ಟುವ ಸಾಮಗ್ರಿ), ಖಡ್ಗ, ಬಿಲ್ಲು-ಬಾಣ ಇಂತಹ ಆಯುಧಗಳು, ಕಾಲಿಗೆ 'ಗಗ್ಗರ' (ಗೆಜ್ಜೆ) ದ ಸದ್ದು, ಕುಣಿತಕ್ಕೆ ತಕ್ಕಂತೆ ಪ್ರಚೋದಕವಾಗಿರುವ ಹಿಮ್ಮೇಳ-ಈ ಎಲ್ಲಾ ಹೊಂದಾಣಿಕೆಯಲ್ಲಿ ಇಂಥ ಅಲಂಕಾರವು ಪರಿಣಾಮಕಾರಿಯಾಗಿರುತ್ತದೆ.

ಭೂತದ ಮುಖವರ್ಣಿಕೆಯಿಂದ 1 ಪ್ರಾಣಿವರ್ಗದ ಭೂತಗಳು 2 ರಾಜಸ್ವಭಾವದ ಅರಸು ಭೂತಗಳು 3 ಹೆಣ್ಣು ಭೂತಗಳು 4 ದಲಿತ ವರ್ಗದ ಭೂತಗಳು 5 ಐತಿಹಾಸಿಕ ವ್ಯಕ್ತಿಗಳ ಭೂತಗಳು ಎಂದು ಪ್ರಭೇದಗಳನ್ನು ಗುರುತಿಸಬಹುದು. ಪಂಜುರ್ಲಿ ಭೂತಕ್ಕೆ ಹಂದಿಯ ಮುಖವನ್ನು ಸಾಂಕೇತಿಕವಾಗಿ ಅಳವಡಿಸಲಾಗುತ್ತದೆ. ಇದರ ಉಗ್ರ ಸ್ವಭಾವಕ್ಕೆ ಕೆಂಪನ್ನು ಅಧಿಕವಾಗಿ ಬಳಸಿರುವುದಿಲ್ಲ. ಹಣೆಯಲ್ಲಿ ಕೆಂಪು ತಿಲಕ, ದಪ್ಪವಾದ ಕೆಂಪು ನಾಮಗಳು, ಚುಟ್ಟಿಗಳ ಆವರ್ತನೆ, ಹುಬ್ಬುಗಳ ನಡುವೆ ಕೆಂಪು-ಬಿಳಿಯ ಸೂರ್ಯ ಚಂದ್ರ, ಕೆಂಪು ತಿಲಕದ ಸುತ್ತ ಹೊರಮುಖವಾಗಿ ಕಪ್ಪು-ಕೆಂಪು ದಪ್ಪರೇಖೆಗಳು-ಇಂತಹ ವಿನ್ಯಾಸದಲ್ಲಿ ಹಂದಿಯ ಮುಖದ ಕಲ್ಪನೆಯ ಆಶಯವೂ ಇದೆ. 'ಅಡ್ಕದ ಪಂಜುರ್ಲಿ'ಯ ಮುಖವರ್ಣಿಕೆಗೆ 'ದಾಡೆ' ಎಂಬ ಹೆಸರಿದ್ದು ಅದಕ್ಕೆ ಅನುಗುಣವಾಗಿ ಎಲ್ಲಾ ಬಣ್ಣಗಳನ್ನು ಬರೆಯುತ್ತಾರೆ. 'ಪಿಲಿ ಭೂತಕ್ಕೆ ಹಣೆಯನ್ನು ಪೂರ್ತಿ ಬಳಸಿಕೊಳ್ಳುವುದನ್ನು ಸುಳ್ಯ, ಪುತ್ತೂರು ಮತ್ತು ಬಂಟ್ವಾಳ ತಾಲೂಕಿನಲ್ಲಿನ ಕೋಲಗಳಲ್ಲಿ ಕಾಣಬಹುದು. ಮೂಗು-ಗಲ್ಲಗಳ ಮೇಲೆ ಕೆಂಪು ಮುದ್ರೆ ಬಿಳಿ ಚುಟ್ಟಿ, ಕಣ್ಣಿನ ಸುತ್ತ ಕೆಂಪು, ಕಡುಕಪ್ಪು ಹುಬ್ಬುಗಳು ಮತ್ತು ಕಣ್ಣಿನ ಕೆಳಬದಿ, ಹಣೆಯಲ್ಲಿನ ಸಮಾನಾಂತರದ ಮೂರು ರೇಖೆಗಳು, ಅಂಕಣಗಳ ರಚನೆ, ಗದ್ದದ ಕೆಂಪುಗೆರೆಯ ಮೇಲ್ಗಡೆ ಚುಟ್ಟಿಗಳ ಸಾಲು, ಹಣೆಯಲ್ಲಿ ಚಾಚಿದ ನಾಲಿಗೆಯಂತಿರುವ ಕೆಂಪು ನಾಮದ ಚಿತ್ರ, 'ಸುಳಿ' ಮತ್ತು ಬಿಂದುಗಳು-ಹೀಗೆ ಕೆನ್ನಾಲಿಗೆಯ ಹುಲಿಯನ್ನು ರೂಪಿಸಲಾಗುತ್ತದೆ.

ಕೊಡಮಣಿತ್ತಾಯ, ನಾಗಬಿರ್ಮೇರ್, ಗಿಳಿರಾಮ, ಬಸ್ತಿನಾಯಕ, ಶಿರಾಡಿ ಭೂತ, ಪುರುಷ ಭೂತ, ಕಲ್ಕುಡ, ಕಲ್ಲುರ್ಟಿ, ಪಿಲಿಚಾಮುಂಡಿ, ಮಲರಾಯಿ, ಕೋಟಿ-ಚೆನ್ನಯ, ಲೆಕ್ಕೆಸಿರಿ, ಬಿಲ್ಲರಾಯ, ಬಿಲ್ಲಾರ್ತಿ, ಆಲಿಭೂತ, ಕೊರಗತನಿಯ, ಪದೋರ್ಳ್ಳು ಭೂತ, ಕಾರಿಕಬಿಲ, ಬೇಟೆಗಾರ, ಅಂಗಣತ್ತಾಯ, ಜಟಾಧಾರಿ, ಜುಮಾದಿ, ಮೈಸಂದಾಯ, ಬಪನೊ, ದಂಡನಾಯಕ, ಮೂರ್ತಿಲ್ಲಾಯ, ಕೊಡಂಗೆತ್ತಾಯ, ಗುಳಿಗ, ಜಂಗಬಂಟ-ಇಂತಹ ಭೂತಗಳ ಮುಖವರ್ಣಿಕೆಯಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಕಾಣಬಹುದು. ಮುಖ್ಯವಾಗಿ ಮುಖವರ್ಣಿಕೆಯು ಉಗ್ರತೆಯ ಅಭಿವ್ಯಕ್ತಿಯಾಗಿರುತ್ತದೆ. ಹಣೆ, ಕೆನ್ನೆ ಕಣ್ಣು ಗದ್ದದ ಬಣ್ಣದಲ್ಲಿ ಹೊಂದಾಣಿಕೆ ಮತ್ತು ಸಮತೋಲನವನ್ನು ಕಾಣಬಹುದು. ಕೆಲವು ಭೂತಗಳಲ್ಲಿ ಹಣೆಯ ಸಮಾನಾಂತರ ಗೆರೆಗಳು, ತ್ರಿಕೋನಗಳು, ಕಪ್ಪು-ಬಿಳಿ ಚುಟ್ಟಿಗಳು-ಒಟ್ಟಾರೆ ಮುಖಕ್ಕೆ ಆಕರ್ಷಕವಾದ ಆಯಾಮವನ್ನು ತಂದು ಕೊಡುತ್ತವೆ. ಶಿರಾಡಿ ಭೂತಕ್ಕೆ ನಾಲ್ಕು ಸಮತಳಗಳ ಮೂಲಕ, ಪುರುಷ ಭೂತಕ್ಕೆ ನಾಮ, ಚಕ್ರ, ತ್ರಿಕೋನಗಳ ಮೂಲಕ, ಬಣ್ಣಗಳ ಸಾಂಗತ್ಯವನ್ನು ಸಾಧಿಸಲಾಗುತ್ತದೆ. ಕಲ್ಕುಡ, ಕಲ್ಲುರ್ಟಿ-ಭೂತಗಳಿಗೆ ವೇಷಕಟ್ಟುವ ಪಾತ್ರಿಯು ತಳ

ಹದಿಗೆ ಕಪ್ಪನ್ನು ಉಪಯೋಗಿಸುತ್ತಾನೆ. ಮುಖದ ತುಂಬ ಕಪ್ಪು ಬಳಿದುಕೊಂಡು ಅದರ ಮೇಲೆ ಬಿಳಿಯ ಚುಕ್ಕಿಗಳನ್ನು ಇಡುತ್ತಾನೆ.

ಗಾಢವಾದ ಕಪ್ಪಿಗೆ ಬಿಳಿಯ ಚುಕ್ಕಿಗಳು, ದೀವಟಿಗೆಯ ಬೆಳಕಿನಲ್ಲಿ ಹೊಳೆಯುತ್ತವೆ. ಬೈಹುಲ್ಲನ್ನು ಸುಟ್ಟು ಮಾಡಿದ ಮಸಿಯನ್ನು ಎಣ್ಣೆ ಅಥವಾ ನೀರಿನಲ್ಲಿ ಕಲಸಿ ಕಪ್ಪನ್ನು ತಯಾರಿಸಿರುತ್ತಾರೆ. ಬಿಳಿಯ ಚುಟ್ಟಿಗೆ ಸುಣ್ಣ, ಜೇಡಿಮಣ್ಣು ಅಥವಾ ಅಕ್ಕಿಯ ಹಿಟ್ಟು ಕಲಸಿ ಬಳಸುತ್ತಾರೆ. ಕೆಲವು ಜಾತಿಯ ಮರದ ಬೇರು, ತೊಗಟೆ, ಎಲೆ, ಕಾಯಿಗಳನ್ನು ಗುದ್ದಿ ಪುಡಿ ಮಾಡಿದ ಬಣ್ಣವನ್ನು ಹಿಂದಿನ (ಕಳೆದ ಶತಮಾನ) ಕಾಲದಲ್ಲಿ ಬಳಸುತ್ತಿದ್ದರಂತೆ. ಈಗಿನ ವರ್ಷಗಳಲ್ಲಿ ಅರವಲ, ಇಂಗಳಿಕ, ಸೆಫೇತು-ಇವನ್ನು ಅಂಗಡಿಯಿಂದ ಕೊಂಡುತಂದು ಬಳಸುತ್ತಿದ್ದಾರೆ. ಮೂಜುಲ್ನಾಯವಂತಹ ಒಂದು ಭೂತವು ಬೆಳ್ತಂಗಡಿ ತಾಲೂಕಿನಲ್ಲಿ ಹದಿನಾರು ಸ್ಥಳಗಳಲ್ಲಿ ಬೇರೆ ಬೇರೆ ಆರಾಧನೆಯನ್ನು ಹೊಂದುತ್ತದೆ.[2] ಉಳ್ಳಾಲ್ತಿ, ತೋಡಕುಕ್ಕಿನಾರ್, ದುಗ್ಗಲಾಯ, ಇಂತಹ ಭೂತಗಳ ಅಲಂಕಾರವು 'ಪರವ' ರದು ಒಂದು ರೀತಿಯಾದರೆ 'ಪಂಬದ' ರದು ಮತ್ತೊಂದು ಬಗೆ. ಕಣಂದೂರು ಎಂಬಲ್ಲಿ 'ಉಳ್ಳಾಲ್ತಿಗೆ' ಅರದಲದ ಬದಲು ಗಂಧವನ್ನು 'ಪಂಬದ' ರೂ ಅನಂತಾಡಿ, ಕೆಲಿಂಜ, ಮಾಣಿ, ಬಲ್ನಾಡು, ಕೇಪು ಸ್ಥಳಗಳಲ್ಲಿ ಅದೇ ಉಳ್ಳಾಲ್ತಿಗೆ' ಪರವರು ಅರದಲವನ್ನೂ ಬಳಸುತ್ತಾರೆ. ಕೋಟಿ-ಚೆನ್ನಯರಂತಹ ಐತಿಹಾಸಿಕ ವೀರರಿಗೆ ಒಂದು ಬಗೆಯ ಪ್ರದರ್ಶನ ಗುಣವನ್ನು ಸಾಧಿಸಲಾಗುತ್ತಿದೆ. 'ಕೊರಗತನಿಯ'ನ ದಲಿತ ವ್ಯಕ್ತಿತ್ವವನ್ನು ಬಣ್ಣಗಳಲ್ಲಿ ತೋರಿಸಲಾಗುತ್ತಿದೆ. ಐತಿಹಾಸಿಕ ವ್ಯಕ್ತಿಯಾದ ಆಲಿಯ ಮಾಂತ್ರಿಕ ಸ್ವಭಾವನ್ನು ಕಡುಕಪ್ಪು ಬಣ್ಣದ ಮೂಲಕ ತೋರಿಸಲಾಗುತ್ತದೆ.

ಒಟ್ಟಿನಲ್ಲಿ ಕೆಲವು ಭೂತಗಳ ಅಲಂಕಾರವು ಅವುಗಳ ಶಿರೋಭೂಷಣಗಳನ್ನು ಹೋಲುವುದುಂಟು. ಬಸ್ತಿನಾಯಕ, ಪಂಜುರ್ಲಿ, ಮಲರಾಯಿಗಳು ಕಟ್ಟಿಕೊಳ್ಳುವ 'ಕೊಂಬ್ಯಾಳಿ' (ಶಿರೋಭೂಷಣ) ಮುಖವಾಡ ಇವುಗಳನ್ನು ಇಲ್ಲಿ ನೆನೆಯಬಹುದು. ಕೆಲವು ಭೂತಗಳಲ್ಲಿ ಅಣಿಯ ಆಕಾರವನ್ನೂ ಹೋಲುವುದನ್ನು ಕಾಣಬಹುದು. ಇಂತಹ ಹೊಂದಾಣಿಕೆಗಳು ಪಾತ್ರಿಯ ಮನೋಧರ್ಮವನ್ನು ಸೂಚಿಸುವಂತಿವೆ. ವೇಷಭೂಷಣಗಳು-ಮುಖದ ಅಲಂಕಾರದಂತೆ ಇಲ್ಲಿಯೂ ಪ್ರಾದೇಶಿಕ ಒಲವುಗಳನ್ನು ಗುರುತಿಸಬಹುದು. ಇದಕ್ಕಾಗಿ ಲೋಹ, ಹಾಳೆ (ಅಡಕೆಪಟ್ಟೆ), ಮರ, ಮತ್ತು ಬಟ್ಟೆಯಲ್ಲದೆ ಚಿನ್ನ ಬೆಳ್ಳಿಯವೂ ಇರುವುದುಂಟು. ಸಾಮಾನ್ಯವಾಗಿ ಅಡಳಿತ ವರ್ಗವು ಅಮೂಲ್ಯವಾದುವುಗಳನ್ನೂ ಉಳಿದವನ್ನು ಪಾತ್ರಿಗಳೂ ರಕ್ಷಿಸಿಕೊಳ್ಳುವುದನ್ನು ಕಾಣುತ್ತೇವೆ. ಈ ಪಾತ್ರಿಗಳು ಕೆಲವು ಅಲಂಕಾರ ಸಾಮಗ್ರಿಗಳನ್ನು ತಾವೇ ಸಿದ್ಧಮಾಡಿಕೊಂಡಿರುವುದೂ ಉಂಟು.

ವೇಷಭೂಷಣಗಳನ್ನು 1 ಆಭರಣ, 2 ಮುಖವಾಡ, 3 ಆಯುಧ, 4 ಬಟ್ಟೆ, 5 ತಿರಿ-ಹಾಳೆಯಿಂದ ಮಾಡಿದ ತಿರಿಗುಬ್ಬೆ, 6 ಕದಿರ್ಮುಡಿ, 7 ಅಣಿ ಇತ್ಯಾದಿಗಳಾಗಿ ಗುರುತಿಸಬಹುದು.

**ಆಭರಣ :** ಸೊಂಟ, ಎದೆ, ಭುಜ, ಕೊರಳು, ತಲೆ-ಇವುಗಳಿಗೆ ಸಂಬಂಧಿಸಿದಂತೆ ಡಾಬು ಮೊಲೆಕಟ್ಟು, ಎದೆಹಾಳೆ, ಎದೆಹಾರ, ಎದೆಪದಕ, ಭುಜಕಿರೀಟ, ಭುಜಪತ್ತ, ಗುಂಡಡ್ಡಿಗೆ,

ಗುಂಡುಸರ, ಚಕ್ರಸರ, ಕೊತ್ತಂಬರಿ ಸರ, ಪವನುಸರ, ಕುರ್ಜಾಪುಸರ, ಕಟಾಣಿ ಸರ, ಮುದ್ರೆ, ಚೂಡಾಮಣಿ, ಕೊಪ್ಪು-ಸರಪಳಿ, ಮುಂದಲೆ ಬೊಟ್ಟು, ಬಂದಿಪದಕ, ತಲೆಮಣಿ, ತಲೆಪಟ್ಟಿ, ಕೇದಿಗೆ, ತಲೆಪಟ್ಪೋ, ದಂಡೆಕಾಜಿ; ತಲೆಪೂ, ಕೆಬಿನ, ನಾಗಾಭರಣ ಈ ಬಗೆಯ ಲೋಹದ ಆಭರಣಗಳು ಬಳಕೆಯಾಗುತ್ತವೆ. ಇವುಗಳಲ್ಲಿ ಕೆಲವಾದರೂ ಪ್ರಧಾನ ಭೂತಗಳಿಗೆ ಇರುತ್ತವೆ. ಗಮನಿಸಬೇಕಾದ ಅಂಶವೆಂದರೆ ಭೂತದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂತಸ್ತಿಗೆ ಅನುಸಾರವಾಗಿ ಅಭರಣಗಳ ಸಂಗ್ರಹ ಮತ್ತು ಬಳಕೆಯು ನಡೆಯುತ್ತದೆ. ಆದುದರಿಂದ ಪ್ರಧಾನ ಭೂತಗಳ ಆಭರಣಗಳನ್ನು ಸೇರಿಗೆಯ ಭೂತಗಳಿಗೆ ಕೊಡುವುದಿಲ್ಲ.

ಲೋಹದ ಆಭರಣಗಳು ಈಚಿನ ವರ್ಷಗಳಲ್ಲಿ ಅಲಂಕಾರ ಸಾಮಗ್ರಿಗಳಾಗಿ ಬಳಕೆಯಾಗುತ್ತಿವೆ. 'ಹರಿಕೆ'ಯ ರೂಪದಲ್ಲಿಯೂ ಕೆಲವು ಆಭರಣಗಳು ಬರುತ್ತವೆ. ಭೂತಸ್ಥಾನದ ಒಟ್ಟು ಆದಾಯದ ಬಹುಭಾಗ ಈ ಬಗೆಯ ಸ್ಥಿರ ಸೊತ್ತಾಗಿ ಬಳಕೆಯಾಗುತ್ತದೆ.

**ಮುಖವಾಡ :** ಭೂತವು 'ಮುಗ' (ಮುಖವಾಡ)ವನ್ನು ಧರಿಸಿ, ಆರಾಧನೆಯಲ್ಲಿ ಸೇರಿ ಹೋಗಿದೆ. ಭೂತಶಕ್ತಿ ಅಥವಾ ಆವೇಶದ ಪ್ರತೀಕವೇ 'ಮುಖವಾಡ' ಎಂಬ ನಂಬಿಕೆಯು ಬಲವಾಗಿದೆ. ಇವುಗಳು ಆರಾಧನೆಯಲ್ಲದೆ ಗುಡಿಯೊಳಗೂ ಸಾಮಾನ್ಯವಾಗಿ ಪೂಜೆಯನ್ನು ಪಡೆಯುತ್ತವೆ. ಭೂತದ ಭಂಡಾರ ಎಂದರೇ ಮುಖ್ಯವಾಗಿ ಮುಖವಾಡ ಮತ್ತು ಆಯುಧಗಳು. ಮುಖವಾಡವನ್ನು, ಮರ, ಹಾಳೆ, ಲೋಹ, ಈ ಮೂರರಿಂದ ನಿರ್ಮಿಸುತ್ತಾರೆ. ಕಲ್ಕುಡ, ಕಲ್ಲುರ್ಟಿ, ಪಂಜುರ್ಲಿಗಳಿಗೆ ಲೋಹದ ಮುಖವಾಡಗಳಿವೆ ಇಲ್ಲವೇ ಹಾಳೆಯ ಮುಖವಾಡಗಳನ್ನು ಬಳಸಲಾಗುತ್ತದೆ. ಉಳ್ಳಾಲ್ತಿ, ಕೊಡಮಣಿತ್ತಾಯ, ಮಲರಾಯಿ, ಜುಮಾದಿ, ರಕ್ತೇಸರಿ, ಮೊದಲಾದುವುಕ್ಕೆ ಲೋಹದ ಮುಖವಾಡಗಳಿವೆ. ಅನಂತಾಡಿಯ ಉಳ್ಳಾಲ್ತಿಗೆ ಎರಡೂ ಇದ್ದು ಒಂದನ್ನು 'ಚಂದನದ ಮುಗ' ಎಂದೂ ಮತ್ತೊಂದನ್ನು 'ಚಿನ್ನದ ನಾಲಿಗೆಯ ಬೆಳ್ಳಿ ಮುಗ' ಎಂದೂ ಕರೆಯುತ್ತಾರೆ.

ಒಂದು ಭೂತದ ಮುಖವಾಡವನ್ನು ಮತ್ತೊಂದಕ್ಕೆ ಉಪಯೋಗಿಸುವಂತಿಲ್ಲ. ಮುಖವಾಡ ಮತ್ತು ಆಯುಧಗಳು ಯಾವುದೇ ಭೂತದ ಖಾಸಗಿ ಆಸ್ತಿಯೆಂದು ಪರಿಗಣಿಸಲಾಗುತ್ತದೆ. ಈ ಮುಖವಾಡಗಳಲ್ಲಿ ಎರಡು ಬಗೆಯನ್ನು ಕಾಣಬಹುದು. 1. ಮನುಷ್ಯರ ಮುಖವಾಡ ಮತ್ತು 2 ಪ್ರಾಣಿಗಳ ಮುಖವಾಡ. ಇವುಗಳ ರಚನೆಯಲ್ಲಿ ಭಯ, ಪೌರುಷ, ಕ್ರೌರ್ಯ, ಹಿಂಸೆ ಇತ್ಯಾದಿ ಭಾವಗಳನ್ನು ಉದ್ದೀಪಿಸುವಲ್ಲಿ ಗಮನವಿಡಲಾಗುತ್ತದೆ. ಅಗಲವಾಗಿ ತೆಗೆದ ಬಾಯಿ, ಉದ್ದ ಚಾಚಿದ ನಾಲಗೆ, ಕೋರೆ ಹಲ್ಲುಗಳು, ದಿಟ್ಟಿಸುವ ಕಣ್ಣುಗಳು-ಇತ್ಯಾದಿ ಅಂಶಗಳು ಇಲ್ಲಿ ಕುಂಡು ಬರುತ್ತವೆ. ಈ ವಿಷಯದಲ್ಲಿ ಮೀಸೆಯಿರುವ ಮುಖವಾಡವನ್ನು ಒಂದು ಹೆಣ್ಣು ಭೂತವು ಧರಿಸಿದರೆ ಅಭಾಸವಾಗುವುದಿಲ್ಲ.

ಹಂದಿ, ಹುಲಿ ಮತ್ತು ಗೂಳಿ, ಈ ಪ್ರಾಣಿಗಳ ಮುಖವನ್ನು ಹೋಲುವ 'ಮುಗ'ಗಳು ಕಂಡುಬರುತ್ತವೆ. ಪಂಜುರ್ಲಿ, ಪಿಲಿಭೂತ, ಮೈಸಂದಾಯ ಇವುಗಳು ಉಗ್ರರೂಪದ 'ಮುಗ'ಗಳನ್ನು ಧರಿಸುತ್ತವೆ.3

ಆರಾಧನೆಯಲ್ಲಿ ಮುಖವಾಡಗಳು ಎರಡು ರೀತಿಯಲ್ಲಿ ಬಳಕೆಯಾಗುತ್ತವೆ. ಕಾರ್ಕಳ ಮತ್ತು ಮಂಗಳೂರು ತಾಲ್ಲೂಕುಗಳಲ್ಲಿ ಇವುಗಳನ್ನು ಮುಖದ ಮೇಲೆ ಕಟ್ಟಿಕೊಳ್ಳದೆ ತಲೆಯಲ್ಲಿ ಅಣಿಗೆ ತಾಗಿದಂತೆ ಕಟ್ಟಿಕೊಳ್ಳುತ್ತಾರೆ. ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲೂಕುಗಳಲ್ಲಿ ಇವುಗಳನ್ನು ಮುಖದ ಮೇಲೆ ಕಟ್ಟಿಕೊಳ್ಳುತ್ತಾರೆ. ಆರಾಧನೆಯ ಅಂಗಣ ಬಲಿ, ಬಲಿ ಸುತ್ತು ಕುಣಿತ ಮತ್ತು ಬಾರಣೆಯಂತಹ ಸಂದರ್ಭಗಳಲ್ಲಿ ಇವುಗಳಿಂದ ಅತಿಮಾನುಷ ವೃತ್ತಾಂತಗಳಿಗೆ ಜೀವತುಂಬಿದಂತೆ ಆಗುತ್ತದೆ.

**ಆಯುಧ :** ಇವುಗಳೂ ಭೂತದ ಅಲೌಕಿಕ ಮತ್ತು ಅತಿಮಾನುಷ ಸತ್ವವನ್ನು ತೋರುವ ಪರಿಕರಗಳಾಗಿವೆ. ಸುಳ್ಯದ ಪರಿಸರದಲ್ಲಿನ ಬೈನಾಟಿ ಭೂತದ ಉತ್ಸವದಲ್ಲಿ, ವಿಷ್ಣುಮೂರ್ತಿಯ ಆರಾಧನೆಯಲ್ಲಿ, ಅನೇಕ ಕತ್ತಿಗಳು ಕಡ್ತಲೆಗಳು ಬಳಕೆಯಾಗುತ್ತವೆ. (ಉದ್ದನೆಯ ಹಾಗೂ ಅಗ್ರ ಭಾಗವು ಕುಡುಗೋಲಿನಂತೆ ಬಾಗಿರುವ ಕತ್ತಿಯನ್ನು 'ಕಡ್ತಲೆ' ಎನ್ನುತ್ತಾರೆ. ಇದನ್ನು ತಲೆ ಕಡಿಯುವುದಕ್ಕೆ ಬಳಸಲಾಗುತ್ತದೆ) ಈ ಕಡ್ತಲೆ, ಬಿಲ್ಲು–ಬಾಣ, ಅಡ್ಡಣ, ಬೆತ್ತ, ಬೆಂಕಿ, ಕೆಂಡದ ಪಾತ್ರೆ-ಇವು ಭೂತಾರಾಧನೆಯಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತವೆ. ಮುಖವಾಡ ಮತ್ತು ಅಣಿಯನ್ನು ಕಟ್ಟಿಕೊಂಡ ಭೂತಪಾತ್ರಿಯು, ಕೈಯಲ್ಲಿ ಕಡ್ತಲೆ ಮತ್ತು ಅಡ್ಡಣ ಹಿಡಿದು ಮಾಡುವ, ಕುಣಿತವು ಯುದ್ಧದ ಸನ್ನಿವೇಶವನ್ನು ನೆನಪಿಗೆ ತರುತ್ತದೆ. ಆರಾಧನೆಯ 'ಸಾಧಗೊ' ಎಂಬ ಕುಣಿತದಲ್ಲಿ ಖಡ್ಗ ವಿದ್ಯೆಯ ಪ್ರದರ್ಶನವೂ ಆಗುತ್ತದೆ. ಭೂತದ ಕಾರಣಿಕ ಮತ್ತು ಪವಾಡಗಳ ಕಥಾನಕದಲ್ಲಿ ಕತ್ತಿ, ಕಡ್ತಲೆ, ಬೆಂಕಿ, ಬೆತ್ತ ಮೊದಲಾದುವು ಸಂದರ್ಭಾನುಸಾರ ಬಳಕೆಯಾಗುತ್ತವೆ. ಆರಾಧನೆಯಲ್ಲಿ ಪ್ರಸಾದ ವಿತರಣೆಯಲ್ಲಿ ಆಯುಧಗಳು ಅಭಯ ಸೂಚಕವಾಗಿ ಬಳಕೆಯಾಗುತ್ತವೆ.

ಬೇಸಾಯದಲ್ಲಿನ ಕತ್ತಿಗಳು, ಯುದ್ಧದಲ್ಲಿನ ಬೆಂಕಿ, ಕಡ್ತಲೆ ಹಾಗೂ ಗುರಾಣಿ, ಬಿಲ್ಲುಬಾಣ-ಇವು ಭೂತಾರಾಧನೆಯಲ್ಲಿ ಗತಇತಿಹಾಸದಲ್ಲಿ ಜನರು ಬದುಕಿದ್ದ ರೀತಿಗೆ ಒಡ್ಡಿದ ಕನ್ನಡಿಯಂತಿವೆ.

ಭೂತದ ಅಲಂಕಾರವು ಪ್ರಾಚೀನ ಕಾಲದಲ್ಲಿ ಹೇಗಿದ್ದವು ಎಂಬುದನ್ನು ನಿರ್ಣಯಿಸಲು ಮಾಹಿತಿಯ ಕೊರತೆಯಿದೆ. ರೆವರೆಂಡ್ ಎ.ಸಿ. ಬರ್ನೆಲ್ಲರ The Devil worship of the Tuluvas (1882) ಎಂಬ ಗ್ರಂಥದಲ್ಲಿ ಹತ್ತು ಭೂತಗಳ ಚಿತ್ರಗಳಿವೆ. ಒಂದು ಶತಮಾನದ ಹಿಂದೆ ಭೂತಾಲಂಕಾರವು ಹೇಗಿದ್ದುದೆಂಬುದನ್ನು ಈ ಚಿತ್ರಗಳಲ್ಲಿ ಸ್ಥೂಲವಾಗಿ ಗ್ರಹಿಸಬಹುದಾಗಿದೆ. ಅಲಂಕಾರದ ಅನೇಕ ಸಾಮಾಗ್ರಿಗಳನ್ನು ಪಾತ್ರಿಗಳ ಬಳಗದ ಹೆಂಗಸರು ಆರಾಧನೆಯ ಸಂದರ್ಭದಲ್ಲಿಯೇ ತಯಾರಿಸುತ್ತಾರೆ. ಇವುಗಳಲ್ಲಿನ ಕೌಶಲವು ಅದ್ಭುತವಾಗಿದೆ. ಹೀಗಾಗಿ ಭೂತಕ್ಕೆ ವೇಷಕಟ್ಟುವ ನಲಿಕೆ, ಪರವ, ಪಂಬದ ಜಾತಿಯ ಗಂಡಸರಂತೆ ಅವರ ಹೆಂಗಸರನ್ನೂ ಗೌರವಿಸುವುದು ಸೂಕ್ತವಾಗಿದೆ.

ಭೂತಾರಾಧನೆಯು ಮೂಲರೂಪದಲ್ಲಿ ಮತಾಚಾರದ ಸರಳ ರೂಪದ ಒಂದು ಕುಣಿತದ ರೂಪವಾಗಿದ್ದು ಬಣ್ಣ, ಕುಣಿತ, ವೇಷಭೂಷಣಗಳು ಈಗ ಇರುವಂತೆ ಪ್ರಾರಂಭದಲ್ಲಿಯೂ

ಇರಲಿಲ್ಲವೆಂದು ಕಾಣುತ್ತದೆ. 'ಭೂತದ ಕಲ್ಲು' ಇರುವ ಜಾಗದಲ್ಲಿ ಈಚೆಗೆ ಗುಡಿಯ ರಚನೆ ಯಾಯಿತು. ಮರದ ಆಯುಧಗಳ ಬದಲು ಲೋಹದ ಆಯುಧಗಳು ಬಳಕೆಯಾದುವು. ಎಲೆ-ಹೂಗಳನ್ನು ಕಟ್ಟಿಕೊಳ್ಳುವುದರ ಜೊತೆಗೆ ಆಭರಣಗಳನ್ನು ಕಟ್ಟಿಕೊಂಡರು. ಪರವ, ಪಂಬದ, ನಲಿಕೆ ಜನಾಂಗದವರು ಆಗಲೂ ಭೂತಾವೇಶದ ಮಾಧ್ಯಮ-ರೂಪಗಳಾಗಿದ್ದರು. ಅನಂತರದಲ್ಲಿ ಸಮಾಜದ ಇತರರೆಲ್ಲರೂ ಆರಾಧನೆಯಲ್ಲಿ ಸೇರಿಕೊಂಡಿರಬೇಕು. ವೃತ್ತಿಯನ್ನು ಆಧರಿಸಿ ಆರಾಧನೆಯಲ್ಲಿ ಬ್ರಾಹ್ಮಣರಿಂದ ಅದಕ್ಕೆ ಶಿಷ್ಟಾಚಾರಗಳು ಬಂದುವು. ಆದುದರಿಂದ ಆರಾಧನೆಯ ಸರಳತೆಯು ಸಂಕೀರ್ಣವಾಯಿತು. ಮುಖಕ್ಕೆ ಬಣ್ಣ ಹಾಕುವುದರಲ್ಲಿ ಪಾತ್ರಿಗಳೇ ಪ್ರಯೋಗಗಳನ್ನು ನಡೆಸಿರಬೇಕು. ಅರದಲವ ಮೇಲೆ ರೇಖೆಗಳು ಮೂಡಿದುವು. ಚುಟ್ಟಿಗಳು ಬಂದುವು. ಹರಿಕೆಯ ರೂಪದಲ್ಲಿ ಆಭರಣಗಳು, ಆಯುಧಗಳ ಸೇರಿದುವು. ಪ್ರಶಸ್ತವಾದ ಕಾಲ ಸಂದರ್ಭಗಳು ನಿರ್ಣಯಗೊಂಡು ಇಡೀ ಸಮಾಜವೇ ಭಾಗವಹಿಸುವಂತಾಯಿತು.

ತುಳುನಾಡಿನ ಆಡಳಿತ ವರ್ಗದ ಬೆಂಬಲ ಇದಕ್ಕೆ ಸಿಕ್ಕಿದ್ದರಿಂದ ಆಡಳಿತ ವ್ಯವಸ್ಥೆಯ ಒಂದು ಭಾಗವಾಗಿ ಮುಂದುವರಿಯುತ್ತಾ ಬಂತು. ಸರಳವಾದ ಕುಣಿತದ ರೂಪದಲ್ಲಿದ್ದ 'ಭೂತಾರಾಧನೆಯು' ಕಲಾವಂತಿಕೆಯ ಬಣ್ಣ, ವೇಷ, ಭೂಷಣ, ಆಯುಧ, ಹಿಮ್ಮೇಳ, ಮಾತುಗಾರಿಕೆ, ಲಯಬದ್ಧ ಕುಣಿತ, ಮುಂತಾದುವನ್ನು ಸಮರ್ಥವಾಗಿ ಉಪಯೋಗಿಸಿಕೊಂಡು ಧಾರ್ಮಿಕ ಭೂಮಿಕೆಯಾಗಿಯೇ ವಿಕಾಸಗೊಂಡಿತು,

**ಟಿಪ್ಪಣಿಗಳು**

1. ಕ್ರಿಯಾವಿಧಿ ರಂಗಭೂಮಿಯ ವಿವರಗಳಿಗೆ ನೋಡಿರಿ : ಅಯ್ಯಪ್ಪ-ಪಣಿಕ್ಕರ್, **''ರಂಗಭೂಮಿ : ಪೂರ್ವ-ಪಶ್ಚಿಮ''** ಲೇಖನ, 2. **ರುಜುವಾತು,** ಅಕ್ಟೋಬರ್-ಡಿಸಂಬರ್ 1981, ಸಂಚಿಕೆ-4 ಸಂ : ಯು.ಆರ್. ಅನಂತಮೂರ್ತಿ ಕ್ರಿಯಾವಿಧಿ ರಂಗಭೂಮಿ ಮತ್ತು ಯಜ್ಞಯಾಗಾದಿಗಳ ನಡುವಿನ ಸಂಬಂಧದ ವಿವರಗಳನ್ನು ನೋಡಿರಿ : Chrstopher Byrsky : Concept of Ancient Indian Theatre, New Delhi, Munshiram Manoharlal Publishers Pvt. Ltd. 1974 ಜನಪದ ರಂಗಭೂಮಿ ವಿವರಗಳಿಗೆ ನೋಡಿರಿ.Uma Anand 'The Romance of Theatre'' NCERT Publication' 1969.

2. ಮೂಜುಲ್ನಾಯ, ಭೂತದ ಪಾಡ್ದನದಲ್ಲಿ ಅದರ ಸಂಚಾರ ಮತ್ತು ಹದಿನಾರು ಹೆಸರುಗಳ ಉಲ್ಲೇಖಗಳು ಬರುತ್ತವೆ. ಈ ಭೂತದ ಆರಾಧನೆ ಹೊಂದುವ ವಿವರಗಳಿಗೆ ನೋಡಿರಿ. ಡಾ॥ ಬಿ.ಎ. ವಿವೇಕ ರೈ, **''ತುಳು ಜನಪದ ಸಾಹಿತ್ಯ''** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. 1985.

3. ತುಳುನಾಡಿನಲ್ಲಿ ಪ್ರಾಣಿಗಳು 'ಕುಲಲಾಂಛನ' Totemic emblem ದ ಸ್ವರೂಪದಲ್ಲಿ ಆರಾಧನೆ ಪಡೆಯುವ ವಿವರಗಳಿಗೆ ನೋಡಿರಿ : ಡಾ॥ ಬಿ.ಎ. ವಿವೇಕ ರೈ **''ತುಳು ಜನಪದ ಸಾಹಿತ್ಯ''** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. 1985.

# ಭೂತಾರಾಧನೆಯಲ್ಲಿ ಅಲಂಕರಣ-ಎರಡು

–ಲೀಲಾ ಭಟ್

ತೆಂಬರೆಯ ಡಮ್ಮಡ್ಡಮ್ಮದೊಡನೆ ಪಾಡ್ದನದ ಡೆನ್ನಡೆನ್ನನಾ ಮೇಳೈಸಿದ ಭೂತದ ಕಥೆಯು ಹಿನ್ನೆಲೆಯಲ್ಲಿ ತೇಲಿಬರುವಾಗ ರಂಗು ರಂಗಿನ ಭೂತವೇಷ ಕುಣಿಯುವುದನ್ನು ಕಾಣಬೇಕೆಂದಿದ್ದರೆ ಭೂತ ರುತುವಿನಲ್ಲೊಮ್ಮೆ ದ. ಕನ್ನಡ ಜಿಲ್ಲೆಗೆ ಬರಬೇಕು. ಹಿಂದಿನ ಕಾಲದಲ್ಲಿ ದೀಪ, ದೊಂದಿ, ಮಾರಿಸೂಟೆಗಳ ಮಂದಪ್ರಕಾಶದಲ್ಲಿ ಭೂತ ಮೂಡಿಸುವ ಕಲ್ಪನೆ, ಮಾಡುವ ಮೋಡಿ ಇಂದು ಅಪರೂಪವಾಗಿ ಕೆಲವು ಹಳ್ಳಿಗಳಲ್ಲಿ ಕಾಣಸಿಗುತ್ತದೆ. ಇನ್ನಿತರ ಕಡೆಗಳಲ್ಲಿ ವಿದ್ಯುದ್ದೀಪಗಳ ಕಣ್ಣು ಕೋರೈಸುವ ಬೆಳಕಿನಲ್ಲಿ ಹಚ್ಚಿದ ಅರದಳ, ಸಿರಿಲಂಗ, ಬಣ್ಣಬಣ್ಣದ ಅಣಿ, ಕಿಸ್ಗಾರ ಹೂನ ದಂಡೆಗಳು ಮಸಕಾಗಿ ವಿವರ್ಣವಾದಂತೆ ಕಾಣಬಹುದು. ಆದರೂ ಭೂತಾರಾಧನೆ ಒಂದು ಫಲಸಮೃದ್ಧಿ ವಿಧಿಯಾಗಿದ್ದು ಮನೋರಂಜನೆಗೆ ಅದರಲ್ಲಿ ತುಂಬಾ ಅವಕಾಶವಿದೆ.

ಭೂತಾರಾಧನೆ ಒಂದು ವೈಭವೋಪೇತವಾದ ಜಾತ್ರೆ. ಮಾನವಕಲ್ಪನೆಯ 'ಭೂತ'ವೆಂಬ ಅತಿಮಾನುಷ, ಅಲೌಕಿಕ ಶಕ್ತಿಯ ಮೂರ್ತತೆಗೆ ಅಥವಾ ಆವಿರ್ಭಾವಕ್ಕೆ ಕಾರಕವಾದ ಅಂಶಗಳೆಂದರೆ ಭೂತ ಬಣ್ಣಗಾರಿಕೆ, ವೇಷಭೂಷಣ, ಹಾವಭಾವ ಮತ್ತು ನುಡಿಕಟ್ಟು ಇತ್ಯಾದಿ. ಹೀಗೆ ಇದರಲ್ಲಿಯ ಮಾಧ್ಯಮಗಳೊಡನೆ ದೈವಾವೇಶ ಸೇರಿಕೊಂಡಿರುತ್ತದೆ. ದೈವದ ಪ್ರತೀಕವಾಗಿ ಕಲ್ಲು, ದಾರುವಿಗ್ರಹ, ಲೋಹದಮೂರ್ತಿ, ಮುಖವಾಡಗಳು ಇರುತ್ತವೆ. ಭೂತದ ಮಾನಿಯ ವೇಷಭೂಷಣಗಳಲ್ಲಿ ಯಾವ ವಿಶೇಷತೆಯೂ ಇಲ್ಲ. ಆದರೆ ಅರ್ಚನೆ, ಮಂಡಲ ಬರೆಯುವುದು, ಮುದ್ರೆ ಇಡುವುದು ಮೊದಲಾದ ತಾಂತ್ರಿಕ ಕೈಂಕರ್ಯಗಳು ಅವನ ಪಾಲಿನವು. ಭೂತಾರಾಧನೆಯ ಎಲ್ಲ ವಿಧಿಗಳಲ್ಲೂ ಸಾಂಕೇತಿಕತೆ ಇದೆ. ಭೂತಾವೇಶ ಮೊದಲು ಪಾತ್ರಿಯಿಂದ ಒಂದು ರೀತಿಯ ಶಕ್ತಿಪಾತದಂತೆ ಭೂತವೇಷದಲ್ಲಿ ಹರಿದುಬರುತ್ತದೆ. ಮನುಷ್ಯನೇ ಆಗ ಭೂತದ ಜೀವಂತ ಪ್ರತಿಮೆಯಾಗುತ್ತಾನೆ. ದೈವ ಹೆಣ್ಣಾದರೂ ಈವರೆಗೆ ಭೂತಾರಾಧನೆಯಲ್ಲಿ ಪುರುಷರೇ ಮಾಧ್ಯಮವಾಗಿ (ಸಿರಿ ದೈವವೊಂದನ್ನು ಬಿಟ್ಟು) ನಡೆದು ಬಂದ ಸಂಪ್ರದಾಯ. ಭೂತಕಟ್ಟುವ, ಪರವ, ಪಂಬದ, ನಲ್ಕೆ, ಪಾಣಾರ ಎಂಬ ಅಸ್ಪೃಶ್ಯ ವರ್ಗದವರು ಚಾಪೆ, ಓಲೆಕೊಡೆ ಇತ್ಯಾದಿಗಳನ್ನು ನೇಯುವ ಕಾಯಕದವರು, ಕಡುಬಡವರು; ಆದರೆ ಕಲೆಗಾರಿಕೆಯೇ ಇವರ ಅರ್ಹತೆ ಹಾಗೂ ಅಧೀನ.

ಕೇರಳದ ತೆಯ್ಯಂಗಳು ದಕ್ಷಿಣ ಕನ್ನಡದ ಭೂತವೇಷಗಳನ್ನು ಹೋಲುತ್ತಿದ್ದರೂ ಮುಖವರ್ಣಿಕೆ, ವೇಷಭೂಷಣಗಳಲ್ಲಿ ತುಂಬಾ ವ್ಯತ್ಯಾಸವಿದೆ. ಕೇರಳದ ಈ ಜನಪದ ಭೂಮಿಕೆಯಷ್ಟು ದ.ಕನ್ನಡದ ಭೂತರಂಗ ವಿಕಾಸ ಹೊಂದಿಲ್ಲ ಎನ್ನಬಹುದು. ಅಲ್ಲಿ ಭೂತಗಳ ಕಾರ್ಯಾಕಾರಣವಾಗಿ ಚಾಮುಂಡಿ, ಕಾಳಿ, ರಕ್ತೇಶ್ವರಿ, ಭಗವತಿ ಮೊದಲಾದ ದೈವಗಳು ಭೂತವರ್ಗದಲ್ಲಿ ಸೇರಿಕೊಂಡಂತೆ ಈ ನಾಡಿನಲ್ಲೂ ದುರ್ಗೆಯ ಅಂಶಗಳಾದ ದುಗ್ಗಲಾಯೆ,

ಮಹಾಕಾಳಿ, ಚಾಮುಂಡಿ, ಲೆಕ್ಕೆಸಿರಿ, ಮಲರಾಯಿ, ಜುಮಾದಿ (ಧೂಮಾವತಿ), ವಾರಾಹಿ ಗಳು ಕಾರ್ಯಾಕಾರಣಗೊಂಡ ದೈವಗಳಾಗಿವೆ. ಕಲ್ಲುರ್ಟಿ, ಸತ್ಯದೇವತೆ, ಉಳ್ಳಾಲ್ತಿ, ಸಿರಿ, ಮಾಯಿಂದಾಳ್, ಕೊರತಿ, ಚಿಕ್ಕಮ್ಮ, ಹಳೆಯಮ್ಮ. ಮೊದಲಾದ ಮಹಾಸತಿಯರು, ವೀರ ನಾರಿಯರು, ಕೇರಳದ ಭಗವತಿಯರಂತೆ ದೈವತ್ವಕ್ಕೇರಿದವರು. ಬಂಗರಾಜರ ಆಧಿಪತ್ಯವಿದ್ದ ಲ್ಲೆಲ್ಲ ಉಳ್ಳಾಲ್ತಿಗೆ ಕುಲದೇವಿಯ ಸ್ಥಾನಮಾನ. ಈಕೆಯದು ರಾಜಗಾಂಭೀರ್ಯದ ವೇಷ. ಈಕೆಯನ್ನು ತುಳುವರ ಭಗವತಿ ಎಂದು ಹೇಳಬಹುದು. ಮಾತೃವಂಶೀಯ ಕುಟುಂಬ ಪದ್ಧತಿಯನ್ನು ಅನುಸರಿಸುವ ಜನರಿಗೆ ಸಿರಿ ನಾರೀಧರ್ಮದ ಪರಮೋಚ್ಚ ಪ್ರತೀಕ. ಸ್ತ್ರೀ ಯರೇ ಸಿರಿಜಾತ್ರೆಯಲ್ಲಿ ಆವೇಶಗೊಳ್ಳುವುದರಿಂದ ಸಿರಿಗೆ ಪ್ರತ್ಯೇಕವಾದ ಒಂದು ಮಾಧ್ಯಮ ವಿಲ್ಲ. ಹಲವಾರು ಸ್ತ್ರೀಯರ ಮೈಮೇಲೆ ಆಕೆ ಕಾಣಿಸಿಕೊಳ್ಳುವುದರಲ್ಲಿ ಬಣ್ಣಗಾರಿಕೆ ವೇಷ ಭೂಷಣಗಳ ಗೊಡವೆಯಿಲ್ಲ. ಬಿಳಿಯ ಸೀರೆಯೊಂದು ಸಾಮಾನ್ಯ ಉಡುಗೆ. ಆಭರಣಗಳೂ ಸಾಮಾನ್ಯವಾದುವು. ಇಲ್ಲಿಯ ಸರಳತೆಯು ಭೂತಾರಾಧನೆಗೆ ವಿರುದ್ಧವೆನ್ನಬಹುದು. ಭೂತ ಗಳ ಮುಖವರ್ಣಿಕೆಯಲ್ಲಿ-ಮೂಲಬಣ್ಣಗಳಾದ ಕೆಂಪು, ಹಳದಿ, ಕಪ್ಪುಗಳನ್ನು ಉಪಯೋಗಿ ಸುವರು. ವೇಷಕ್ಕೆ ತೆಂಗಿನ ತಿರಿ (ಸಿರಿ), ಅಡಕೆಯ ಹಾಳೆ, ಅಲಂಕಾರಕ್ಕೆ ಕಿಸ್ಗಾರದ ಹೂ (ಕಾಡುಕೇಪಳ) ಅಣಿ ಉದ್ದಪಡಿಸಲು ಬಿದಿರ ಹಂದರ, ಅಡಕೆಯ ಹಾಳೆಗಳು, ಮುಖವಾಡ ಗಳಿಗೆ ಕೂಡ ಹಾಳೆ-ಹೀಗೆ ಸ್ಥಳೀಯ ವಸ್ತುಪರಿಕರಗಳಿಂದಲೇ ಭೂತದ ಸಿಂಗಾರ ನಡೆಯು ತ್ತದೆ.

**ಮುಖವರ್ಣಿಕೆ :** ಇದಕ್ಕೆ ಮುಖ್ಯವಾಗಿ ಉಪಯೋಗಿಸುವ ಬಣ್ಣಗಳು ಅರದಾಳೆ, ಇಂಗ್ಲೀಕ, ಸಫೇದ್, ಮಸಿ, ಕಾಡಿಗೆ, ಹಲಸಿನ ಅರಸಿನ ಮಾತ್ರವೇ ಆದರೂ ಸೂಕ್ತ ಪ್ರಮಾಣದಲ್ಲಿ ಒಂದರೊಡನೊಂದು ಮಿಶ್ರಣಮಾಡಿ ಬೇಕಾದ ಬಣ್ಣಗಳನ್ನು ತಯಾರಿಸು ವರು. ಹಣತೆ ಅಥವಾ ದೀಪದ ಮಂದವಾದ ಬೆಳಕಿನಲ್ಲಿ ಬಣ್ಣದ ಕಡ್ಡಿಯಿಂದ ಮುಖ ವರ್ಣಿಕೆ ಬರೆಯಲು ಸುಮಾರು ಎರಡು ಮೂರು ತಾಸು ಹಿಡಿಯುವುದು. ಹಿನ್ನೆಲೆಯಲ್ಲಿ ಪಾಡ್ದನದ ಸಂಗೀತವು ನೇಮಕ್ಕೆ ಬೇಕಾದ ದೈವಿಕ ವಾತಾವರಣ ಸೃಷ್ಟಿಸುತ್ತದೆ. ದೈವಗಳ ಸ್ವಭಾವಕ್ಕನುಗುಣವಾಗಿ ಹಳದಿ, ಕೆಂಪು, ಕಪ್ಪು ಬಣ್ಣಗಳೂ, ವರ್ಣವಿನ್ಯಾಸವೂ, ಚುಟ್ಟಿ, ಅಡ್ಡ-ನೀಟಗೆರೆಗಳೂ, ನಾಮ ಮುದ್ರೆಗಳೂ ಕಣ್ಣಿನ ಸುತ್ತ ಕೆಂಪು ಯಾ ಕಪ್ಪು ಗೆರೆಗಳನ್ನಾಗಿ ಬರೆಯಲ್ಪಡುತ್ತವೆ. ಅರದಾಳವು ದೀಪದ ಬೆಳಕಿನಲ್ಲಿ ಅತಿಮಾನುಷ ಕಲ್ಪನೆಯನ್ನು ಉಂಟು ಮಾಡುವುದರಿಂದ ಎಲ್ಲ ಭೂತಗಳ ಮುಖವರ್ಣಿಕೆಗೆ ತಳಹದಿಯ ಬಣ್ಣ ಅರದಾಳದ ಅರ ಸಿನ. ಬಣ್ಣಗಾರಿಕೆಯಲ್ಲಿ ಪಾತ್ರಪ್ರಜ್ಞೆ, ಪ್ರಾದೇಶಿಕತೆ, ಕಲಾಪ್ರಜ್ಞೆಯಿಂದ ಪರವ, ಪಂಬದ, ನಲ್ಕೆಯವರು ಒಂದೇ ವೇಷದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಮಾಡುವುದುಂಟು.

ಉಳ್ಳಾಲ್ತಿ ಮತ್ತು ಜುಮಾದಿ ದೈವಗಳಿಗೆ ಹಣೆಯಲ್ಲಿ ಹುಬ್ಬುಗಳ ಮೇಲಕ್ಕೆ ಸಾಲಾಗಿ ಕೆಂಪು, ಬಿಳಿ, ಚುಕ್ಕೆಗಳನ್ನಿಟ್ಟು ಹಣೆಯಲ್ಲಿ ಚಿಕ್ಕನಾಮ ಬರೆದು ಅದನ್ನು ಚುಕ್ಕೆಗಳಿಂದಲೇ ಅಲಂಕರಿಸುತ್ತಾರೆ. ಗದ್ದವನ್ನು ಚಿತ್ರಿಸಿ ಮುಖದ ಸುತ್ತ (ಪರಿಧಿಯಲ್ಲಿ) ಕಿವಿಯ ಬದಿಗಳಿಂದ ಕೆಂಪು ಅಥವಾ ಕಪ್ಪುಗೆರೆ ಎಳೆಯುತ್ತಾರೆ. ತುಟಿಗೆ ಕೆಂಪು ಹಚ್ಚುತ್ತಾರೆ. ಮುಂದೆ ಮುಖ

ವಾಡವು ಮುಖವನ್ನು ಮುಚ್ಚುವುದರಿಂದ ಇಂಥ ಸರಳವಾದ ಮುಖವರ್ಣಿಕೆ ಬರೆಯುತ್ತಿರ ಬಹುದು. ಕಲ್ಕುಡ-ಕಲ್ಲುರ್ಟಿಯರು, ಅವರ ರೋಷಾವೇಷಕ್ಕೆ ಹೊಂದುವ ಬಣ್ಣ ಕಪ್ಪು. ಆದುದರಿಂದ ಕಲ್ಲುರ್ಟಿ ಮುಖಕ್ಕೆ ಕಪ್ಪು ಬಳದು ಅದರ ಮೇಲೆ ಬಿಳಿ, ಕೆಂಪು ಚುಕ್ಕೆಗಳನ್ನು, ಗಲ್ಲದಲ್ಲಿ 'ಮುದ್ರೆ'ಗಳನ್ನು ಬರೆಯುತ್ತಾರೆ. ಕೆಲವೆಡೆ ಕೇವಲ ಕಪ್ಪು ಬಳೆದ ಸ್ತ್ರೀವೇಷ ಮಾತ್ರ ಕಾಣಸಿಗುತ್ತದೆ. ದುಗ್ಗಲಾಯೆ, ಪಿಲಿಚಾಮುಂಡಿ ದೈವಗಳಿಗೆ ಕಡುಹಳದಿ ತಳಹದಿಯ ಮೇಲೆ ಅರಸಿನ ಮತ್ತು ಕೆಂಬಣ್ಣದ ಚುಕ್ಕೆಗಳು, ಹಣೆಯಲ್ಲಿ ಸೂರ್ಯ, ಚಂದ್ರ ಮತ್ತು ಕೆಂಪು ತಿಲಕ ಬರೆಯಲಾಗುತ್ತದೆ. ಸತ್ಯದೇವತೆ ಕಲ್ಲುರ್ಟಿಯು ಸಾತ್ವಿಕ ಶಕ್ತಿಯಾದುದರಿಂದ ಕಪ್ಪು ತಳಹದಿಯ ಮೇಲೆ ಬಿಳಿ ಚುಟ್ಟಿಗಳನ್ನು ಬಿಡಿಸುತ್ತಾರೆ. ಭೂತವೇಷದಲ್ಲಿ ಹಣೆಯ ಮೇಲಿನ ಬಣ್ಣಗಾರಿಕೆಗೆ ಹೆಚ್ಚಿನದು. ರಕ್ತೇಶ್ವರಿಯ ಮುಖವರ್ಣಿಕೆಯಲ್ಲಿ ಆಕೆಯ ಹೆಸರಿಗೆ ಅನ್ವರ್ಥ ವಾಗುವಂತೆ ಮುಖಕ್ಕೆ ಕೆಂಪು, ಕಣ್ಣುಗಳ ಸುತ್ತಲೂ ಕೆಂಪು ಇರುತ್ತದೆ. ಮಾಯಿಂದಾಳೆ ಮಂಗಲಮೂರ್ತಿಯಾದ ಮಾತೃದೇವತೆ ಗುಡಿಗಳಲ್ಲಿ ಈಕೆಯದು ಮಗುವನ್ನೆತ್ತಿಕೊಂಡ ಚೆಲುವಿನ ದಾರುವಿಗ್ರಹ. ಈಕೆಯ ಭೂತವೇಷದ ಮುಖವರ್ಣಿಕೆಯಲ್ಲಿ ಹೆಚ್ಚಿನ ವೈಶಿಷ್ಟ್ಯ ವಿಲ್ಲ. ಕೊರತಿ ಎಂಬುದು ಕೆಳವರ್ಗಕ್ಕೆ ಸೇರಿದ ಭೂತವಾಗಿದೆ. ಇದು ಮುಖಕ್ಕೆ ಅರದಾಳ ಹಚ್ಚಿ ತಲೆಗೆ ಮುಟ್ಟಾಳೆಯನ್ನಿಡುವ ಸ್ತ್ರೀವೇಷ ಮಾತ್ರ.

**ವೇಷಭೂಷಣಗಳು :** ತೆಂಗಿನ ಎಳೆಹಸುರು ತಿರಿ, ಅಡಕೆಯ ಹಾಳೆ, ಹಿಂಗಾರ, ಬಾಳೆಯ ಹಂಬಿ, ಬಿದಿರಿನ ನವಿರಾದ ಸಲಿಕೆ, ಬೆತ್ತ, ಕಿಸ್ಗಾರದ ಹೂ ಮೊದಲಾದವುಗಳಿಂದ ಭೂತ ದುಡುಗೆ, ತೊಡುಗೆ, ಅಣಿಗಳನ್ನು ರಚಿಸುತ್ತಾರೆ, ಇದರ ಚೆಲುವು ಇರುವುದೇ ನೈಜತೆಯಲ್ಲಿ. ತಿರಿ, ಹಾಳೆ, ಹೂಗಳಿಂದಲೇ ರಚಿತವಾದ ತೊಡವುಗಳ ಸ್ಥಾನದಲ್ಲಿ ಇಂದು ಚಿನ್ನ, ಬೆಳ್ಳಿ, ಕಂಚಿನ ಆಭರಣಗಳನ್ನು ಕಾಣಬಹುದು. ಮುಖವರ್ಣಿಕೆ ಆದಮೇಲೆ ಕೆಂಪುಚಲ್ಲಣ, ಕೆಂಪು ಅಂಗಿ ತೊಟ್ಟ ಭೂತವೇಷವು ತಲೆಸೂಡಿ ಕಟ್ಟಿ ತಲೆಮಣಿ, ತಲೆಪಟ್ಟಿ ಎಂಬ ಕಿರೀಟದಂತೆ ಕಾಣುವ ಅರ್ಧಚಂದ್ರಾಕೃತಿಯ ಬೆಳ್ಳಿಯ ಅಥವಾ ಕಂಚಿನ ಶಿರೋಭೂಷಣಗಳನ್ನು ಧರಿಸು ತ್ತದೆ. ತಲೆಮಣಿಯಲ್ಲಿ ಅನೇಕ ನಾಗರಹೆಡೆಯ ಆಕೃತಿಗಳಿದ್ದು ಅದು ತಲೆಪಟ್ಟವನ್ನು ಆಧ ರಿಸಿ ಹಿಡಿಯುತ್ತದೆ. ತಲೆಪಟ್ಟದಲ್ಲಿಯೂ ಸುತ್ತಲು ಒಂದು ಸಾಲು ನಾಗನಹೆಡೆಗಳ ಚಿತ್ರ, ಅದರ ಕೆಳಗಡೆ ಒಂದು ಸಾಲು ಹೂಬಳ್ಳಿಗಳ ಚಿತ್ರ, ಮತ್ತಿತರ ಸೂಕ್ಷ್ಮವಾದ ಚಿತ್ತಾರದ ಕೆಲಸವಿದೆ. ಕಿವಿಯ ಭಾಗದಲ್ಲಿ ಕಿವಿಗೆ ಹೊಂದುವಂತೆ ಕೀರ್ತಿಮುಖ ದೇವಿಯ ಚಿಹ್ನೆ-ಬಿಡಿ ಸಿದ ಕಿರಿಯ ಆಭರಣವನ್ನು ಜೋಡಿಸಿರುತ್ತಾರೆ. ತಲೆಪಟ್ಟದ ನಡುಮಧ್ಯದಲ್ಲಿ **ಕೀರ್ತಿ ಮುಖವೂ** ಇದೆ. ಇದನ್ನೆಲ್ಲ ಧರಿಸಿದ ಮೇಲೆ ಕೆಬಿನ ಎಂಬ ಹಾವಿನ ಹೆಡೆಯ ಆಕೃತಿಯ ಕಿವಿಯ ಆಭರಣ ಧರಿಸುವರು.

ಭುಜಗಳಿಗೆ ಕೈಗಳಿಗೆ ಕೈದಂಡೆ ಅಥವಾ ದಂಡೆಕಾಜಿ ಎಂಬ ಲೋಹದ ಅಗಲವಾದ ಬಳೆಗಳ (ಕಡಗಗಳು) ತೋಳುಗಳಿಗೂ ಕೈಗಳಿಗೂ ತಿರಿಪುಂಡ್ಯಾ (ತೆಂಗಿನ ಎಳೆ ತಿರಿಗಳಿಂದ ರಚಿತವಾದ ದಂಡೆ) ಮತ್ತು ಕೇಪುಳ ಹೂವಿನ ದಂಡೆ ಅಥವಾ ಈಗ ಹೆಚ್ಚಾಗಿ ಮಲ್ಲಿಗೆ ಸೂಡುತ್ತಾರೆ.



B1. ಜುಮಾದಿ




B2. ತೊಡಕಿನಾಟ

ಅನಂತರ ಭುಜ, ಬೆನ್ನು, ಎದೆಗಳಿಗೆ ಕವಚದಂತೆ ಭುಜಪಾಳೆ, ಬೆರಿಪಾಳೆ, ಎದೆಪಾಳೆ ಎಂಬ ತೊಡವುಗಳನ್ನು ಹಾಕಿಕೊಳ್ಳುವರು. ಇವೆಲ್ಲವೂ ಒಂದು ಕಾಲದಲ್ಲಿ ಹಾಳೆಯಿಂದಲೇ ರಚಿತವಾಗುತ್ತಿದ್ದ ತೊಡುವುಗಳು. ಅನಂತರ ಕೊರಳಿಗೆ ಗುಂಡುಸರ, ಪದಕಸರ ಮೊದಲಾದ ನಾನಾ ವಿಧದ ಆಭರಣಗಳನ್ನು ಕಂಠಹಾರಗಳನ್ನು ತೊಡುವರು. ಎದೆಕಟ್ಟು-ಮಾತೃದೇವತೆಗಳಿಗೆಲ್ಲ ಎದೆಕಟ್ಟು (ಮೊಲೆಕಟ್ಟು) ಅತಿ ಮುಖ್ಯವಾಮದು, ಇದನ್ನು ಹಾಳೆ, ಕಂಚು, ಬೆಳ್ಳಿಯಿಂದ ರಚಿಸುತ್ತಾರೆ. ಲೋಹದ ಎದೆಕಟ್ಟುಗಳನ್ನು ಭಂಡಾರದ ಮನೆಯಲ್ಲಿಟ್ಟು ಪೂಜಿಸುತ್ತಾರೆ. ಜುಮಾದಿ ದೈವವು ಸೊಂಟದಿಂದ ಮೇಲಕ್ಕೆ ಸ್ತ್ರೀಯೆಂದು ನಂಬಿಕೆ. ಆದಕಾರಣ ಹಳ್ಳಿಗರು ಅದನ್ನು ಅರ್ಧನಾರೀಶ್ವರ ಎನ್ನುತ್ತಾರೆ. ಪಿಲಿಚಾಮುಂಡಿ, ಗುಡ್ಡಚಾಮುಂಡಿ, ಉಳಾಲ್ತಿ, ಜುಮಾದಿ- ಮಲರಾಯಿ, ಸತ್ಯದೇವತೆ ಮೊದಲಾದ ಹೆಣ್ಣುದೈವಗಳು ಎದೆಕಟ್ಟು ಧರಿಸುತ್ತವೆ. ಮುಖವಾಡದಷ್ಟೇ ಪ್ರಾಮುಖ್ಯವಾದುದು ಎದೆಕಟ್ಟು ಎಂದು ನಂಬಿಕೆ,

**ಗಗ್ಗರಮೆಚ್ಚಿ :** ಗಗ್ಗರವೆಂದರೆ ಭೂತದ ಗೆಜ್ಜೆ. ಗೆಜ್ಜೆಯ ಉಲಿಗಿಂತ ಇದರ ಶಬ್ದ ಗಡಸು. ಅಬ್ಬರಬಿಡ್ತಿಗೆಯಿಂದ ಯಕ್ಷಗಾನ ಬಯಲಾಟವನ್ನು ಗುರುತಿಸಿದಂತೆ ಗಗ್ಗರದ ಝಣತ್ಕಾರದಿಂದ ಭೂತಕೋಲವನ್ನು ಗುರುತಿಸಬಹುದು. ಭೂತಕೋಲದಲ್ಲಿ ಸಾಂಕೇತಿಕತೆಯಂತೆಯೇ ಸಂಪ್ರದಾಯ ನಿಷ್ಠೆಯೂ ಇದೆ. ಗಗ್ಗರ ಧರಿಸಲು ಸಭೆಯ ಅನುಮತಿ ಬೇಡಿ ಭೂತವೇಷವು ಕೈಯಲ್ಲಿ ಗಗ್ಗರಗಳನ್ನಾಡಿಸುತ್ತಾ ಹಿಂದಕ್ಕೂ ಮುಂದಕ್ಕೂ ಹಲವುಬಾರಿ ನಾಟ್ಯಗತಿಯಲ್ಲಿ ಚಲಿಸಿ ಕಡೆಗೆ ಕಾರಪಾಳೆಯ ಮೇಲಕ್ಕೆ ಗಗ್ಗರ ತೊಡುವುದು. ಗಗ್ಗರ ತೊಡಲು ಅನುಕೂಲವಾಗುವಂತೆ ಕಾಲಿಗೆ ಮೃದುವಾದ ಕಾರಪಾಳೆ, ಪಾದಪಾಳೆಗಳನ್ನು ಎಲ್ಲ ಭೂತವೇಷಗಳೂ ತೊಡುತ್ತವೆ. 'ಗಗ್ಗರಮೆಚ್ಚಿ' ಎಂಬ ಈ ವಿಧಿಯ ತೀವ್ರಗತಿಯ ನಾಟ್ಯಸನ್ನಿವೇಶವು ಭೂತದ ರಂಗಪ್ರವೇಶವೆನ್ನಬಹುದು. ಭೂತನೃತ್ಯದ ಹೆಜ್ಜೆಗಳ ವೈಶಿಷ್ಟ್ಯಕ್ಕೆ ಭಾರವಾದ ಗಗ್ಗರಗಳ ತೊಡುವಿಕೆಯೂ ಒಂದು ಕಾರಣವೆನ್ನಬಹುದು. ಭಾರವಾದ ಅಣಿಯನ್ನು ಹೊತ್ತ ಉಳ್ಳಾಲ್ತಿ ದೈವವು ಸಲೀಸಾಗಿ ಕುಣಿಯುವುದು ಸಾಧ್ಯವಿಲ್ಲ. ಆದರೂ ಗಗ್ಗರದ ಉಲಿ ಕೇಳಿಸುವಷ್ಟು ಹಗುರಾದ ನಾಟ್ಯವಿದೆ.

**ಸಿರಿಲಂಗ :** ಹೆಚ್ಚಿನ ಹೆಣ್ಣಿನಭೂತಗಳು ತೆಂಗಿನತಿರಿಯ ಲಂಗ ಧರಿಸುವುದು ವಾಡಿಕೆ. ತೆಂಗಿನ ಸೋಗೆಯಿಂದ ಅದರ ಎಳೆಹಸುರು ತಿರಿಯನ್ನು ಉದ್ದಕ್ಕೆ ಸೀಳಿ ತೆಗೆದು ಸಪುರವಾದ ಪಟ್ಟಿಗಳಾಗಿ ಕತ್ತರಿಸುವಾಗ ಕಡ್ಡಿಯನ್ನೆಲ್ಲ ಕಳೆದು ಅದನ್ನು ಉದ್ದವಾದ ಬಟ್ಟೆಯಂತೆ ಭೂತದ ಸೊಂಟಕ್ಕೆ ಸುತ್ತಿದಾಗ ಲಂಗಧರಿಸಿದಂತೆ ಕಾಣುವುದು. ಮತ್ತೆ ಅದನ್ನು ನೇರ್ಪುಗೊಳಿಸಿ ಕಾಲಬಳಿಯ ಪಟ್ಟಿಗಳ ಓರೆಕೋರೆಗಳನ್ನು ಭೂತವೇಷ ನಿಂತಲ್ಲೇ ಗೆಜ್ಜೆ-ಕತ್ತಿಯಿಂದ ಕತ್ತರಿಸಿ ತೆಗೆದು ಲಂಗಕ್ಕೆ ಎಣ್ಣೆ ಪೂಸುವರು. ಅದರ ಹಸುರು ಹೊಳಪು ಇಮ್ಮಡಿಸುವುದಲ್ಲದೆ ತಿರಿಗೆ ಎಣ್ಣೆ ಹಚ್ಚಿದ ಮೇಲೆ ಭೂತಕ್ಕೆ ಆವೇಶ ಬರುವುದೆಂಬ ನಂಬಿಕೆಯೂ ಇದೆ. ಸಿರಿಲಂಗ ತೊಟ್ಟ ಭೂತವು ಉರಿವ ದೀವಟಿಗೆ ಹಿಡಿದು ಹತ್ತು ಸಮಸ್ತರ ಮುಂದೆ ತನ್ನ ಅಸ್ತಿತ್ವವನ್ನು ಪ್ರಕಟಿಸುವ ನಾಟ್ಯ, ದರ್ಶನಾದಿ ವಿಧಿಗಳೆಲ್ಲ ಮುಗಿದ ಮೇಲೆ ನಡುರಾತ್ರಿಯಲ್ಲಿ ಅಣಿ ಕಟ್ಟುವ ಹಂತಕ್ಕೆ ತಲುಪುತ್ತದೆ. ಅನಂತಾಡಿಯ ಉಳ್ಳಾಲ್ತಿ ಸಿರಿಲಂಗ

ತೊಡುವುದು. ಆದರೆ ಕಾಂಪ್ರಬೈಲಿನ ಉಳ್ಳಾಲ್ತಿಗೆ ನೆರಿಗೆಯಾಗಿ ಸೀರೆ ಉಡಿಸುವರು. ಸಜೀಪದ ಉಳ್ಳಾಲ್ತಿ ಅಣಿ ಇತ್ಯಾದಿ ಇಲ್ಲದ ಕೇವಲ ಸ್ತ್ರೀರೂಪ. ಬಂಗರಾಜ ಪ್ರತಿನಿಧಿಯ ಕೈಹಿಡಿದು ನಡೆಮಡಿಯ ಮೇಲೆ ನಡೆವ ಪ್ರಾಚೀನಕಾಲದ ಆಭರಣದಿಂದ ಸುಶೋಭಿತೆಯಾಗಿ ಮದುಮಗಳಂತೆ ಕಾಣುವಳು. ಇಲ್ಲಿ ವೇಷಕ್ಕಿಂತ ಐತಿಹ್ಯ, ಚಾರಿತ್ರಿಕ ಘಟನೆಯ ಪುನರಾವರ್ತನೆಯ ವಿಧಿಯೇ ವಿಶೇಷವೆನಿಸುತ್ತದೆ. ಮಾಯಿಂದಾಳ್ ಸಿರಿಲಂಗ ತೊಟ್ಟ ವೇಷ, ಕೊರತಿ ಕೆಲವೆಡೆ ಸಿರಿಲಂಗ ಇಲ್ಲವಾದರೆ ಸೀರೆಯನ್ನುಟ್ಟು ಮುಟ್ಟಾಳೆ ಧರಿಸುವುದು. ಜುಮಾದಿ ಪಿಲಿಚಾಮುಂಡಿ, ಮಲರಾಯಿ ಸಿರಿಲಂಗ ತೊಡುವ ವೇಷಗಳೇ ಆಗಿವೆ. ಸತ್ಯದೇವತೆ, ಕಲ್ಲುರ್ಟಿ ಭೂತಗಳಿಗೂ ಸಿರಿಲಂಗವೇ ಉಡುಗೆಯಾಗಿದೆ. ಅವುಗಳಿಗೆ ಅಣಿಯಾಗಲಿ ಮೊಗವಾಗಲಿ ಇಡುವುದಿಲ್ಲ.

**ಭೂತದ ಅಣಿ :** ಜುಮಾದಿ, ಮಾಲರಾಯಿ, ಉಳ್ಳಾಲ್ತಿ, ಪಿಲಿಚಾಮುಂಡಿ ದೈವಗಳಿಗೆ ಅಣಿ ಇಡುವುದು ಸಂಪ್ರದಾಯ. ಅಣಿಯನ್ನು ಬಟ್ಟೆ, ಹಾಳೆ, ತಿರಿಯಿಂದ ರಚಿಸುತ್ತಾರೆ. ಈಗೀಗ ರಟ್ಟಿನಿಂದ ಮಾಡಿದ ಅಣಿಗಳೂ ಬಾಡಿಗೆಗೆ ಸಿಗುತ್ತವೆ. ಅಣಿಗಳು ತ್ರಿಕೋಣ, ಚೌಕ, ಅರ್ಧವೃತ್ತಾಕಾರ-ಹೀಗೆ ವಿವಿಧ ಆಕೃತಿಯುಳ್ಳವು. ಅಣಿಯ ಗಾತ್ರವು ಆಯಾ ಭೂತದ ಸ್ಥಾನ, ಮಾನ, ಪ್ರಾದೇಶಿಕತೆ, ಮಹಿಮೆಗಳಿಗನುಗುಣವಾಗಿ ಚಿಕ್ಕದು ದೊಡ್ಡದು ಗಜಗಾತ್ರದ್ದು ಇರಬಹುದು. ಅಲಿಚಾಮುಂಡಿಗೆ ಬೃಹದಾಕಾರದ ಅಣಿ ಕಟ್ಟುತ್ತಾರೆ. ಆದರೆ ದಕ್ಷಿಣ ಕನ್ನಡದಲ್ಲಿ ಉಪ್ಪಿನಂಗಡಿಯ ಮಹಾಕಾಳಿಯ ಅಣಿಯೇ ಎಲ್ಲಕ್ಕಿಂತ ದೊಡ್ಡದು. ಬಿದಿರಿನ ಸಲಾಕೆ, ಬೆತ್ತಗಳಿಂದ ಬೇಕಾದ ಆಕೃತಿಯ ಹಂದರವನ್ನು ತಯಾರಿಸಿ ಅದನ್ನು ತೆಂಗಿನ ತಿರಿಯ ಪಟ್ಟಿಗಳಿಂದ ಅಲಂಕರಿಸುವರು. ಪಿಲಿಚಾಮುಂಡಿ ಭೂತಕ್ಕಿಡುವ ಇಂಥ ಅಣಿಯ ನಡುವೆ ಕೆಂಪು ರೇಷ್ಮೆ ಬಟ್ಟೆಯ ಅಟ್ಟೆಯನ್ನು ಸೇರಿಸುವರು. ಅಟ್ಟೆಯನ್ನು ಬೆಳ್ಳಿಯ ಕಟ್ಟುಗಳು ಬೆಳ್ಳಿಯ ಹೂಗಳು ಇತ್ಯಾದಿಯಿಂದ ಸಿಂಗರಿಸುವರು. ದೀಪದ ಬೆಳಕಿನಲ್ಲಿ ತಿರಿಯ ಹಸುರು, ಅಟ್ಟೆಯ ಕೆಂಬಣ್ಣ ಹೊಂದಿಕೆಯಾಗಿದ್ದು ಬೆಳ್ಳಿಯ ಆಭರಣಗಳು ಮಿನುಗುವುವು. ದೇವರ ಪ್ರಭಾವಳಿಯ ಅಟ್ಟೆಯೂ ಇದೇ ರೀತಿಯದು. ದೈವದ ಅಟ್ಟೆಯನ್ನು ಅನುಕರಿಸಿ ದೇವರ ಅಟ್ಟೆಯನ್ನು ನಿರ್ಮಿಸಿರಬಹುದೆಂದು ದಿ॥ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯವಿತ್ತಿದ್ದಾರೆ.

ಉಳ್ಳಾಲ್ತಿ ದೈವಕ್ಕೆ ಹೆಚ್ಚಾಗಿ ದೊಡ್ಡದಾದ ತ್ರಿಕೋಣಾಕೃತಿಯ ಹಾಳೆಯ ಅಣಿಯನ್ನು ಕಟ್ಟುವರು. ರಾಜದೈವವಾದ ಉಳ್ಳಾಲ್ತಿಯ ರಾಜಗಾಂಭೀರ್ಯಕ್ಕೊಪ್ಪುವ ಕಲಾನೈಪುಣ್ಯದ ಶ್ರೀಮಂತಿಕೆಗೆ ಈ ಅಣಿಯ ರಚನೆಯೂ ಒಂದು ಮಾದರಿಯಾಗಿದೆ. ಚಾಪೆ ಹೆಣೆವ, ಕಾಯಕದ ಪರವ, ಪಂಬದರಿಗೆ ಇದು ಜನ್ಮ ಸಿದ್ಧವಾದ ಕಲೆಯಾಗಿದೆ. ಮುಹೂರ್ತ ನೋಡಿ ಹಾಳೆಗಳನ್ನು ಕೊಯ್ದು ತರುವರು. ಮೊದಲೇ ತಯಾರಿಸಿದ ತ್ರಿಕೋಣಾಕೃತಿಯ ಬಿದಿರ ಹಂದರಕ್ಕೆ ಮೆದುವಾಗಿಸಿದ 101 ತುಂಡು ಹಾಳೆಗಳನ್ನು ನಾರಿನಿಂದ ನೇಯ್ದು ಕೆಂಪು, ನೀಲಿ, ಅರಸಿನ, ಬಣ್ಣಗಳಿಂದ ಅಂಕಣಗಳನ್ನು ಬಿಡಿಸುವರು. ಅಣಿಯ ನಡುವೆ ಕೆಂಪು ಪಟ್ಟೆಯ ಅಟ್ಟೆಯನ್ನು ಸೇರಿಸುವರು. ಅಟ್ಟೆಗೆ ತಾಗಿ ಬೆಳ್ಳಿಯ ಗುಲಾಬಿಗಳ ಮಾಲೆ ಇದೆ. ಅಣಿಯ ಹೊರಸುತ್ತಿನಲ್ಲಿ ಬೆಳ್ಳಿಯ ಪಾಂಬೊಡಿಕ್ಯಾ, ಅಶ್ವತ್ಥ ಎಲೆ, ಗುಬ್ಬಿ ಇತ್ಯಾದಿ

ಹಲವಾರು ತರದ ಆಭರಣಗಳಿದ್ದು ಶಿಖರದಲ್ಲಿ ಕೀರ್ತಿಮುಖವಿದೆ. ಎಲ್ಲಕ್ಕಿಂತ ಮೇಲೆ ಮುಗುಳಿ ಇದೆ. ಅಣಿಯನ್ನು ಸಿಂಗರಿಸಲು ಬೆಳ್ಳಿಯ ಅಡ್ಕೆರೆಪೂ, ಜಾಲಿಕಟ್ಟ, ಪಾಳೆಜಿಡೆ ಹೀಗೆ ಹಲವಾರು ಅಲಂಕರಣ ಸಾಧನಗಳಿವೆ. ಎಲ್ಲಕ್ಕಿಂತ ಹೊರಸುತ್ತಿನಲ್ಲಿ ಕಪ್ಪು, ಕೆಂಪು ಬಣ್ಣದ ನಿಶಾನೆಗಳನ್ನು ಸೇರಿಸಿರುತ್ತಾರೆ. ಭೂತಕ್ಕೆ ಅಣಿ ಒಂದು ಪ್ರಭಾವಲಯವಾಗಿದೆ. ಅದನ್ನು ಬೆರಿಪಾಳೆಗೆ ಕಟ್ಟುತ್ತಾರೆ. ಈ ಪ್ರಧಾನ ಅಣಿಯಲ್ಲದೆ 'ಜಕ್ಕೆಲಣಿ' ಎಂಬ ಅರ್ಧ ವೃತ್ತಾಕಾರದ ಚಿಕ್ಕಅಣಿಯನ್ನು ಸೊಂಟಕ್ಕೆ ಕಟ್ಟುತ್ತಾರೆ. ದೀವಟಿಗೆ ಹಿಡಿದ ಅಥವಾ ಕಡ್ತಲೆ-ಗಂಟೆಗಳನ್ನು ಹಿಡಿದ ಕೈಗಳಿಗೆ ಜಕ್ಕೆಲಣಿ ಆಧಾರವಾಗಿದೆ. ಉಳ್ಳಾಲ್ತಿ ಎರಡು ಸೂಟೆ ಗಳನ್ನು ಹಿಡಿದಾಗ ಜಕ್ಕೆಲಣಿಯು ಕೈಯನ್ನಿರಿಸಲು ಅನುಕೂಲವಾಗಿದೆ. ಉಪ್ಪಿನಂಗಡಿಯ ಮಹಾಕಾಳಿ ಅತಿಎತ್ತರವಾದ ಅಣಿಯನ್ನು ಧರಿಸುವುದರಿಂದ ಅದು ಅತ್ತಿತ್ತ ವಾಲದಂತೆ ಬಿದಿರ ಬೊಂಬುಗಳಿಂದ ಅದನ್ನು ಆಧರಿಸಿ ಹಿಡಿಯುತ್ತಾರೆ. ಮಹಾಕಾಳಿ ಎಂಬ ಕಲ್ಪನೆಯುತ್ತ ಸಾಕಾರವಾಗಿ ಮಾಡಿಕೊಳ್ಳುವ ಜಾನಪದ ಪ್ರಯತ್ನವನ್ನಿಲ್ಲಿ ಕಾಣಬಹುದು. ಕುಂದಾಪುರದ ಕಡೆಯ ಪಾಣಾರ ಆಟದಲ್ಲಿ ಮಹಾಕಾಳಿಯ **ಪೊಡ** (ಮುಡ ?) ಎತ್ತುವ ಕಾರ್ಯಕ್ರಮ ವಿದೆ. ಮಹಾಕಾಳಿಯ ವೇಷಕ್ಕಿಂತಲೂ ಆಕೆಯ ಕೃತಕವಾದ ಆಕೃತಿ ಭಯಂಕರವಾದುದು. ಅದರ ಭಯಭೀತಿ ಹುಟ್ಟಿಸುವ ಮುಖಕ್ಕೆ ಒಪ್ಪುವ ನಾಲಗೆ, ಕಿವಿಗಳಿಗೆ ಆಭರಣದಂತೆ ತೂಗಾಡಿಸಿದ ತೆಂಗಿನ ಕ್ಯಾಗಳು, ಅದರ ಬಾಯಿ ಗಿಟ್ಟ ಉರಿವ ಬತ್ತಿಗಳು. ಅವನ್ನು ಘುಗ್ಗಿಂದು ಉರಿಸಲು ಎರಚುವ ಧೂಪ ಮೊದಲಾದ ಈ ಎಲ್ಲ ದೃಶ್ಯಾವಳಿ ಅಪರಾತ್ರಿಯಲ್ಲಿ ಅತಿಮಾನುಷವಾದ ಭ್ರಮಾಲೋಕವನ್ನು ಸೃಷ್ಟಿಸುತ್ತವೆ.

**ಮುಖವಾಡ :** ಅಣಿಯಿಂದ ಸಿಂಗಾರಗೊಂಡ ಭೂತವು ಕಾರ್ಯಕ್ರಮದ ಕೊನೆಯ ಅಂಗ ವಾಗಿ ಮುಖವಾಡ ಧರಿಸುವುದು. ಮುಖವಾಡಗಳಲ್ಲಿ ಹಾಳೆ, ಕಂಚು, ಬೆಳ್ಳಿ, ಬಂಗಾರದವು ಕಾಣಸಿಗುತ್ತವೆ. ಗುಡಿಗಳಲ್ಲಿ ಮಾತ್ರ ಲೋಹದ ಮುಖವಾಡಗಳನ್ನು ಪೂಜಿಸುತ್ತಾರೆ. ಮುಖವಾಡವನ್ನು ಬಿಂಬ, ಮೂರ್ತಿ, ಮೊಗ ಎಂದು ಕರೆಯುತ್ತಾರೆ. ಅನಂತಾಡಿಯ ಉಳ್ಳಾಲ್ತಿಯ ಚಂದನದ ಮುಖವಾಡವನ್ನು 'ಚಿತ್ತಾರಿಗೆ' ಎಂಬ ದೇವಸ್ಥಾನದಲ್ಲಿಟ್ಟು ಪೂಜಿಸುತ್ತಾರೆ. **ನೆಂಚ್ಚಿ** ಎಂಬ ನೇಮ ಸೇವೆಯಲ್ಲಿ ಭೂತವು ಚಂದನ ಹಾಗೂ ಬೆಳ್ಳಿಯ ಮುಖವಾಡಗಳನ್ನು ಧರಿಸುವುದು. ವಾಣಿಯ ಉಳ್ಳಾಲ್ತಿಯ ಮುಖವಾಡವನ್ನು ಹಾಳೆ ಯಿಂದಲೇ ರಚಿಸುತ್ತಾರೆ. ಎರಡು ದೊಡ್ಡ ಹಾಳೆಗಳನ್ನು ನಾರಿನಿಂದ ಹೆಣೆದು ಜೋಡಿಸಿ ಅದಕ್ಕೆ ಬಣ್ಣಹಚ್ಚಿ, ಕಣ್ಣು-ಬಿಡಿಸಿ, ಉದ್ದವಾದ ಹಾಳೆಯ ನಾಲಗೆಯನ್ನು ಜೋಡಿಸು ತ್ತಾರೆ. ಈ ಮುಖವಾಡಗಳು ಹೆಣ್ಣು ದೈವಗಳದಾದರೂ ಇವುಗಳ ಮೇಲೆ ಶೌರ್ಯ, ಪ್ರತಾ ಪದ ಸಂಕೇತವಾಗಿ ಮೀಸೆ ಬಿಡಿಸುತ್ತಾರೆ. ಅನಂತಾಡಿ ಉಳ್ಳಾಲ್ತಿಯ ಮುಖವಾಡದ ಹೊಳ ಪಿನ ಕಣ್ಣುಗಳು, ಮೂಗಿನ ನತ್ತು ಭೂತಕ್ಕೆ ಮುತ್ತೈದೆ ಕಳೆಯನ್ನು ಕೊಡುತ್ತವೆ. ಎತ್ತರ ವಾದ ಅಣಿಯ ಕಡೆ ನಮ್ಮ ಗಮನವು ಕೇಂದ್ರೀಕೃತವಾಗುವುದರಿಂದ ಮುಖವಾಡ ಧರಿಸಿದ ದೈವವು ಕುಳ್ಳಾಗಿ ಕಾಣಿಸುವುದು. ಆದರೆ ಬಹುಜನಾಕರ್ಷಣೆಯೇ 'ನೆಂಚ್ಚಿ'ಯ ವೈಶಿಷ್ಟ್ಯ. ಜುಮಾದಿ, ಮಲರಾಯಿ, ವಾರಾಹಿಗಳು ಅಡಕೆ ಹಾಳೆಯ ಅಥವಾ ಕಂಚಿನ ಮುಖವಾಡ

ಧರಿಸುತ್ತವೆ. ಹಾಳೆಯ ಮುಖವಾಡವನ್ನು **ಕೋಲ-ನೇಮ**ಗಳಾದ ಮೇಲೆ ಬಿಸುಟು ಬಿಡುವರು. ವ್ಯಾಘ್ರಚಾಮುಂಡಿ, ಗುಡ್ಡಚಾಮುಂಡಿಯರ ಮುಖವಾಡಗಳು ಬಿಟ್ಟಪಲ್ಲು ದಾಡೆಮೀಸೆಗಳಿಂದ ಕೂಡಿದ್ದು ನೋಡಲು ಭಯಂಕರವಾಗಿರುತ್ತವೆ. ಇವು ಹೆಚ್ಚಾಗಿ ಲೋಹದವುಗಳು. ಉಪ್ಪಿನಂಗಡಿಯ ಮಹಾಕಾಳಿಯ ಮುಖವಾಡಕ್ಕೆ ಅತಿ ದೀರ್ಘವಾದ ಹಾಳೆಯ ಸರ್ಪದಾಕೃತಿಯ ಕೆಂಪು ನಾಲಗೆ ಜೋಡಿಸುವರು. ಅದನ್ನು ಸುರುಳಿಯಾಗಿ ಸುತ್ತಿ ಭೂತ ನಡೆವಲ್ಲೆಲ್ಲ ಒಯ್ಯುತ್ತಾರೆ. ಕೂಟತ್ತಜೆ, ಪೈವಳಿಕೆ ಎಂಬಲ್ಲಿ ಉಳ್ಳಾಲ್ತಿಗೆ ಚಾರಿತ್ರಿಕ ಮಹತ್ವವುಳ್ಳ ಬಂಗಾರದ ಮುಖವಾಡವಿದೆ. ಕುಡುಪಿನ ಪಂಚಧೂಮಾವತಿ ದಾರುವಿಗ್ರಹವು ಭೂತವೇಷವೇ ಆಗಿದ್ದು ಪಂಚಮುಖಗಳನ್ನು ಹೊಂದಿದ್ದ ಭಾರೀ ಹಳೆಯ ಅಮೌಲ್ಯ ವಾದ ವಸ್ತುವಾಗಿತ್ತು. ಪ್ರಾಯಶ ಈಗ ಅದು ಭಗ್ನವಾಗಿರಬಹುದು. ಸುಮಾರು ಇನ್ನೂರು ವರ್ಷಗಳ ಹಿಂದಿನ ಭೂತವೇಷದ ಒಂದು ಮಾದರಿ ಅದಾಗಿರಬಹುದು. ಅದರ ಅಣಿಯ ರಚನೆ, ಪಂಚಮುಖಗಳು-ಅವುಗಳನ್ನು ಧರಿಸಿದ ರೀತಿ ಅಧ್ಯಯನಯೋಗ್ಯವಾಗಿದೆ ಎಲ್ಲಾ ಭೂತಗಳೂ ಕೈಯಲ್ಲಿ ಗಂಟೆ, ಕಡ್ತಲೆ ಧರಿಸಿದರೆ ಉಳ್ಳಾಲ್ತಿ ಎರಡು ಉರಿವ ಸೂಟೆ ಧರಿ ಸುವಳು. ಭೂತಗಳಿಗೂ ವಾಹನಗಳಿವೆ. ಜುಮಾದಿ ಕಟ್ಟಿಗೆಯ ಹುಲಿಯನ್ನೇರಿದರೆ ಮಲ ರಾಯಿ, ವಾರಾಹಿ ವರಾಹವಾಹನೆಯರು. ಪಿಲಿಚಾಮುಂಡಿಯೂ ವ್ಯಾಘ್ರವಾಹನೆ. ಒಂದು ಭೂತದ ನೇಮ ಮುಗಿದಮೇಲೆ ಮುಖವಾಡವನ್ನು ತೆಗೆದಿರಿಸಿ ಅದೇ ಭೂತವೇಷ ಇನ್ನೊಂದು ಪರಿವಾರ ದೈವವಾಗಿ ಆರಾಧಿಸಲ್ಪಡುವಾಗ ಆ ದೈವದ ಮುಖವಾಡವನ್ನು ತಲೆಯಿಂದ ಮೇಲಕ್ಕೆ ಅಣಿಯ ಮಧ್ಯೆ ಇಡುವರು, ಉದಾಹರಣೆಗೆ ಉಳ್ಳಾಲ್ತಿ ನೇಮ ಮುಗಿದ ಮೇಲೆ ಪಿಲಿಚಾಮುಂಡಿ ದೈವಕ್ಕೆ ಕೋಲ ನಡೆಯುವುದು.

**ಸುತ್ಯ ಅಥವಾ ಸ್ವಸ್ತಿಕ :** ಭೂತಾರಾಧನೆ ಎಂಬ ತಾಂತ್ರಿಕ ಆರಾಧನೆಯಲ್ಲಿ ಹೆಚ್ಚಾಗಿ ಡಾಮರ ತಂತ್ರವನ್ನು ಅನುಸರಿಸುವರು. ತಂಬಿಲಗಳಲ್ಲಿ 'ಮಾಡ'ದ ಮಂಚಮೆಯ ಮೇಲೆ ಸುತ್ಯ ಇಡುತ್ತಾರೆ. ಇದರಲ್ಲೇ ದೈವವನ್ನು ಆವಾಹನೆ ಮಾಡುವುದು. ನೇಮದ ಸಂದರ್ಭ ದಲ್ಲಿ **ಕೊಡಿಯಡಿ**ಯಲ್ಲಿ ಭಂಡಾರವನ್ನು ಇಟ್ಟು ಯೋಗ್ಯವಾಗಿ ಉಪಚರಿಸಿ ತಾತ್ಕಾಲಿಕ ದೇವಸ್ಥಾನವನ್ನು ನಿರ್ಮಿಸುತ್ತಾರೆ. ಕಡ್ತಲೆ, ಗಂಟೆ, ಮೊಗ, ಎದೆಕಟ್ಟು, ಗೆಜ್ಜೆಕತ್ತಿ-ಆಭರಣಗಳೆಲ್ಲ ಸೇರಿ ದೈವದ ಭಂಡಾರವೆನಿಸುತ್ತವೆ. ಅದರ ಮುಂದೆ ಸುತ್ಯ ಇಡುತ್ತಾರೆ. ಸುತ್ಯವೆಂದರೆ ಕುಡಿ ಬಾಳೆಎಲೆಯಲ್ಲಿ ಅಕ್ಕಿ, ತೆಂಗಿನಕಾಯಿ, ಹಿಂಗಾರ, ಗಂಧ, ಎಲೆಅಡಿಕೆ, ಅಕ್ಷತೆಗಳನ್ನಿಡುವುದು. ಅದರ ಎದುರಿಗೆ ಮುಕ್ಕಾಲಿಗೆಯನ್ನಿರಿಸಿ ಅದರ ಅಡಿಯಲ್ಲಿ ಮಂಡಲ ಬರೆದಿರುತ್ತಾರೆ.

**ಮಂಡಲ :** ಜೇಡಿಮಣ್ಣು, ಅಕ್ಕಿಹುಡಿ, ಹಿಂಗಾರಗಳಿಂದ ಭೂತದ **ಮಾನಿ** ಬರೆವ ಮಂಡಲ ಸರಳವಾದುದು. ಗಂಡು ಭೂತಗಳಿಗೆ ಕೆಲವೆಡೆ ಗರಡಿಗಳಲ್ಲಿ ಸ್ವಲ್ಪ ಸಂಕೀರ್ಣಮಂಡಲ ಬರೆ ಯುವುದುಂಟು. ಪ್ರಕೃತ ಮಂಡಲವು ಪೃಥ್ವಿಯ ಸಂಕೇತವಿರಬೇಕು. ಫಲಸಮೃದ್ಧಿ ವಿಧಿಯ ಸೂಚನೆಯಾಗಿ ಮಂಡಲದ ಮೇಲೆ ಬಾಳೆಎಲೆಯಲ್ಲಿ ಅಕ್ಕಿ, ತೆಂಗಿನಕಾಯಿ, ವೀಳ್ಯ, ಅಡಕೆ, ಹಿಂಗಾರ, ಕೇಪುಳಹೂ ಇಡುತ್ತಾರೆ. ಆಮೇಲೆ ಮುಕ್ಕಾಲಿಯ ಮೇಲೆ 'ಬಲಿ' ಇಡುತ್ತಾರೆ.

**ಬಲಿ :** ಬಾಳೆಹಂಬೆ ಮತ್ತು ತೆಂಗಿನ ತಿರಿಯಿಂದ ಮಾಡಿದ ತ್ರಿಕೋನ, ಚತುಷ್ಕೋನ, ಅಷ್ಟ ಕೋನ ಇತ್ಯಾದಿ ಆಕೃತಿಯ ಸುಂದರವಾದ ಬುಟ್ಟಿಯಂಥ ಸಾಧನ. ಅದರಲ್ಲಿ ಅರಸಿನ ಮಿಶ್ರಿತ ಅನ್ನದ (ಚರು) ಮುದ್ರೆಯಿಟ್ಟು ಅದರ ಮೂರು ದಿಕ್ಕುಗಳಲ್ಲಿ ಮೂರು ಅಚ್ಚು ಬೆಲ್ಲ, ಮೂರು ಬಾಳೆಯ ಹಣ್ಣು ಇಡುವರು. ಮುದ್ರೆಯನ್ನು ತುಪ್ಪ ಸವರಿ ಮುದ್ದೆ ಯಾಗಿ ಮಾಡಿಟ್ಟು ಕರ್ಪೂರ ಬೂಳ್ಯ ಸಿಕ್ಕಿಸುವರು. ಅದರಲ್ಲಿ 5 ಹಣತೆಗಳನ್ನು ಹಚ್ಚಿಡು ವರು. ಇದು ನೈವೇದ್ಯ ಸಮರ್ಪಿಸುವ ರೀತಿ.

**ಪುಷ್ಪ :** ಭೂತಕೋಲಗಳಲ್ಲಿ ಮಲ್ಲಿಗೆ ಕನಕಾಂಬರಗಳಲ್ಲದೆ ಅತಿ ವಿಶೇಷವಾಗಿ ಉಪಯೋ ಗಿಸುವ ಪುಷ್ಪಗಳು ಹಿಂಗಾರ ಮತ್ತು ಕಿಸ್ಗಾರ, ಪ್ರಾಯಶ ಅವುಗಳ ಮಾದಕತೆ ಹಾಗೂ ಮದ್ದಿನ ಗುಣದಿಂದಾಗಿಯೇ ಈ ನಾಡಹೂಗಳ ಉಪಯೋಗವಾಗುತ್ತಿರಬೇಕು. ಇವುಗಳಲ್ಲಿ ಒಂದು ಹೊಂಬಣ್ಣ ಮತ್ತೊಂದು ಕೆಂಪು.

ಭೂತನೇಮಕೋಲಗಳ ವಿಧಿಗಳೆಲ್ಲ ಸಾಂಪ್ರದಾಯಿಕವಾಗಿ ಆಚರಿಸಲ್ಪಡುವವಲ್ಲದೆ ನಾಗ ಮಂಡಲ, ಡಕ್ಕೆಬಲಿ, ಇತ್ಯಾದಿ ಇತರ ಆರಾಧನೆಗಳಂತೆ ಮನೋರಂಜನೆಯನ್ನು ಒದಗಿಸು ವುದರಿಂದ ಇವು ತುಳುವರ ಸಾಂಸ್ಕೃತಿಕ ಜೀವನದ ಬಹು ಮುಖ್ಯ ಭಾಗವಾಗಿವೆ.

**ಟಿಪ್ಪಣಿ**

ಮಂಡಲ ಮತ್ತು ಬಲಿಗಳ ಚಿತ್ರಗಳನ್ನು ಚಿತ್ರ ಪುಟದಲ್ಲಿ ನೋಡಿರಿ.

ಗ್ರಂಥಋಣ

1. ಭೂತಾರಾಧನೆ-ಕೆ. ಚಿನ್ನಪ್ಪಗೌಡ
2. ಭೂತನಾಗರ ನಡುವೆ-ಬಿ. ಲೀಲಾ ಭಟ್
3. ಉಳ್ಳಾಲ್ತಿ ಅಮ್ಮನವರು-ಬಿ. ಲೀಲಾ ಭಟ್
4. Teyyam-Dr. K.K.N. Rao

# ದಕ್ಷಿಣ ಕನ್ನಡದ ಮೆಕ್ಕಿಕಟ್ಟೆಯ ಉರುಗಳು

–ಪುರುಷೋತ್ತಮ ಬಿಳಿಮಲೆ

ಮೆಕ್ಕಿಕಟ್ಟೆ ಎಂಬುದು ಊರಿನ ಹೆಸರು. ಇದು ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿರುವ ಉಡುಪಿ ತಾಲೂಕಿನ ಶಿರಿಯಾರ ಗ್ರಾಮದ ಬಳಿಯಿದೆ. ಸ್ಥಳೀಯರು ಇದನ್ನು 'ಮೆಕ್ಕೆಕಟ್ಟೆ' ಎಂದೂ ಉಚ್ಚರಿಸುವುದಿದೆ. ಇತಿಹಾಸ ಪ್ರಸಿದ್ಧವಾದ ಬಾರಕೂರಿನಿಂದ ಮೆಕ್ಕೆಕಟ್ಟೆಗೆ ಎಂಟು ಕಿ.ಮೀ. ದೂರ; ಕುಂದಾಪುರದಿಂದ 24 ಕಿ.ಮೀ. ದೂರವಿದೆ. ಕಳೆದ ಸುಮಾರು 30 ವರ್ಷಗಳಷ್ಟು ಹಿಂದೆ ದಟ್ಟವಾದ ಕಾಡಿನಿಂದ ಆವೃತ್ತವಾಗಿದ್ದ ಈ ಊರು ಈಗ ಬಯಲುಪ್ರದೇಶವಾಗಿದೆ. ಕಾಡು ಇಂದು ನಾಶವಾಗಿದೆ. ಮೆಕ್ಕಿಕಟ್ಟೆ ಪರಿಸರದಲ್ಲಿ ಕೃಷಿಯೇ ಜನರ ಪ್ರಧಾನ ವೃತ್ತಿ. ಅದರಲ್ಲಿಯೂ ಭತ್ತಕ್ಕೆ ಪ್ರಾಧಾನ್ಯ ಸಂದಿದೆ. ಗದ್ದೆಯನ್ನು ಉಳುವುದಕ್ಕೆ ಜನರು ಎತ್ತು ಮತ್ತು ಕೋಣಗಳನ್ನು ಬಳಸುತ್ತಾರೆ.

ಮೆಕ್ಕಿಕಟ್ಟು ಹೆಸರಿನ ನಿಷ್ಪತ್ತಿಯ ಬಗೆಗೆ ಖಚಿತವಾಗಿ ಏನನ್ನಾದರೂ ಹೇಳುವುದು ಕಷ್ಟ. ಸ್ಥಳದ ಐತಿಹ್ಯವೊಂದರ ಪ್ರಕಾರ ಈ ಊರಿನಲ್ಲಿ ಮೊದಲು ಜಂಬುಕೇಶ್ವರ ಎಂಬ ಋಷಿ ತಪಸ್ಸು ಮಾಡುತ್ತಿದ್ದ. ಆತ ತನ್ನ ಯಜ್ಞಕ್ಕೆ ಬೇಕಾದ ಮೇಕೆಗಳನ್ನು ಕಟ್ಟುತ್ತಿದ್ದ ಜಾಗವೇ 'ಮೇಕೆಕಟ್ಟು'. ಅದೇ ಮುಂದೆ ಮೆಕ್ಕಿಕಟ್ಟು, ಮೆಕ್ಕಿಕಟ್ಟೆ ಆಯಿತು'' ಈ ಐತಿಹ್ಯವು ಆ ಪ್ರದೇಶದ ಜನರ ಒಂದು ವಿಧದ ವೈದಿಕ ಚಿಂತನಪರ ಮನೋಧರ್ಮವನ್ನು ಪ್ರತಿಮಿಸುತ್ತದೆ. ಆದರೆ ಐತಿಹಾಸಿಕವಾಗಿ ಹೀಗೆಯೇ ನಡೆದಿರಬಹುದೆಂದು ಹೇಳಲು ಬೇರೆ ಆಧಾರಗಳಿಲ್ಲ. ಜೊತೆಗೆ ದಕ್ಷಿಣಕನ್ನಡ ಜಿಲ್ಲೆಯ ಸ್ಥಳನಾಮಗಳು ಹೀಗೆ ಋಷಿಯಿಂದ ಬಾರದೆ, ಸಾಮಾನ್ಯವಾಗಿ ಭೂಸ್ಥಿತಿಯಿಂದ ಬಂದಿರುವುದೇ ಹೆಚ್ಚು. (ವಿವರಗಳಿಗೆ ನೋಡಿ ರಘುಪತಿ ಭಟ್ಟ, ಕೆಮ್ತೂರು 1979) 'ಮೆಕ್ಕಿಕಟ್ಟೆ' ಎಂಬ ಪದದ ಉತ್ತರಭಾಗದಲ್ಲಿರುವ 'ಕಟ್ಟೆ'ಯು ತುಳುನಾಡಿನ ಇತರ ಕಡೆಗಳಲ್ಲಿಯೂ ಕಾಣಸಿಗುತ್ತದೆ. ಉದಾಹರಣೆಗೆ ಕಾಸರಕಟ್ಟೆ, ಗೇರ್ಕಟ್ಟೆ, ನೆಲ್ಲಿಕಟ್ಟೆ, ಸುಂಕದ ಕಟ್ಟೆ ಇತ್ಯಾದಿ ಮಾರ್ಗಗಳಲ್ಲಿ, ಮರದಡಿ ಕುಳಿತು ಬಳಲಿಕೆ-ನೀರಡಿಕೆಗಳನ್ನು ನಿವಾರಿಸಲಿಕ್ಕಾಗಿ ಮಾಡಿದ ಕಲ್ಲಿನ ಅಥವಾ ಮಣ್ಣಿನ ರಚನೆ, ದಂಡೆ ಎಂದೆಲ್ಲಾ ಅರ್ಥವಿರುವುದನ್ನು ರಘುಪತಿ ಭಟ್ಟರು ಗುರುತಿಸಿದ್ದಾರೆ. ಆದರೆ ಪೂರ್ವ ಪದವಾದ 'ಮೆಕ್ಕಿ-ಮೆಕ್ಕೆ ಯ ಅರ್ಥವ್ಯಾಪ್ತಿಯೇನೆಂಬುದನ್ನು ಗುರುತಿಸುವುದು ಸ್ವಲ್ಪ ತ್ರಾಸದಾಯಕ ವಿಚಾರ. ಅತ್ಯುತ್ತಮವಾಗಿ ಬೆಳೆಕೊಡುವ ಭೂಮಿಯನ್ನು ಕರಾವಳಿಯಲ್ಲಿ 'ಮಕ್ಕಿ' ಎಂದು ಕರೆಯುವುದಿದೆ. ಉದಾ : ಅರಸಿನ ಮಕ್ಕಿ, ಬೂಡುತ ಮಕ್ಕಿ ಇತ್ಯಾದಿ. ಈ ಅರ್ಥದಲ್ಲಿ ಭೂಭಾಗ ವಾಚಕವಾಗಿ 'ಮೆಕ್ಕಿಕಟ್ಟೆ' ಎಂಬ ಪದ ಬಂದಿರಬಹುದು.

'ಮೆಕ್ಕೆ' ಎಂಬ ಒಂದು ಜಾತಿಯ ಮರವಿದೆ. ಶಿರಿಯಾರ ಗ್ರಾಮದಲ್ಲಿ ಈ ಮರಗಳಿವೆ. 'ಹಿಂದೆ ಕಾಡಾಗಿದ್ದಾಗ ತುಂಬಾ ಮೆಕ್ಕೆ ಮರಗಳಿದ್ದುವು' ಎಂದು ಅಲ್ಲಿನ ಜನರು ಹೇಳುತ್ತಾರೆ. ಹಾದಿಬದಿಯ ಮರವೊಂದಕ್ಕೆ ಕಟ್ಟೆಕಟ್ಟಿ, ಅದನ್ನು ತಂಗುದಾಣವಾಗಿಸುವುದರಿಂದಲೂ

'ಮೆಕ್ಕಿಕಟ್ಟೆ' ಸಿದ್ಧಿಸಿರಬಹುದು. ಹೀಗೆ ಇತರೆಡೆಗಳಲ್ಲಿ ಹೆಸರು ಬಂದಿದೆ.

'ಉರು' ಪದದ ಬಗ್ಗೆಯೂ ನಿಖರವಾದ ಚರ್ಚೆ ನಡೆದಿಲ್ಲ. ಬಹುಮಟ್ಟಿಗೆ ಅದು 'ರೂಪು' (ಬೊಂಬೆ)ವಿನಿಂದ ಬಂದದ್ದೆಂದು ಹೇಳಲಾಗಿದೆ. (ಹೆಬ್ಬಾರ್ ಎ.ಎಸ್.ಎನ್. 1976-77: 55) 'ರೂಪು' ಎಂಬುದು 'ರೂಹು' ಆಗಿ ರೂಉ' ಎಂದಾಗಿ, ಕೊನೆಗೆ 'ಉರು' ಆಗಿರುವ ಸಾಧ್ಯತೆ ಇದೆ. ಮೆಕ್ಕಿಕಟ್ಟೆಯಲ್ಲಿರುವ ಬಗೆಬಗೆಯ ಕಾಷ್ಠಶಿಲ್ಪಗಳನ್ನೇ ಜನರು 'ಉರು'ಗಳೆಂದು ಕರೆದಿದ್ದಾರೆ. ಮೆಕ್ಕಿಕಟ್ಟೆಯ ಬೃಹದಾಕಾರದ ದೈವಸ್ಥಾನದಲ್ಲಿರುವ ವರ್ಣರಂಜಿತ ಪ್ರತಿಮೆಗಳ ಮೂಲಕವೇ ಅದನ್ನು ಗುರುತಿಸುವುದು ಸಹಜವೂ ಹೌದು.

**ಹಿನ್ನೆಲೆ :** ಮೆಕ್ಕಿಕಟ್ಟೆಯ ಉರುಗಳ ಸ್ಥಾಪನೆಯ ಬಗೆಗೆ ಐತಿಹಾಸಿಕವಾದ ಲಿಖಿತ ದಾಖಲೆಗಳೇನೂ ಇಲ್ಲ. ಶಾಸನಗಳಲ್ಲಿ ಅವುಗಳ ಬಗೆಗೆ ಕೆಲವು ಉಲ್ಲೇಖನಗಳು ದೊರಕಿದ್ದರೂ ಅವು ತೀರ ಈಚಿನವು. ಆದರೆ ಕರಾವಳಿಯ ಇತರೆಡೆಯ ದೇವಸ್ಥಾನಗಳಲ್ಲಿದ್ದಂತೆ ಮೆಕ್ಕಿಕಟ್ಟೆಯ ಪರಿಸರದಲ್ಲಿಯೂ ಹಲವು ಐತಿಹ್ಯಗಳನ್ನು ಕೆಳಗಿನಂತೆ ಸಂಗ್ರಹಿಸಲಾಗಿದೆ :

**ಐತಿಹ್ಯ 1** 'ತುಂಬಾ ಸಮಯಗಳ ಹಿಂದೆ, ಒಂದಾನೊಂದು ಕಾಲದಲ್ಲಿ ಬಾರಕೂರಿನಲ್ಲಿ ಭಾರೀ ಕಾಡು ಇತ್ತು. ಆ ಕಾಡಿನ ಮಧ್ಯೆ ಇರುವ ಒಂದು ಪರ್ವತದಲ್ಲಿ ವಿಶೇಷ ಶಕ್ತಿ ಪಡೆದ ಮಾರ್ಕಾಂಡೇಯ ಮುನಿಗಳು ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದರು. ಅವರ ಭಕ್ತಿಗೆ ಮೆಚ್ಚಿದ ಶಿವನು ಅವರಿರುವಲ್ಲಿಗೆ ಹೊರಟನು. ಆಗ ಅವನೊಂದಿಗೆ ಶಿವನ ಗಣವೂ, ದುರ್ಗೆಯೂ ಹೊರಟರಂತೆ. ಅವರನ್ನು, ಬರುವುದು ಬೇಡವೆಂದು ಹೇಳಲಾಗದ ಶಿವನು ಮನಸ್ಸಿಲ್ಲದೆ ಕರೆದುಕೊಂಡು ಬಂದನಂತೆ. ಆದರೆ ತನ್ನ ಗಣಗಳನ್ನೂ, ದುರ್ಗೆಯನ್ನೂ ಈಗಿನ 'ಮೆಕ್ಕಿಕಟ್ಟೆ'ಯಲ್ಲಿ ನಿಲ್ಲಿಸಿ, ತಾನೊಬ್ಬನೇ ಮುಂದರಿದನಂತೆ. ಹಾಗೆ ಆ ಕಾಲದಲ್ಲಿ ನಿಂತ ಗಣಗಳನ್ನು, ದುರ್ಗೆಯನ್ನು ಈಗಲೂ ಮೆಕ್ಕಿಕಟ್ಟೆಯಲ್ಲಿ ಕಾಣಬಹುದು.

**ಐತಿಹ್ಯ 2** 'ಒಮ್ಮೆ ಈಶ್ವರನ ಮಗನಾದ ಗಣಪತಿಯು ಮಿತಿಮೀರಿ ಹೆಂಡವನ್ನು ಕುಡಿದನಂತೆ. ಕುಡಿದದ್ದು ತಲೆಗೇರಿತು. ಹುಚ್ಚಾಪಟ್ಟೆ ಆಡ್ಡಾಡತೊಡಗಿದ ಮಾತ್ರವಲ್ಲ ಒದರಾಡತೊಡಗಿದ. ಆಗ ಶಿವನು ಅವನನ್ನು ಈಗಿರುವ ಮೆಕ್ಕಿಕಟ್ಟೆಗೆ ಕಳಿಸಿ, 'ಅಲ್ಲಿ ತಂಪಾಗಿದೆ ಹೋದರೆ ಉರಿ ಆರುತ್ತದೆ' ಎಂದನಂತೆ. ಓಡೋಡಿ ಬಂದ ಗಣಪತಿಗೆ ಮೆಕ್ಕಿಕಟ್ಟೆ ತಲುಪುತ್ತಿದ್ದಂತೆ ಉರಿ ನಿಂತಿತಂತೆ. ಸಂತೋಷವಾಗಿ ಅಲ್ಲಿ ನಿಂತನಂತೆ. ಹಾಗೆ ನಿಂತ ಕಪ್ಪಗಿನ ಗಣೇಶನನ್ನು ಈಗಲೂ ಮೆಕ್ಕಿಕಟ್ಟೆಯಲ್ಲಿ ಕಾಣಬಹುದು. ಆತ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಾನೆ ಕೂಡಾ,

**ಐತಿಹ್ಯ 3** 'ಒಂದಾನೊಂದು ಕಾಲದಲ್ಲಿ ಈಗಿನ ಮೆಕ್ಕಿಕಟ್ಟೆ ಪರಿಸರದಲ್ಲಿ ದಟ್ಟವಾದ ಅರಣ್ಯವಿತ್ತು. ಆ ಕಾಡಿನಲ್ಲಿ ಜಂಬುಕೇಶ್ವರ ಎಂಬ ಮುನಿ ಹಗಲೂ ರಾತ್ರಿಯೂ ತಪಸ್ಸು ಮಾಡುತ್ತಿದ್ದ. ಆದರೆ ಆವನ ತಪಸ್ಸಿಗೆ ಕಾಡಿನ ಮೃಗಗಳು ತುಂಬಾ ತೊಂದರೆ ಕೊಡುತ್ತಿದ್ದುವು. ಕಾಡು ಜನರೂ ಉಪದ್ರವ ಕೊಡುತ್ತಿದ್ದರು. ಜಂಬುಕೇಶ್ವರನು ಈಶ್ವರನನ್ನು ತಪಸ್ಸಿನಿಂದ ಒಲಿಸಿ, ನಂದಿಯನ್ನು ಕರೆಸಿಕೊಂಡು, ದುಷ್ಟಶಕ್ತಿಗಳನ್ನೆಲ್ಲ ನಾಶಮಾಡಿಸಿದನು.

ಇದರ ನೆನಪಿಗೆ ಜಂಬುಕೇಶ್ವರನು ಮಹಲಿಂಗೇಶ್ವರನನ್ನೂ, ನಂದಿಯನ್ನೂ ಈ ಊರಿನಲ್ಲಿ ಸ್ಥಾಪಿಸಿದನು. ಆತ ಸ್ಥಾಪಿಸಿದ ನಂದಿ, ಮಹಲಿಂಗೇಶ್ವರರನ್ನು ಈಗಲೂ ಇಲ್ಲಿ ಕಾಣಬಹುದು.

**ಐತಿಹ್ಯ 4** ಒಮ್ಮೆ ಶಕ್ತಿಶಾಲಿಗಳಾದ ಕೆಳದಿಯ ನಾಯಕ ರಾಜರುಗಳು ಬಾರಕೂರಿನ ಮೇಲೆ ದಂಡೆತ್ತಿ ಬಂದರಂತೆ. ಆಗ ಬಾರಕೂರನ್ನು ತುಳುನಾಡಿನ ಅರಸರೇ ಆಳುತ್ತಿದ್ದರು. ಈ ತುಳುನಾಡಿನ ಅರಸನು 'ಬಂದ ಸೈನ್ಯ ಹಿಂದೆ ಹೋದರೆ ಉರುಗಳಿಗೆ ಸೇವೆ ಮಾಡಿಸುತ್ತೇನೆ' ಎಂದು ಹರಕೆ ಹೊತ್ತನಂತೆ. ಹರಕೆ ಫಲಿಸಿತು. ನಾಯಕನ ಸೈನ್ಯ ಮೆಕ್ಕಿಕಟ್ಟೆಯಲ್ಲಿ ನಿಂತಿತು. ಎಷ್ಟು ಅಲ್ಲಾಡಿಸಿದರೂ ಸೈನ್ಯವು ಮುಂದೆ ಹೋಗಲಿಲ್ಲ. ಬಾಯಿಂದ ಮಾತೂ ಹೊರಡಲಿಲ್ಲ. ತಂತ್ರಿಗಳನ್ನು ಕರೆಸಿ ಪ್ರಶ್ನೆ ಕೇಳಿದರು. ಕಾರಣ ತಿಳಿಯಿತು. ನಂದಿಯ ಕೋಪಕ್ಕೆ ಶಮನ ಮಾಡಿಸಬೇಕೆಂದಾಯಿತು. ತಪ್ಪುಕಾಣಿಕೆ ಕೊಟ್ಟರು. ನಂದಿ ದಾರಿ ಬಿಟ್ಟಿತು, ನಾಯಕನ ಸೈನ್ಯ ಬಾರಕೂರಿನ ಆಸೆ ಬಿಟ್ಟು ಹಿಂದೆ ತೆರಳಿತು. ಕೃತಜ್ಞತೆಯ ದ್ಯೋತಕವಾಗಿ ತುಳುವರಸ ಮೆಕ್ಕಿಕಟ್ಟೆಗೆ ಸೈನಿಕರ, ಸವಾರರ, ಮಾವುತರ 'ಉರು'ಗಳನ್ನು ಮಾಡಿ ಹಾಕಿಸಿದ, ಅವುಗಳು ಈಗಲೂ ಇವೆ.

**ಐತಿಹ್ಯ 5** "ನಗರ ಸಂಸ್ಥಾನದಿಂದ ಬಾರಕೂರನ್ನು ಕೊಳ್ಳೆ ಹೊಡೆಯಲು ಅರಸನೊಬ್ಬ ಬಂದಿದ್ದನಂತೆ. ಅದನ್ನು ತಿಳಿದ ಮೆಕ್ಕಿಕಟ್ಟೆಯ ಗಣಗಳು ಬಾರಕೂರಿನ ರಾಜನ ಪರ ಹೋರಾಡಲು ನಿರ್ಧರಿಸಿದವು. ಅವು ನಗರ ಸಂಸ್ಥಾನದ ಕಡೆಯಿಂದ ಬರುವ ಜನರನ್ನೆಲ್ಲ ಖಾಯಿಲೆ ಬೀಳಿಸಿದುವು. ಪರಿಸ್ಥಿತಿ ಚಿಂತಾಜನಕವಾದಾಗ ಅವರೆಲ್ಲರೂ ಮೆಕ್ಕಿಕಟ್ಟೆಗೆ ಬಂದು ತಪ್ಪು ಒಪ್ಪಿಕೊಂಡರು. ಕಾಣಿಕೆ ಸಲ್ಲಿಸಿದರು. ಅವರು ಸಲ್ಲಿಸಿದ ಕಾಣಿಕೆ ಈಗಲೂ ಇವೆ.

ಇಂಥ ಹಲವಾರು ಐತಿಹ್ಯಗಳು ಸ್ಥಳೀಯರಲ್ಲಿ ಪ್ರಚಲಿತದಲ್ಲಿವೆ. ಮೊದಲ ಮೂರು ಐತಿಹ್ಯಗಳು ಕೂಡಾ ಉರುಗಳನ್ನು ಶಿವಗಣಗಳೆಂದು ಮಾನ್ಯ ಮಾಡುವ ಉತ್ಸಾಹದಲ್ಲಿದ್ದರೆ ಕೊನೆಯ ಎರಡು ಐತಿಹ್ಯಗಳು ಬಹುಮಟ್ಟಿಗೆ ಒಂದೇ ಆಶಯವನ್ನು ಹೊಂದಿದ್ದು, ಉರುಗಳ ಮಹಿಮೆಯನ್ನು ಪ್ರಕಟಿಸುತ್ತವೆ. ಉರುಗಳು ಸ್ಥೂಲವಾಗಿ ಶೈವ ಸಂಪ್ರದಾಯಕ್ಕೆ ಸೇರಿದ್ದಂತೂ ನಿಜವೇ. ಆದರೆ ಶೈವ ಸಂಪ್ರದಾಯದ ಒಳಪ್ರಭೇದಗಳಲ್ಲಿ ಇದು ಯಾವ ಬಗೆಯದಕ್ಕೆ ಸೇರುತ್ತದೆ ಎಂದು ಹೇಳುವುದು ಕಷ್ಟ. ಬಹುಶ ಕರ್ನಾಟಕದ ರಹಸ್ಯ ತಾಂತ್ರಿಕ ಪಂಥಗಳಿಗೇ ಸೇರಿರಬೇಕು. ಅದು ಹೌದಾಗಿದ್ದರೆ ಮೊದಲಿನ ಮೂರು ಐತಿಹ್ಯಗಳು ಸ್ಥೂಲ ಸತ್ಯವೊಂದನ್ನು ವಿಶದೀಕರಿಸುತ್ತವೆ. 'ನಂಬಿದವರನ್ನು ದುಷ್ಟ ಶಕ್ತಿಗಳಿಂದ ದೈವ ರಕ್ಷಿಸುತ್ತದೆ' ಎಂಬ ಭಾವವೇ ನಾಲ್ಕನೇ ಮತ್ತು ಐದನೇ ಐತಿಹ್ಯದಲ್ಲಿ ಪ್ರಕಟವಾಗಿದೆ. ಉರುಗಳ ಉಗಮದ ಬಗೆಗೆ ಅವು ಏನನ್ನೂ ಹೇಳುವುದಿಲ್ಲ.

ಮೆಕ್ಕಿಕಟ್ಟೆ ಪರಿಸರದಲ್ಲಿ ಕೆಲವೆಡೆ ಇದೇ ವಿಧದ ಉರುಗಳನ್ನು ಕಾಣುತ್ತೇವೆ. ಅದರಲ್ಲಿ ಮುಖ್ಯವಾಗಿ ಬೆಣ್ಣೆಕುದುರು, ಮಾರ್ನಕಟ್ಟೆ, ನಂದಳಿಕೆ ಮತ್ತು ಬಸರೂರುಗಳನ್ನು ಹೆಸರಿಸಬಹುದು. ಬಣ್ಣ ಮತ್ತು ಸ್ವರೂಪದಲ್ಲಿ ಇಲ್ಲಿನ ಉರುಗಳಿಗೂ ಮೆಕ್ಕಿಕಟ್ಟೆಯ ಉರುಗಳಿಗೂ



C1. ಮೂಡದೇರ್ (ಕಾಲಭೈರವ)



C2. ಪಂಜುರ್ಲಿ

ಯಾವುದೇ ವ್ಯತ್ಯಾಸ ಇಲ್ಲ. ಇದನ್ನು ಗಮನಿಸಿದರೆ 'ಉರುಗಳು' ಒಂದೇ ಕಾಲದ ಪರಿಸ್ಥಿತಿಯ ಪರಿಣಾಮಗಳೆಂದು ಹೇಳಲು ಸಾಧ್ಯವಿದೆ. ಮೆಕ್ಕೆಕಟ್ಟೆಯ ಉರುಗಳು ರೂಪ ಮತ್ತು ಬಣ್ಣದಲ್ಲಿ ಉತ್ಕೃಷ್ಟವಾಗಿರುವುದು ಹೌದಾದರೂ, ಜನರು ಇವೆಲ್ಲವನ್ನೂ ಸಮಾನವೆಂದೇ ಭಾವಿಸುತ್ತಾರೆ.

ಚಾರಿತ್ರಿಕವಾಗಿ ಉರುಗಳು ಹುಟ್ಟಿಕೊಂಡ ಕಾಲವನ್ನು ನಿಗದಿಪಡಿಸಲು ಅನೇಕ ತೊಡಕುಗಳಿವೆ. ವಿಗ್ರಹಗಳ ರಚನೆ, ಬಣ್ಣ, ಉಡುಗೆ-ತೊಡುಗೆಗಳನ್ನು ಗಮನಿಸಿಕೊಂಡು, ಅವುಗಳ ತಾತ್ವಿಕ ಹಿನ್ನಲೆಯನ್ನು ಖಚಿತಪಡಿಸಿಕೊಂಡು ತಕ್ಕ ಮಟ್ಟಿನ ನಿರ್ಧಾರಕ್ಕೆ ಬರಲು ಸಾಧ್ಯ.

ಉರುಗಳಲ್ಲಿ ಕೆಲವಕ್ಕೆ ಪಾಶ್ಚಾತ್ಯ ಮಾದರಿಯ ಉಡುಪುಗಳನ್ನು ತೊಡಿಸಲಾಗಿದೆ. ಇದರಲ್ಲಿ ಕಾಣುವ ಟೊಪ್ಪಿ ಇದಕ್ಕೆ ಉದಾಹರಣೆ. ಅದೇ ಚಿತ್ರದಲ್ಲಿ ಕಾಣುವ ಭಟನೊಬ್ಬನ ಗಡ್ಡ ಮತ್ತು ಮೀಸೆಯ ವೈಖರಿಯನ್ನು ಗಮನಿಸಬೇಕು. ಇದು ಪೋರ್ಚುಗೀಸರ ಪ್ರಭಾವದಿಂದ ಬಂದದ್ದೆಂದು ವಿದ್ವಾಂಸರು ಸರಿಯಾಗಿಯೇ ಊಹಿಸಿದ್ದಾರೆ. (ಹೆಬ್ಬಾರ್ ಎ. ಎಸ್. ಎನ್. 1976-77, 58) ಅಂದರೆ ಉರುಗಳಲ್ಲಿ ಹಲವು ಭಾರತದ ವಸಾಹತೀಕರಣದ ಅನಂತರ (ಕಾಲಘಟ್ಟ) ದಲ್ಲಿಯೆ ಸೇರಿಕೊಂಡಿವೆ ಎಂದು ಹೇಳಬಹುದು. ಕೆಲವು ವಿಗ್ರಹಗಳು ಮುಸ್ಲಿಂ ಮಾದರಿಯಲ್ಲಿವೆ. ಇವು ವಿಜಯನಗರದ ಪತನದ ಅನಂತರದ ಕಾಲದಲ್ಲಿ ಸ್ಥಳೀಯರಿಂದ ಸೇರಿಕೊಂಡಿರಬೇಕು.

ಆದರೆ ಎಲ್ಲ 'ಉರು'ಗಳೂ ಇಷ್ಟು ಅರ್ವಾಚೀನವಾದುವಲ್ಲ. ಕೆಲವು ವಿಗ್ರಹಗಳ ಉಗ್ರ ಸ್ವರೂಪವನ್ನು ನೋಡಿದರೆ, ಅವು ಮಧ್ಯಕಾಲೀನ ಕರ್ನಾಟಕ ರಹಸ್ಯ ತಾಂತ್ರಿಕ ಪಂಥಗಳಿಗೆ ಸೇರಿದಂತೆ ತೋರುತ್ತವೆ. ಅಂದರೆ ಸುಮಾರು 14-15 ನೇ ಶತಮಾನಕ್ಕೆ ಅಸ್ತಿತ್ವಕ್ಕೆ ಬಂದ ಯಕ್ಷಗಾನಕ್ಕೂ ಪೂರ್ವದ್ದು ಇದು ಎಂದ ಹಾಗಾಯಿತು. ಇದಕ್ಕೆ ಇನ್ನೊಂದು ಆಧಾರವೆಂದರೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ತುಂಬ ಜನಪ್ರಿಯವಾಗಿರುವ ಯಕ್ಷಗಾನ ಬಯಲಾಟದ ಪ್ರಭಾವ ಉರುಗಳ ಮೇಲೆ ಆಗದೇ ಇರುವುದು. ಅಂದರೆ ಉರುಗಳು ಯಕ್ಷಗಾನದ ಈಗಣ ಸ್ವರೂಪ (ಅಂದರೆ ಭಕ್ತಿ ಮಾರ್ಗದ ಕತೆಗಳನ್ನು ಆಡುವ ಶೈಲಿಯ) ಸಿದ್ಧಿಗೂ ಮುನ್ನವೇ ಇದ್ದುವು ಎಂದಾಯಿತು. ಇದರ ಜೊತೆಗೆ ಭೂತಾರಾಧನೆಯನ್ನು ಗಮನಿಸಬೇಕು. ಭೂತಾರಾಧನೆಯು ಸುಮಾರು 14-15ನೇ ಶತಮಾನದಿಂದ ಕನಿಷ್ಠ ಈಗಿರುವ ರೂಪಲ್ಲಿಯಾದರೂ ಆಚರಣೆಯಲ್ಲಿದೆ ಎಂಬುದು ವಿದ್ವಾಂಸರಿಂದ ಒಪ್ಪಿತವಾಗಿದೆ (ವಿವರಗಳಿಗೆ ನೋಡಿರಿ : ವಿವೇಕ ರೈ 1985 : 234) ಈ ಭೂತಾರಾಧನೆಯ ಪ್ರಭಾವವೂ ಇಲ್ಲದ ಉರುಗಳು ಅನೇಕ ಇವೆ. ಮೇಲಿನ ಎರಡು ಸ್ಥೂಲ ವಿವರಗಳನ್ನು ಒಪ್ಪಿಕೊಂಡರೆ ಉರುಗಳ ಕಾಲ 14ನೇ ಶತಮಾನಕ್ಕೂ ಪೂರ್ವದ್ದು ಎನ್ನಬಹುದು.

ಉರುಗಳ ಭಯಾನಕ ಸ್ವರೂಪವು ಥಟ್ಟನೆ ರಹಸ್ಯ ತಾಂತ್ರಿಕ ಪಂಥಗಳನ್ನು ನೆನಪಿಸುತ್ತದೆ. ಸುಮಾರು 11 ಮತ್ತು 12ನೇ ಶತಮಾನದಲ್ಲಿ ಕರ್ನಾಟಕದ ಉದ್ದಗಲದಲ್ಲಿ ಜನಪ್ರಿಯರಾಗಿದ್ದ ಕಾಳಾಮುಖರು, ಕಾಪಾಲಿಕರು, ಲಕುಲೀಶರು ಮತ್ತು ಪಾಶುಪತರಲ್ಲಿ ಕೆಲವರಾದರೂ ಅತಿಮಾರ್ಗಿಗಳಾಗಿದ್ದು, ವಾಮಮಾರ್ಗೀಯರಾಗಿದ್ದವರು. ಭೈರವನ, ತ್ರಿಶಿರರ,

ಕಾಳಿಯು, ದುರ್ಗೆಯು ಆರಾಧಕರಾಗಿದ್ದ ಇವರ ಬಗೆಗೆ ಅನೇಕ ಶಾಸನಗಳೂ ವಿವರ ನೀಡು ತ್ತವೆ (ಉದಾಹರಣೆಗೆ South Indian Inscriptions vol ix : 1-204 ನೋಡಿ) ಡಾ. ಚಿದಾನಂದ ಮೂರ್ತಿಯವರೂ ಈ ಪಂಥಗಳ ಬಗೆಗೆ ಸ್ಥೂಲ ವಿವರಣೆ ನೀಡಿದ್ದಾರೆ. (ಚಿದಾನಂದಮೂರ್ತಿ ಎಂ 1979 : 140–160) ವೀರಶೈವ ಪ್ರವಾಹದಲ್ಲಿ ಒಂದಾಗಿ ಹೋದ ಈ ಪಂಥಗಳು ಕರಾವಳಿಯಲ್ಲಿಯೂ ಸಾಕಷ್ಟು ಪ್ರಭಾವ ಬೀರಿವೆ. ಮಂಗಳೂರಿನ ಕದ್ರಿ ಮತ್ತು ಕೊಕ್ಕರ್ಣೆಯ ಸಮೀಪದ ಹಳ್ಳಿಯೊಂದರಲ್ಲಿ ಲಕುಲೀಶರ ಮತ್ತು ಕಾಳಾ ಮುಖರ ಮಠಗಳಿವೆ. ಕರಾವಳಿಯ ಕಲೆ, ಸಾಹಿತ್ಯ, ಧಾರ್ಮಿಕತೆಯ ಮೇಲೆ ಇವು ಗಾಢ ಪ್ರಭಾವ ಬೀರಿವೆ (ಹೆಚ್ಚಿನ ವಿವರಗಳಿಗೆ ನೋಡಿರಿ. ಪುರುಷೋತ್ತಮ ಬಿ. 1985). ಈ ಪಂಥ ಗಳ ಮುಖ್ಯ ತಾತ್ವಿಕ ನೆಲೆಯಿರುವುದೇ ಭಯಾನಕ ಆಕೃತಿಗಳನ್ನು ಸೃಷ್ಟಿ ಮಾಡುವುದರಲ್ಲಿ. ಇದು ಒಂದು ಬಗೆಯ ಪರ್ಯಾಯ ವ್ಯವಸ್ಥೆ ಕೂಡಾ ಹೌದು. ಅತ್ಯಂತ ತೀವ್ರಮಟ್ಟದ ವಿಕೃತಿ ಯನ್ನು ನಿರ್ಮಿಸಿಕೊಂಡು, ಒಟ್ಟು ಸಮಾಜದ ಸ್ವಾಸ್ಥ್ಯವನ್ನು ಅಲ್ಲಿ ಕಾಪಾಡಿಕೊಳ್ಳಲಾಗು ವುದು. ಅಂದರೆ ಸಮಾಜಕ್ಕೆ ಇಷ್ಟವಾಗುವ ಅಥವಾ ಸಮಾಜದ ಶಿಷ್ಟಕ್ಕೆ ಅನುಗುಣವಾದ ವ್ಯವಸ್ಥೆಯನ್ನು ಸಂರಕ್ಷಿಸಿಕೊಂಡು ಬರಲು ಮತ್ತು ಅದನ್ನು ಮುಂದುವರಿಸಿಕೊಂಡು ಬರಲು ಅದಕ್ಕೆ ಅತ್ಯಂತ ವಿರುದ್ಧವಾದ, ಪರಿಶಿಷ್ಟವಾದ ವ್ಯವಸ್ಥೆ ಕೂಡಾ ಬೇಕಾಗುತ್ತದೆ. ಶಿಷ್ಟ-ಪರಿ ಶಿಷ್ಟಗಳು ಪರಸ್ಪರ ಎದುರುಬದುರಾಗಿ ನಿಂತುಕೊಂಡೇ ಸಮಾಜದ ಸ್ವಾಸ್ಥ್ಯವನ್ನು ಕಾಪಾ ಡುತ್ತವೆ. 'ಉರು'ಗಳಲ್ಲಿ ಒಂದೇ ಒಂದು ವಿಗ್ರಹವಾದರೂ ಸಾಮಾನ್ಯ ಮನುಷ್ಯರಂತೆ ಇಲ್ಲ. ಎಲ್ಲವೂ ಅ-ಸಾಮಾನ್ಯವಾದುವು. ವಿ-ಶಿಷ್ಟವಾದುವು, ಭಯಾನಕವಾದುವು. ಅಲ್ಲಿ ಎಲ್ಲವನ್ನೂ ಇರುವುದಕ್ಕಿಂತ ಹೆಚ್ಚು ಮಾಡಿ ತೋರಿಸಲಾಗುವುದು. ಸ್ತ್ರೀಯರ ಮೊಲೆಗಳ ಗಾತ್ರವನ್ನು ಇನ್ನಿ ಲ್ಲದಷ್ಟು ಹಿರಿದುಗೊಳಿಸಲಾಗಿದೆ. ಈ ಭಯಾನಕ-ವಿಕೃತ ಪರ್ಯಾಯಗಳನ್ನು ಸೃಷ್ಟಿಸುವುದರ ಮೂಲಕ ಸಮಾಜ ತನ್ನ ನಿಜದ ಮಾರ್ದವತೆ ಮತ್ತು ಸುಕೃತಗಳನ್ನು ಕಾಪಾಡಿಕೊಳ್ಳುತ್ತದೆ.

ರಹಸ್ಯತಾಂತ್ರಿಕ ಪಂಥಗಳಲ್ಲಿ ಇದು ತುಂಬಾ ಸ್ಪಷ್ಟ. ಈ ಕಾರಣಕ್ಕೆ ಮೆಕ್ಕಿಕಟ್ಟೆಯ ಉರು ಗಳು ರಹಸ್ಯತಾಂತ್ರಿಕ ಪಂಥಗಳು ಕರ್ನಾಟಕದಲ್ಲಿ ತುಂಬ ಜನಪ್ರಿಯವೂ ವ್ಯಾಪಕವೂ ಆದ ಕಾಲಘಟ್ಟದಲ್ಲಿ ಸೃಷ್ಟಿಯಾಗಿರಬೇಕು. ಅಂದರೆ ಇವುಗಳ ಕಾಲವನ್ನು 11 ಮತ್ತು 12ನೇ ಶತಮಾನದಷ್ಟು ಹಿಂದೆ ಕೊಂಡೊಯ್ಯಲು ಸಾಧ್ಯವಾಗುತ್ತದೆ. ಹೊಟ್ಟೆ ಹಸಿವನ್ನು ತೀರಿಸುವ ಅಕ್ಕಿ ಮತ್ತು ದೈಹಿಕ ಹಸಿವನ್ನು ತೀರಿಸುವ ಕಾಮ-ಇವೆರಡನ್ನೂ ತಾಂತ್ರಿಕರು ಒಂದೇ ಎಂದು ಭಾವಿಸಿದ್ದಾರೆ (ಪುರುಷೋತ್ತಮ ಬಿ : 1986) ಮೆಕ್ಕಿಕಟ್ಟೆ ಪರಿಸರದಲ್ಲಿ ಬೆಳೆಯುವ ಸಮೃದ್ಧವಾದ ಭತ್ತದ ಹಿನ್ನೆಲೆಯಲ್ಲಿಯೂ ತಾಂತ್ರಿಕರು ಅಲ್ಲಿ ಜಯಪ್ರಿಯವಾಗಿರುವ ಸಾಧ್ಯತೆ ಇದೆ. ಉಡುಪಿ ತಾಲೂಕಿನ ಕೊಕ್ಕರ್ಣೆಯಲ್ಲಿ 'ಜೋಗಿಮಠ' ಒಂದು ಇಂದಿಗೂ ಇರುವುದು ಇದಕ್ಕೆ ಪೂರಕವಾದ ಅಂಶ.

ಒಟ್ಟಿನಿಂದ ಮಧ್ಯಕಾಲೀನ ಕರ್ನಾಟಕ ರಹಸ್ಯತಾಂತ್ರಿಕ ಪಂಥಗಳ ಪ್ರೇರಣೆಯಿಂದ ಮೆಕ್ಕಿ ಕಟ್ಟೆ ಮತ್ತಿತರ ಕಡೆಗಳಲ್ಲಿರುವ 'ಉರು'ಗಳು ಸ್ಥಾಪನೆಯಾಗಿರಬೇಕು. ಇದರ ಕಾಲ 11-12ನೇ ಶತಮಾನವೆಂದು ನಿಗದಿಮಾಡಬಹುದು. ಅನಂತರ ಪ್ರತಿವರ್ಷವೂ ಅದಕ್ಕೆ ನವೀನ ಬಗೆಯ

ಉರುಗಳು ಸೇರುತ್ತಾ ಬಂದಿರಬಹುದು.

**ಉರುಗಳು :** ಮೆಕ್ಕಿಕಟ್ಟೆಯಲ್ಲಿ 2 ಅಡಿಯಿಂದ ಆರಂಭಿಸಿ 20 ಅಡಿಯವರೆಗೆ ಎತ್ತರವಿರುವ ನೂರಾರು ಮರದ ರೂಪುಗಳಿವೆ. ಇದರಲ್ಲಿ ಇಂದು ಊರವರ ಗೌರವಕ್ಕೆ ಪಾತ್ರವಾದ ವಿಗ್ರಹ ವೆಂದರೆ 'ನಂದಿಕೇಶ್ವರ'. ಇದರ ಆವಾಸ ಸ್ಥಾನವನ್ನು 'ಬ್ರಹ್ಮಸ್ಥಾನ' ಎಂದೂ ಕರೆಯುತ್ತಾರೆ. ಶಿವಳ್ಳಿ ಬ್ರಾಹ್ಮಣರಿಂದ ನಂದಿಕೇಶ್ವರ ನಿತ್ಯಪೂಜೆಗೆ ಒಳಗಾಗುತ್ತದೆ. ಇದು ತುಂಬ ಪ್ರಾಚೀನ ವಿಗ್ರಹದಂತೆ ತೋರುತ್ತದೆ. ಗರ್ಭಗುಡಿಯ ಒಳಗಿರುವ ಈ ವಿಗ್ರಹವು ವಾಸ್ತವವಾಗಿ ಎರಡು ಕೊಂಬುಗಳಿರುವ ಕಿವಿಗಳನ್ನು ಹಿಂದಕ್ಕೆ ಚಾಚಿರುವ ಮೇಲುಮುಖ ಮಾಡಿರುವ, ನಾಲಿಗೆ ಹೊರಚಾಚಿರುವ ಸುಮಾರು ಮೂರುವರೆ ಅಡಿ ಎತ್ತರವಿರುವ ಒಂದು ಗೂಳಿ. ಇದಕ್ಕೆ 'ಬ್ರಹ್ಮಸ್ಥಾನ' ಎಂದು ಹೆಸರಿರುವುದನ್ನು ನೋಡಿದರೆ ಮೂಲದಲ್ಲಿ ಇದು ನಾಗನ ಸ್ಥಾನ ಆಗಿತ್ತೋ ಎಂಬ ಸಂಶಯ ಬರುತ್ತದೆ. ತುಳುವರ 'ಬೆರ್ಮೆರ್' ಸಂತಾನವನ್ನು ಕೊಡುವ ದೇವರು. ಇದು ತಾಂತ್ರಿಕ ಪಂಥಗಳ ಪ್ರಭಾವದಿಂದ ಬಂದದ್ದು ಹೌದಾದರೂ, ಇಂದಿಗೆ ಕೃಷಿ ದೇವತೆಯಾಗಿಯೇ ಕಂಡು ಬರುತ್ತದೆ. ಅಕ್ಕಿ ಮತ್ತು ಸಂತಾನವನ್ನು ಒಂದುಗೂಡಿಸುವ ಪ್ರಕ್ರಿಯೆಯ ಮಾದರಿಯಾಗಿ ಗೂಳಿ ಮತ್ತು ಬ್ರಹ್ಮಸ್ಥಾನ ಒಂದೇ ಆಗಿ ಕಂಡು ಬರುತ್ತದೆ. ಗೂಳಿ ಕೃಷಿಯನ್ನು (ಅಂದರೆ ಭತ್ತ-ಅಕ್ಕಿ) ಮತ್ತು 'ಬ್ರಹ್ಮಸ್ಥಾನ' ಸಂತಾನವನ್ನು ಸಂಕೇತಿ ಸುತ್ತವೆ ಎನ್ನಬಹುದು. ಗೂಳಿಯು ಸಂತಾನ ಸಂಬಂಧವನ್ನೂ ತೋರಿಸುತ್ತದೆ.

ಈ ನಂದಿಕೇಶ್ವರನಿರುವ ಗರ್ಭಗುಡಿಯಲ್ಲಿ ಇತರ ದೇವತೆಗಳೂ ವಾಸವಾಗಿವೆ. ಏಕಶೃಂಗಿ ನಂದಿ, ಪಾರ್ಶ್ವ ಮುಖನಂದಿ, ಪಂಚಮುಖನಂದಿ, ಆಕಾಶನಂದಿ, ತ್ರಿಮುಖನಂದಿ-ಇವೆಲ್ಲವೂ ಗೂಳಿಯ ಬಗೆ ಬಗೆಯ ರೂಪುಗಳೇ ಆಗಿವೆ. ನಂದಿಯನ್ನು ಏರಿದ ದುರ್ಗಾ ಪರಮೇಶ್ವರಿ ಮೂರ್ತಿಯು ನಯನ ಮನೋಹರವಾಗಿದೆ. ಈ ಗುಡಿಯಲ್ಲಿ ಒಟ್ಟಿಗೆ 159 ವಿಗ್ರಹಗಳಿವೆ. ಅದರಲ್ಲಿ ಸಿಂಹ ಪಾಲು ನಂದಿಯ ರೂಪುಗಳಿಗೆ. ಕುತ್ತಿಗೆಯನ್ನು ಒಂದು ಪಕ್ಕಕ್ಕೆ ತಿರುಗಿಸಿದ ಒಕ್ಕೋಡಿನ ನಂದಿ, ಹೈಗೂಳಿ, ವ್ಯಕ್ತಿಯೋರ್ವನ ಮೈಮೇಲೆ ಮೂರು ನಂದಿಮುಖಗಳಿದ್ದು ನಂದಿಯ ಮೇಲೆ ನಿಂತಿರುವ ಮೂರ್ತಿ, ಗೂಳಿಯ ಒಡೆಯ, ಒಂದೇ ಕೋಡಿನ ನಂದಿ, ಬೋಳು ನಂದಿ, ಮಾನವನ ಮೈಯಿದ್ದು ಮುಖಮಾತ್ರ ನಂದಿಯದ್ದಾಗಿರುವ ಭೃಂಗಿ ನಂದಿ, ಗೂಳಿಯ ಮಾವುತ; ತುಡುವಿನ ಗೂಳಿ ಸವಾರ-ಇವೇ ಅಲ್ಲಿನ ಇತರ ಮುಖ್ಯ ವಿಗ್ರಹಗಳು.

'ಭೂತದ ಕೊಟ್ಟಿಗೆ' ಎಂದು ಕರೆಯಲಾಗುವ ನಂದಿಕೇಶ್ವರನ ದೇವಳದ ಗರ್ಭಗುಡಿಯ ಹೊರಭಾಗದಲ್ಲಿರುವ ವಿಗ್ರಹಗಳು ಅನೇಕ. ಅದರ ವೈವಿಧ್ಯತೆಯೂ ಅಪಾರ. ಇವರಲ್ಲಿ ಅತ್ಯಂತ ಆಕರ್ಷಕವೂ, ವಿಚಿತ್ರವೂ, ಆಗಿರುವಂಥ ಉರುವೆಂದರೆ 'ಖೇಚರಾವುತ'ನ ಪ್ರತಿಮೆ. 20 ಅಡಿಗಳಷ್ಟೆತ್ತರದ ಈ ವರ್ಣಮಯ ಪ್ರತಿಮೆಯ ಒಂದು ಕೈಯಲ್ಲಿ (ಮರದ) ಕತ್ತಿ ಯಿದೆ. ಇನ್ನೊಂದು ಕೈಯಲ್ಲಿ ಮನುಷ್ಯನ ರುಂಡವೊಂದು ನೇತಾಡುತ್ತಿದೆ. ತೆರೆದ ಅಗಲ ವಾದ ಕಣ್ಣುಗಳು, ಕ್ರೂರವಾದ ಕೋರೆ ಹಲ್ಲುಗಳು, ಎತ್ತರದ ಕಿರೀಟ, ನಾಲ್ಕು ಕೈಗಳು ಉದ್ದನೆಯ ಕಾಲುಗಳು, ಇಳಿಬಿಟ್ಟ ಕಚ್ಚೆ, ಮೈಯಿಡೀ ಗಾಢಕೆಂಪು-ಇದರ ವೈಶಿಷ್ಟ್ಯ. 'ಇದು ವೀರಭದ್ರನ ನೆನಪು ತರುತ್ತದೆ' ಎಂದು ಒಬ್ಬರು ಹೇಳಿದರೆ (ರಮಜಾನ ದರ್ಗಾ 1983 : 97)

ಡಾ ಕೆ. ಶಿವರಾಮ ಕಾರಂತರು. ಪ್ರಾಯಶ ಇದು ಖೇಚರನ '(ಎಂದರೆ ಗಂದರ್ಭ) ರೂಪು ಇರಬಹುದು" ಎಂದು ಶಂಕಿಸಿದ್ದಾರೆ (ಶಿವರಾಮ ಕಾರಂತ 1976 : 34). ಕೋಟ ಪ್ರದೇಶದ ಬಗ್ಗೆ ವಿಶೇಷ ಅಧ್ಯಯನ ನಡೆಸಿದ ಪಿ.ಎನ್. ಮಯ್ಯ ಅವರ ಪ್ರಕಾರ ಕೇತು ಮತ್ತು ರಾಹು(ವಿನ) ಪದಗಳೇ 'ಖೇಚರಾವುತ' ಆಗಿ ಪರಿಣಮಿಸಿರಬಹುದು" (ಮಯ್ಯ ಪಿ.ಎನ್. 1984 : 87) ಭೀಭತ್ಸಿತವಾದ ಆಕೃತಿಯನ್ನು ನಿರ್ಮಿಸುವುದರ ಮೂಲಕ, ವಿಕೃತಿಯನ್ನು ಹೊರಚೆಲ್ಲುವ ಮಾನವನ ಚಿಂತನ ಕ್ರಮದ ಮಾದರಿ ಇದು, ಎಂದಷ್ಟೇ ಸಧ್ಯಕ್ಕೆ ಹೇಳಲು ಸಾಧ್ಯವಾದೀತು.

ಖೇಚರಾವುತನೊಂದಿಗೇ ಇರುವ ದೊಡ್ಡದಾದ ಆನೆಯ ಉರು ಆಕೃತಿಯ ದೃಷ್ಟಿಯಿಂದ ಬಹಳ ಪ್ರಮುಖವಾದುದು. ಆನೆಯ ಅಗಲವಾದ ಕಿವಿಗಳು, ಎರಡೂ ಬದಿಗೆ ನೇತಾಡುವ ಅದರ ಗಂಟೆಗಳು, ಇತರ ಅಲಂಕಾರಗಳು, ಮಾವುತ, ಎಲ್ಲವೂ ಕಲಾತ್ಮಕವಾಗಿ ಕೆತ್ತಲ್ಪಟ್ಟಿವೆ. (ಅಗಲವಾದ ಕಿವಿಗಳಿಂದ ಇದು ಆಫ್ರಿಕಾದ ನೆನಪು ತರುತ್ತದೆ)

ಸಪ್ತಮಾತೃಕೆಯರೆಂದು ಹೇಳಲಾಗುವ ಏಳು ಸ್ತ್ರೀ ಪ್ರತಿಮೆಗಳು ದೇಗುಲದ ಅಟ್ಟದಲ್ಲಿವೆ. ಇವುಗಳ ಕೇಶಾಲಂಕಾರ ಅತ್ಯಂತ ಸೂಕ್ಷ್ಮವಾಗಿದೆ. ಸ್ತನಗಳ ಆಕಾರವನ್ನು ಉದ್ದೇಶಪೂರ್ವಕವಾಗಿ ಹಿರಿದುಗೊಳಿಸಲಾಗಿದೆ. ಈ ಪ್ರತಿಮೆಗಳ ಎದುರಿಗೆ ಕೋಳಿ ಮತ್ತು ಬೆಕ್ಕಿನ ಪ್ರತಿಮೆಗಳನ್ನು ಇರಿಸಲಾಗಿದೆ.

ಖೇಚರಾವುತನ ಪ್ರತಿಮೆಗೆ ಸರಿಮಿಗಿಲು ಎನಿಸುವ ಇನ್ನೊಂದು ಉರು ಎಂದರೆ **ತ್ರಿಶಿರ.** ಇದಕ್ಕೆ ಮೂರು ತಲೆಯಿದೆ, ನಾಲ್ಕು ಕೈ ಇವೆ. ಗಾತ್ರದಲ್ಲಿ ದೊಡ್ಡದಾಗಿರುವ ಇದು ಅಲ್ಲಲ್ಲಿ ಭಗ್ನವಾಗಿದೆ. ದೊಡ್ಡದೊಂದು ಕುದುರೆಯ ಮೇಲೆ ಕುಳಿತ ಸವಾರರ ಪ್ರತಿಮೆಯೂ ಆಕರ್ಷಕವಾಗಿದೆ. ಕೈಯಲ್ಲಿ ಬೀಸಣಿಗೆ ಹಿಡಿದ ಪರಿಚಾರಿಕೆಯ ಪ್ರತಿಮೆಯೊಂದು, ಆಧುನಿಕ ರೀತಿಯ ಕೇಶಾಲಂಕಾರದಿಂದ ಶೋಭಿಸುತ್ತದೆ. ಇದಕ್ಕೆ ತೀರ ವಿರುದ್ಧವಾದ 'ಉಮ್ಮಳ್ತಿ'ಯ ವಿಗ್ರಹವೂ ಅಲ್ಲಿದೆ. ಕೋರೆಹಲ್ಲುಗಳ, ತೆರೆದ ಬಾಯಿಯ ಈ ಹೆಣ್ಣಿನ ಪ್ರತಿಮೆಯು ಭಯ ಹುಟ್ಟಿಸುವ ಕಾರ್ಯವನ್ನು ಮಾಡುತ್ತದೆ. (ಉಮ್ಮಳಿಕೆ ಎಂದರೆ ಆವೇಶ ಎಂಬ ಅರ್ಥವೂ ಇದೆ ಎಂಬುದನ್ನೂ ಗಮನಿಸಬಹುದು.)

ದೈವದ ಗುಡಿಯ ಮುಂಭಾಗದಲ್ಲಿ ಸ್ಥಾಪಿತವಾಗಿರುವ ತುಂಟ ಕಪಿಯ ವಿಗ್ರಹವು ಕುತೂಹಲಕಾರಿಯಾಗಿದೆ. ಆ ಕಪಿಯು ಒಂದು ಕೈಯಿಂದ ತಲೆ ತುರಿಸಿಕೊಳ್ಳುತ್ತಿದೆ. ಇನ್ನೊಂದು ಕೈಯಿಂದ ತನ್ನ ಜನನಾಂಗವನ್ನು ಹಿಡಿದುಕೊಂಡಿದೆ. ಸಾಮಾನ್ಯರ್ಥದಲ್ಲಿ ಅಶ್ಲೀಲವಾಗುವ ಈ ಕ್ರಿಯೆಯು ತಾಂತ್ರಿಕರಲ್ಲಿ ವಿಶೇಷಾರ್ಥವನ್ನು ಪಡೆದು ಧಾರ್ಮಿಕ ಉನ್ನತಿಗೆ ಏರುತ್ತದೆ.

'ಜಟ್ಟಿಗರಾಯ ದ್ವಿಮುಖೇಶ' ವಿಗ್ರಹವು ಎರಡು ಮುಖಗಳ ಮನುಷ್ಯನದಾಗಿದೆ. ಆರಡಿ ಎತ್ತರದ, ಒಂದು ಕೈಯಲ್ಲಿ ಕತ್ತಿ, ಇನ್ನೊಂದರಲ್ಲಿ ಧೂಪ ಹಿಡಿದ ಧೂಮ್ರಾಕ್ಷ, ಡಮರುವನ್ನು ಹಿಡಿದು, ನಾಗಜಟೆಯನ್ನು ಧರಿಸಿ ಹಲ್ಲು ಕಡಿಯುವ ಭಯಾನಕ ಮೂರ್ತಿ. ದಂಷ್ಟ್ರಾಮುಖ, ನಾಗೇಶ್ವರ, ವೀರಭದ್ರ, ಭೇತಾಳ-ಈ ವಿಗ್ರಹಗಳು ತಮ್ಮ ಆಕಾರ ಮತ್ತು ಬಣ್ಣ

ಗಳಿಂದ ವೈಶಿಷ್ಟ್ಯಪೂರ್ಣವಾಗಿವೆ. ಕೆಲವು ಬಗೆಯ ರಾಹುತರು, ಕುದುರೆ ಸವಾರರು-ದೂತರು, ಆನೆ ಮಾವುತರು, ಆನೆ ರಕ್ಷಕರು, ಜವನ-ಸೈನಿಕರು ಇವರ ರೂಪುಗಳೂ ಇವೆ. ಪ್ರತಿಯೊಂದು ಕೂಡಾ ಇನ್ನೊಂದಕ್ಕಿಂತ ಬೇರೆಯಾಗಿರುವುದೇ ಇದರ ವಿಶೇಷತೆ. ರಕ್ತ ಪಂಜುರ್ಲಿಯು ಹುಲಿಯ ಭಯಾನಕ ಅಭಿವ್ಯಕ್ತಿಯಾಗಿದೆ.

ಜೋಗಿಪುರುಷನ ವಿಗ್ರಹವು **ನಾಥ** ಸಂಪ್ರದಾಯದ ಪಳೆಯುಳಿಕೆಯಂತೆ ತೋರುತ್ತದೆ. ಬ್ರಹ್ಮಸ್ಥಾನದ ಮುಂದಿನ ಮೈದಾನದಲ್ಲಿ ಮೂರು ಸಿಡಿಯ ಕಂಬಗಳಿವೆ. ಅವುಗಳಲ್ಲಿ ಒಂದು ಬಂಟರದೆಂದೂ, ಎರಡನೆಯದು ಮೊಗವೀರರದೆಂದೂ, ಮೂರನೆಯದು ಬಿಲ್ಲವರದೆಂದೂ ಹೇಳಲಾಗಿದೆ. ರೆಕ್ಕೆಯುಳ್ಳ ಕೋಣನ ಮೂರ್ತಿಯೂ ಇದ್ದು ಕೃಷಿ ಕೆಲಸವನ್ನು ಸಂಕೇತಿಸುತ್ತದೆ. ಬಹುಶ ಇದೇ ನಂದಿಗೋಣವಾಗಿ ಪರಿವರ್ತನೆ ಹೊಂದಿರಬೇಕು (ಮಯ್ಯ ಪಿ.ಎನ್. 1984:88)

ಇಡೀ ಆವರಣದಲ್ಲಿ ರಕ್ತಾಹಾರವನ್ನು ಬಲಿಯಾಗಿ ಪಡೆವ ಒಂದು ವಿಗ್ರಹವು ನಂದಿಕೇಶ್ವರನ ಗರ್ಭಗುಡಿಯಿಂದ ಸ್ವಲ್ಪ ದೂರದಲ್ಲಿದೆ. ಅದನ್ನು **ಹಸ್ರತಿಮ್ಮ** ಎಂದೂ ಕರೆಯುತ್ತಾರೆ. ಕೆಲವರು ಅದನ್ನು 'ಹಸಲತಿಮ್ಮ' ಎಂದೂ ಹೇಳುತ್ತಾರೆ. ಮಾರಿ ಪೂಜೆಯ ಸಮಯದಲ್ಲಿ ತಿಮ್ಮನಿಗೆ ಕೋಳಿಯನ್ನು ಹರಿಕೆ ರೂಪದಲ್ಲಿ ಕೊಯ್ಯುತ್ತಾರೆ. ತಿಮ್ಮನ ಅಕ್ಕಪಕ್ಕದಲ್ಲಿ ಎರಡು ನಾಯಿಗಳ ವಿಗ್ರಹವಿದ್ದು, ಅದನ್ನು ಬೇಟೆ ನಾಯಿಗಳೆಂದು ಹೇಳಲಾಗಿದೆ. ತಿಮ್ಮನ ಕೈಯಲ್ಲಿ ಖಡ್ಗವೂ ಇದೆ. ಇವೆಲ್ಲವನ್ನೂ ಗಮನಿಸಿ ತಿಮ್ಮನನ್ನು ಬೇಟೆಗಾರ ಎಂದು ತರ್ಕಿಸಲಾಗಿದೆ. ಕರಾವಳಿಯ ದಕ್ಷಿಣ ಭಾಗದಲ್ಲಿರುವ ಕಾರಿ ಮತ್ತು ಕಬಿಲ ಎಂಬೆರಡು ಭೂತಗಳು ಮೂಲತಹ ಬೇಟೆ ನಾಯಿಗಳಿರಬೇಕೆಂಬ ವಾದವಿದೆ. (ಕೆ. ಚಿನ್ನಪ್ಪಗೌಡ : 1985-6) ಬಹುಶ ಹಸಲ ತಿಮ್ಮ ಇಂಥದ್ದೇ ಒಂದು ಬೇಟೆಗಾರ ದೈವವಾಗಿರಬೇಕು. ವ್ಯಾಘ್ರಿಣಿ ಮತ್ತು ವ್ಯಾಘ್ರ ಅಥವಾ ಹುಲಿಯ ವಿಗ್ರಹವು ತುಳುನಾಡಿನ 'ಪಿಲಿಚಾಮುಂಡಿ'ಯ ಆರಾಧನೆಯನ್ನು ನೆನಪಿಗೆ ತರುತ್ತದೆ. ಕಲ್ಲಿನ ಬಂಡೆಯೊಂದರಲ್ಲಿ ಕೊರೆದಂತಿರುವ ಟೊಳ್ಳಿನಲ್ಲಿ ಇರುವ ಕರಿಶಿಲೆಯ ಗಣಪತಿಯನ್ನು 'ಗುಡ್ಡೆಟ್ಟಿನ ಗಣಪತಿ' ಎಂದು ಕರೆಯಲಾಗಿದೆ. ಈತನನ್ನು ಉರುಗಳ ನಾಯಕ ಎಂದೂ ಹೇಳಲಾಗಿದೆ. 'ಆಯುಕೋಡಹರಕೆ'ಯ ಪ್ರಕಾರ ಈ ಗಣಪತಿಯ ತಲೆಗೆ ಒಂದು ಸಾವಿರ ಕೊಡ ನೀರನ್ನು ಹೊಯ್ಯಲಾಗುವುದು. ಮುಸ್ಲಿಂ ಸಂಸ್ಕೃತಿಯ ಪ್ರಭಾವವನ್ನು ತೋರಿಸುವ 'ಬೊಬ್ಬರ್ಯ'ನ ರೂಪು ಕೂಡಾ ಇಲ್ಲಿದೆ. ಸಮುದ್ರ ಕಾಳಗದಲ್ಲಿ ಮಡಿದ ಮುಸ್ಲಿಂ ವ್ಯಾಪಾರಿಯೆಂದು ಬೊಬ್ಬರ್ಯನನ್ನು ಗುರುತಿಸಲಾಗಿದೆ (ನೋಡಿ ವಿವೇಕ ರೈ 1985 :89) ಈ ಪ್ರತಿಮೆಯು ಈ ಪರಿಸರದ ಹಿಂದಿನ ಬಾಗಿಲ ಪಕ್ಕದಲ್ಲಿ ಕಾವಲಿನ ದೈವವೆನ್ನುವಂತೆ, ಅಲ್ಲದೆ ಸರ್ಪದ ಹೆಡೆಯಲ್ಲಿ ಮನುಷ್ಯ ರೂಪಿದೆ. ಆದುದರಿಂದ ಇದಕ್ಕೆ 'ಬಾಗಿಲ ಬೊಬ್ಬರ್ಯ' ಎನ್ನುವುದೂ ರೂಢಿಯಲ್ಲಿದೆ.

ಇವಿಷ್ಟು ಮುಖ್ಯ ವಿಗ್ರಹಗಳಲ್ಲದೆ ಇನ್ನೂ ಅನೇಕ ವಿಗ್ರಹಗಳ ಹೆಸರನ್ನು ಸ್ಥಳೀಯರು ಸೂಚಿಸುತ್ತಾರೆ. ಗರುಡ, ಕೆಂಡದ್ವಾಯ್ಗುಳಿ, ಮಾವುತ, ಬ್ರಹ್ಮರಾಯ, ಆರಮರಾಯ,

ದ್ವಾರಪಾಲಕ, ಬ್ರಹ್ಮ ರಾಕ್ಷಸ, ಸಣ್ಣಮ್ಮ, ಸಣ್ಣಯ್ಯ, ಜಟ್ಟಿಗ, ಜಟ್ಟಿ, ಶಿವಗಣಗಳು ಅಷ್ಟ ಭೈರವ, ಯೋಗಿಣಿ, ಹಸಂತಿ, ಇವೇ ಮೊದಲಾದ ಅವುಗಳ ಹಿಂದೆ ಒಂದೊಂದು ಐತಿಹ್ಯವೂ ಜನಪ್ರಿಯವಾಗಿದೆ. ಅವೆಲ್ಲವೂ ವ್ಯಾಪಕವಾದ ಅಧ್ಯಯನಕ್ಕೆ ಒಳಗಾಗಬೇಕಾಗಿದೆ.

**ಉರುಗಳ ಶಿಲ್ಪ :** ಮೆಕ್ಕಿಕಟ್ಟೆಯ ಉರುಗಳ ಶಿಲ್ಪಕ್ಕೆ ಮರವನ್ನು ಬಳಸಲಾಗಿದೆ. ಒಂದೇ ಜಾತಿಯ ಮರದಲ್ಲಿ ಕೆತ್ತಿ ಮಾಡಿದ ವಿಗ್ರಹಗಳು ಕಡಿಮೆ. ಮರದ ಸಣ್ಣಸಣ್ಣ ತುಂಡು ಗಳನ್ನು ಜೋಡಿಸಿ, ಒಂದು ಇಡೀ ಆಕೃತಿಯನ್ನು ಸಿದ್ಧಪಡಿಸುವುದೇ ಸಾಮಾನ್ಯ ಲಕ್ಷಣ. ಹಳೆಯ ಮರದ ಆಕೃತಿಗಳು (ದಾರುಶಿಲ್ಪ) ಕರಾವಳಿಯ ಗಾಳಿ-ಮಳೆಯ ಹೊಡೆತವನ್ನು ಮೀರಿ ಉಳಿದಿವೆ. ಹಲಸು, ಬೀಟೆ, ಮಾವು, ಸಾಗುವಾನಿ-ಹೀಗೆ ಎಲ್ಲ ಬಗೆಯ ಮರಗಳೂ ಇಲ್ಲಿವೆ. ಸಾಮಾನ್ಯವಾಗಿ ಮರದ ತುಂಡನ್ನು ಆಯ್ದು ತಂದು ಅದನ್ನು ಒಂದು ವರ್ಷಕಾಲ ನೀರಲ್ಲಿ ನೆನೆಸಿ, ಅದಕ್ಕೆ ಉಪ್ಪು ಬೆರೆಸಿ, ಅನಂತರ ವಿಗ್ರಹಗಳನ್ನು ಕೆತ್ತಲಾಗುವುದೆಂದು ಸ್ಥಳೀಯರು ವಿವರಣೆ ನೀಡುತ್ತಾರೆ. ಮರದ ಮೇಲೆ ಕಡು ಬಣ್ಣವನ್ನು ಲೇಪಿಸುವುದರಿಂದ ಮರದ ಬಣ್ಣ ಎಲ್ಲಿಯೂ ಕಾಣುವುದಿಲ್ಲ.

**ಉರುಗಳ ಬಣ್ಣಗಾರಿಕೆ ಮತ್ತು ಭಾವ ವಿನ್ಯಾಸ :** ಉರುಗಳಿಗೆ ಎಲ್ಲ ಕಡೆಗಳಲ್ಲಿಯೂ ಕಡುಕೆಂಪು ಬಣ್ಣವನ್ನೇ ಲೇಪಿಸಲಾಗಿದೆ. ಮೈಯಲ್ಲಿ ಭಸ್ಮವನ್ನು ಸಂಕೇತಿಸುವ ಬಿಳಿಗೆರೆ ಗಳನ್ನು ಬಿಟ್ಟರೆ ಉಳಿದ ಎಲ್ಲ ಕಡೆಗಳಲ್ಲಿಯೂ ಇದೇ ರೀತಿ ಇದೆ. ಹುಲಿಯನ್ನು ಅರಸಿನ ಬಣ್ಣದಿಂದ ವೈಭವೀಕರಿಸಲಾಗಿದೆ. ಕೆಂಪು ಬಣ್ಣವು ಮರಗಳ ಉಗ್ರತೆಯನ್ನು ಸಂಕೇತಿಸು ತ್ತದೆ. ಈ ಬಣ್ಣವು ಕರಾವಳಿಯ ಭೂತಾರಾಧನೆಯಲ್ಲಿ ಹೆಚ್ಚು ಕಾಣಸಿಗುತ್ತದೆ. ಯಕ್ಷ ಗಾನದ ರಾಕ್ಷಸ ವೇಷದಲ್ಲಿಯೇ ಉರುಗಳಷ್ಟು ಉಗ್ರವಾದ ಬಣ್ಣವಿಲ್ಲ. ಉರುಗಳ ಅತಿ ಮಾನುಷತೆಯನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುವ ಬಣ್ಣಗಾರಿಕೆಯಲ್ಲಿ ಕಲಾತ್ಮಕ ಸೂಕ್ಷ್ಮ ಗಳೇನೂ ಇಲ್ಲ. ಇದು ಅವುಗಳ ಉದ್ದೇಶವೂ ಅಲ್ಲ. ಮುಖವನ್ನು ಇನ್ನಷ್ಟು ಉಗ್ರ ಗೊಳಿಸಲು ಹಣೆಯಲ್ಲಿ ಕೆಂಪು ತಿಲಕ ಇಟ್ಟು ಅದಕ್ಕೆ ಕಪ್ಪಿನ ಆವರಣ ಬರೆಯುತ್ತಾರೆ. ಅದರ ಹೊರಗಡೆಗೆ ಬಿಳಿ ಚುಟ್ಟಿಯ ಸಾಲುಗಳಿರುತ್ತವೆ. ಹುಬ್ಬನ್ನು ನೀಳವಾಗಿಸಿ ದಪ್ಪ ಮಾಡ ಲಾಗುತ್ತದೆ. ಕಣ್ಣನ್ನು ಬಳಸಿಕೊಂಡು ಕಿವಿಯ ಕಡೆಗೆ ಇಳಿಮುಖವಾಗಿರುವ ಕೆಂಪು ಪಟ್ಟೆ, ಕಣ್ಣಿನ ಕೆಳಭಾಗದಲ್ಲಿ ಬಿಳಿ-ಕಪ್ಪು ಗೆರೆಗಳ ಆವರಣವನ್ನು ಸೃಷ್ಟಿಸುತ್ತಾರೆ. ಮೀಸೆಯನ್ನು ಮೇಲ್ಮುಖವಾಗಿಸಿ, ಕೋರೆಹಲ್ಲನ್ನು ಕೆಳಮುಖವಾಗಿಸುತ್ತಾರೆ. ಸಾಮಾನ್ಯವಾಗಿ ಅರೆತೆರೆದ ಬಾಯಲ್ಲಿ ಹಲ್ಲುಗಳು ಹೊರಗಡೆಗೆ ಕಾಣುವಂತಿರುತ್ತದೆ. ಹೆಂಗಸರ ಪ್ರತಿಮೆಗಳಲ್ಲಿ ಮೊಲೆಯ ಗಾತ್ರವನ್ನು ಅತಿಯಾಗಿ ಹಿಗ್ಗಿಸಲಾಗಿರುತ್ತದೆ.

ಒಟ್ಟಿನಿಂದ ಉರುಗಳ ಬಣ್ಣಗಾರಿಕೆಯನ್ನು ಸರಳವೆಂದೇ ಹೇಳಬಹುದು. ಉಗ್ರ ಭಾವದ ಪ್ರಕಟಣೆಗೆ ಅದು ಸಹಕಾರಿ. ಹಾಗೆಯೇ ಇದು ಭಯಭಕ್ತಿಯನ್ನು ಒಡಮೂಡಿಸುವ ಬಗೆಯೂ ಆಗಿರುತ್ತದೆ.

ಆಯುಧಗಳಲ್ಲಿ ಖಡ್ಗಕ್ಕೆ ಪ್ರಾಧಾನ್ಯ ಸಂದಿದೆ. ಕೆಲವು ವಿಗ್ರಹಗಳ ಕೈಯಲ್ಲಿರುವ ಆಯುಧದ

ಸ್ವರೂಪವನ್ನು ವಿವರಿಸಲು ಸಾಧ್ಯವಾಗುತ್ತಿಲ್ಲ. ಮಾನವನ ತಲೆಬುರುಡೆಯನ್ನು ಕೈಯಲ್ಲಿ ಹಿಡಿದಿರುವ ವಿಗ್ರಹಗಳು ತಮ್ಮ ಕ್ರೌರ್ಯವನ್ನೇ ಪ್ರಕಟಿಸುತ್ತವೆ.

**ಸಮಾರೋಪ :** ಮೆಕ್ಕಿಕಟ್ಟೆ ಮತ್ತು ಅದರ ಪರಿಸರದಲ್ಲಿ ಇರುವ ಉರುಗಳನ್ನು ಗುಡಿಗಾರರು ಮಾಡಿಕೊಡುತ್ತಾರೆ. ಆರ್ಥಿಕವಾಗಿ ಬಡವರಾಗಿರುವ ಈ ಗುಡಿಗಾರರ ಬದುಕಿನ ಬಗೆಗೆ ಸಾಂಸ್ಕೃತಿಕ ವಿವರಗಳು ಲಭ್ಯವಿಲ್ಲ. ಮೆಕ್ಕಿಕಟ್ಟೆಯಲ್ಲಿದ್ದ ಹಳೆಯ ಉರುಗಳು ಭಗ್ನವಾದಾಗ ಅವನ್ನು ಮತ್ತೆ ಮತ್ತೆ ನಿರ್ಮಿಸಿಕೊಟ್ಟವರು ಶ್ರೀಗಳಾದ ಸುಬ್ರಾಯ ಗುಡಿಗಾರ ಮತ್ತು ರಾಮಚಂದ್ರ ಗುಡಿಗಾರರು. ತಮ್ಮ ಪ್ರತಿಭೆಯ ಅಭಿವ್ಯಕ್ತಿಗೆ ಅವಕಾಶವಿಲ್ಲದ ಈ ಗುಡಿಗಾರರ ಬಗ್ಗೆ ನಿಜವಾದ ಆಸಕ್ತಿಯೂ ಪ್ರೀತಿವಿಶ್ವಾಸಗಳೂ ಬೇಕಾಗಿವೆ.

ಏನಿದ್ದರೂ ಉರುಗಳು ಕರಾವಳಿಯ ಸಾಂಸ್ಕೃತಿಕ ಕ್ಷೇತ್ರದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಗಳಿಸಿಕೊಳ್ಳುತ್ತವೆ. ಅವುಗಳ ರೂಪ, ಬಣ್ಣ ಮತ್ತು ಆಶಯಗಳು ಅಭ್ಯಾಸಯೋಗ್ಯವಾದುವು. ಮಧ್ಯಕಾಲೀನ ಕರ್ನಾಟಕದ **ರಹಸ್ಯತಾಂತ್ರಿಕ** ಪಂಥಗಳಿಂದ ಪ್ರೇರಣೆ ಪಡೆದ ಈ ಸ್ಥಳವು ಕರಾವಳಿಯ ಉತ್ತರ ಭಾಗದ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದ ಬಗೆ ಅಪೂರ್ವವಾದುದಾಗಿದೆ. ಬಹುಶ ದಕ್ಷಿಣಭಾಗದಲ್ಲಿ ಭೂತಗಳು ನಿರ್ವಹಿಸಿದ ಕೆಲಸವನ್ನೇ ಇವು ಮಾಡಿರಬೇಕು. ಭಯಾನಕ ಪರ್ಯಾಯಗಳನ್ನು ಸೃಷ್ಟಿಸಿ ಆ ಮೂಲಕ ಜನರು ತಮ್ಮ ಸೌಜನ್ಯದ-ಶಿಷ್ಟ ನಡಾವಳಿಗಳನ್ನು ಮುಂದುವರಿಸಿಕೊಂಡು ಹೋಗುತ್ತಾರೆನ್ನಬಹುದು. ಇದೊಂದು ವಿಶಿಷ್ಟ ಸಾಂಸ್ಕೃತಿಕ ಪ್ರಕ್ರಿಯೆ ಕೂಡಾ ಹೌದು.

## ಗ್ರಂಥಋಣ


1. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಮೈಸೂರು ವಿಶ್ವವಿದ್ಯಾನಿಲಯ, 1979.

2. ಚಿನ್ನಪ್ಪ ಗೌಡ ಕೆ, **ಜಾಲಾಟ** ಚಿಂತನ ಪ್ರಕಾಶನ, ಉಜಿರೆ, 1985.

3. ಪುರುಷೋತ್ತಮ ಬಿ., **ಸುಳ್ಯ ಪರಿಸರದ ಗೌಡ ಜನಾಂಗ: ಒಂದು ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ ಪಿಎಚ್‌ಡಿ. ಮಹಾ ಪ್ರಬಂಧ) ಮಂಗಳೂರು ವಿಶ್ವವಿದ್ಯಾನಿಲಯ, 1985.

4. ಪುರುಷೋತ್ತಮ ಬಿ., **ಮದುವೆ : ಒಂದು ವಿಶ್ಲೇಷಣೆ** (ತುಳುವ ದಿನಾಚರಣೆಯಲ್ಲಿ ಮಂಡಿಸಿದ ಪ್ರಬಂಧ) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ, 1986.

5. ಮಯ್ಯ ಪಿ.ಎನ್., **ಕೋಟ ಪ್ರದೇಶದ ದೇವ ಹಾಗೂ ದೈವ ಸ್ಥಾನಗಳು** (ಎಂ.ಫಿಲ್. ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪ್ರಬಂಧ,ಅಪ್ರಕಟಿತ), ಬೆಂಗಳೂರು ವಿಶ್ವವಿದ್ಯಾಲಯ, 1984.

6. ರಘುಪತಿ ಭಟ್ಟ, ಕೆಮ್ಮೂರು, **ತುಳುನಾಡಿನ ಸ್ಥಳ ನಾಮಗಳು** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1979.

7. **ರಮುಜಾನ ದರ್ಗಾ,** ಸಂಕಲನ ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು, 1983.

8. ವಿವೇಕ ರೈ, **ತುಳು ಜಾನಪದ ಸಾಹಿತ್ಯ** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, -1985.

9. ಶಿವರಾಮ ಕಾರಂತ ಕೆ. **ಭೂತಾರಾಧನೆ,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, -1970.

10. ಹೆಬ್ಬಾರ ಎ.ಎಸ್.ಎನ್. **ನೆಕ್ಕಿಕಟ್ಟೆಯ ಉರುಸಾಲು : ಕುಂದದರ್ಶನ,** ಭಂಡಾರ್ಕಾರ್ಸ್ ಕಾಲೇಜು, ಸಂ : ಎ.ವಿ. ನಾವಡ. ಸಂಪುಟ, ಭಂಡಾರ್ಕಾರ್ಸ್ ಕಾಲೇಜು, ಕುಂದಾಪುರ, 1976-77.

# ದಕ್ಷಿಣ ಕನ್ನಡ ಜಿಲ್ಲೆಯ ಮುಖವಾಡಗಳು

–ಎಸ್.ಎ. ಕೃಷ್ಣಯ್ಯ

## ಒಂದು

**ದ**ಕ್ಷಿಣ ಕನ್ನಡ ಜಿಲ್ಲೆಯ ಮುಖವಾಡಗಳ ಬಳಕೆಯು ರಂಜನೆಗಾಗಿ ಮತ್ತು ಭೂತಚೇತನಗಳ ಆರಾಧನಾ ಹಾಗೂ ಆಚರಣೆಯ ಸಂಪ್ರದಾಯವಾಗಿ ಇಂದಿಗೂ ವರ್ಷದ ಆರು ತಿಂಗಳ ಕಾಲ ಪ್ರದರ್ಶನಗಳನ್ನು ಕಾಣಬಹುದಾಗಿದೆ. ಭೂತಾರಾಧನೆಯ ಪ್ರಕಾರಗಳಲ್ಲಿ ಪುರುಷ, ಸ್ತ್ರೀ ಶಕ್ತಿ ಹಾಗೂ ಪ್ರಾಣಿ ಶಕ್ತಿಯ ಸ್ವರೂಪ ಮತ್ತು ನಂಬಿರುವ ಅಲೌಕಿಕ ಶಕ್ತಿಯ ಸಂಬಂಧದ ಪರಿಣಾಮಗಳೇನು-ಎಂಬ ಸ್ಪಷ್ಟ ಘಟನಾವಳಿಯ ಕಥೆ, ಹಾಡು, ಪುರಾಣ ಕುರಿತು ಜನಪದರ ಪಾಡ್ದನ, ಸಂದಿ, ಕಬಿತೆ ಮುಂತಾದುವುಗಳಲ್ಲಿ ಉಲ್ಲೇಖವಿದೆ. ಪ್ರತಿ ಭೂತ/ದೈವದ ಆರಾಧನೆಗೆ ಸಂಬಂಧಿಸಿದಂತೆ ಪ್ರಾದೇಶಿಕ ಸಂಪ್ರದಾಯಗಳಿವೆ.

ಈ ಜಿಲ್ಲೆಯಲ್ಲಿ ಹೆಚ್ಚಾಗಿ ಮಾತೃಪ್ರಧಾನ ಕುಟುಂಬದ ನಿಯಮಾವಳಿಗಳನ್ನು ಅನುಸರಿಸುವ ಪಂಗಡಗಳು ಅನೇಕ ಇವೆ. ಭೂತಾರಾಧನೆಯಲ್ಲಿ ಕಂಡುಬರುವ ಅಪ್ರತಿಮ ವೀರರುಗಳಲ್ಲಿ ಬಹುತೇಕ ಜೈನ ಕುಟುಂಬದ ಹಾಗೂ ಮಾತೃಪ್ರಧಾನ ಕುಟುಂಬಕ್ಕೆ ಸೇರಿದ ಸ್ತ್ರೀ-ಪುರುಷ ಶಕ್ತಿಗಳಾಗಿವೆ. ಇವುಗಳಲ್ಲಿ ಸಾಹಸಿಗಳಾಗಿ ಕೆಲವರು ಹತ್ಯೆಗೊಳಗಾದವರು. ಇನ್ನೂ ಕೆಲವರು ಆಡಳಿತ ವರ್ಗದಿಂದ ತುಳಿಯಲ್ಪಟ್ಟು ಅತೃಪ್ತ ಆತ್ಮಗಳಾದ ಅನೇಕ ದೃಷ್ಟಾಂತಗಳಿವೆ. ಈ ಅತೃಪ್ತ ಚೇತನಗಳು ದೈವವಾಗಿ ರಾಜ್ಯ-ಗ್ರಾಮದಲ್ಲಿ ಅಧಿಕೃತ ನಂಬಿಕೆಯ ಸ್ಥಾನಗಳಿಸಿವೆ. ಇದರೊಂದಿಗೆ ಪ್ರಾಣಿ ಶಕ್ತಿಗಳ ಸಂಬಂಧವನ್ನೂ ಕೆಲವು ಭೂತಗಳಲ್ಲಿ ಮತ್ತು ಆರಾಧನಾ ವಿಧಿಗಳಲ್ಲಿ ಒಳಹೊಕ್ಕಿರುವುದನ್ನು ಗಮನಿಸಬಹುದು. ಸ್ತ್ರೀ-ಪುರುಷ ಶಕ್ತಿ, ಪ್ರಾಣಿ (ಕುಲ ದೇವತೆ) ಚಿಹ್ನೆ ಅಥವಾ ನಿರ್ದಿಷ್ಟ ಮುಖವಾಡ ಧರಿಸಿ ಭೂತಾರಾಧನೆ ನಡೆಯುವ ಪ್ರದರ್ಶನಗಳಿಗೆ ಕೋಲ, ನೇಮ, ಉತ್ಸವ, ತಂಬಿಲ, ಮೆಚ್ಚಿ-ಇತ್ಯಾದಿ ಹೆಸರುಗಳಿವೆ. ಭೂತಾರಾಧನೆಯಲ್ಲಿ ಪ್ರಕಟಗೊಳ್ಳುವ ಆವೇಶದ ಶಕ್ತಿಸಂಚಾರದಲ್ಲಿ ಅಥವಾ ಪಳಯುಳಿಕೆಯಾಗಿ ಉಳಿದಿರುವ ಕಡ್ತಲೆ (ಕತ್ತಿ) ಅತ್ಯಂತ ಪ್ರಮುಖವಾದದ್ದಾಗಿದೆ. ಗ್ರಾಮ-ರಾಜ್ಯದ ಅಥವಾ ಕುಟುಂಬದ ಸಂಕಷ್ಟಗಳಿಗೆ ಸಾಮಾಜಿಕ, ಆರ್ಥಿಕ ಮತ್ತು ಮಾನಸಿಕ ಭದ್ರತೆಗಾಗಿ ಮುಖವಾಡ ಧರಿಸಿ ಜನಾಂಗದ ಭೂತ ಚೇತನಗಳನ್ನು ಆವಾಹನೆ ಮಾಡುವ ಕ್ರಮವಿದೆ. ಮುಖವಾಡ ಧರಿಸಿದಾಗ ಪಡೆಯುವ ದಿವ್ಯಶಕ್ತಿಯ ವಾಕ್‌ಗಳನ್ನು ಪರಿಪಾಲಿಸುವ ಸಂಪ್ರದಾಯಗಳನ್ನು ಭೂತಾರಾಧನೆಯ ಆಚರಣೆಯಲ್ಲಿ ಗುರುತಿಸಬಹುದು. ದಿವ್ಯ ಶಕ್ತಿಯ ಆವಾಹನೆ, ಉಪಾಸನೆ ಮತ್ತು ವಿಸರ್ಜನೆ ಈ ಮೂರೂ ಕ್ರಿಯೆಗಳನ್ನು ದೃಶ್ಯಾತ್ಮಕವಾಗಿ ಭೂತಾರಾಧನೆಯಲ್ಲಿ ಕಾಣಬಹುದಾಗಿದೆ.

ಈ ಜಿಲ್ಲೆಯಲ್ಲಿಯೂ ಪ್ರಾಣಿಗಳ ಮುಖವಾಡವನ್ನು ಧರಿಸುವ ಆಚರಣಾತ್ಮಕ ಹಿನ್ನೆಲೆ ಮತ್ತು ದೃಶ್ಯಗಳಿವೆ. ದೈವ-ಆವೇಶ (ಶಕ್ತಿ) ವನ್ನು ದ್ವಿಗುಣಗೊಳಿಸಲೋಸ್ಕರ ಭಕ್ತರನ್ನು ನಂಬಿಸುವ ಮತ್ತು ನಂಬಿಕೊಂಡು ಹೋಗುವಂತೆ ಭಾವನೆ ಸೃಷ್ಟಿಸುವ ಪೂರಕ

ಅಂಶಗಳನ್ನು ಭೂತಾರಾಧನೆಯಲ್ಲಿ ಗಮನಿಸಬಹುದು. ಹೆಚ್ಚಾಗಿ ಪ್ರಾಣಿ ಸಂಕೇತವಾದ ಮುಖವಾಡಗಳ ಮೂಲಕ ಪ್ರತಿನಿಧಿಸುವ ಪ್ರಾಣಿಚೇತನ ಭೂತಗಳ ಆರಾಧನೆಯು ಮುಖ್ಯವಾಗಿ ದನ-ಕರು ಮತ್ತು ಕೃಷಿಕನ ಬೆಳೆ ವೃದ್ಧಿಸುವ ಮತ್ತು ಸಂರಕ್ಷಿಸುವ ದೈವವಾಗಿರುವುದನ್ನು ಇಂದಿಗೂ (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ) ಕಾಣಬಹುದಾಗಿದೆ.

ಈ ಜಿಲ್ಲೆಯಲ್ಲಿ ಮುಖವಾಡಗಳ ಬಳಕೆಯು ಸತ್ತಜೀವಿಯ ಸಮಾಧಿಯೊಂದಿಗೆ ಇಲ್ಲದಿದ್ದರೂ ಆ ಸ್ಥಳದಲ್ಲಿ ಭೂತ ಸ್ಥಾನಗಳಾದ ಉದಾಹರಣೆಗಳಿವೆ. (ಅ) "ಮಲಾರ ಹೊಳೆಬದಿಯಲ್ಲಿ ಜನಿಸಿದ ಭೂತ ಬೀಡಿಗೆ ಬಂದು ಅಲ್ಲಿದ್ದ ಒಂಜಿಕುಂದನಲ್ವ ಭೂತ (ನಲ್ವತ್ತಕ್ಕೆ ಒಂದು ಕಡಿಮೆ ಭೂತ) ಗಳಿಗೆ ಅರಸಾಗಿ ಮೆರೆಯಿತಂತೆ. ಆದರೆ ಬೀಡಿನ ಬಲ್ಲಾಳರು ಅದನ್ನು ಗಣನೆ ಮಾಡಲಿಲ್ಲ....ದೈವದ ಕಾಟದಿಂದ ಬೀಡಿನಲ್ಲಿ ಪಶು, ಜನ, ತೊಟ್ಟಿಲ 8 ಶಿಶುಗಳು ತೀರಿದವು. ಅವುಗಳ ಸಮಾಧಿಯನ್ನು ಈಗಲೂ ನೋಡಬಹುದಾಗಿದೆ. (**ಬಂಟವಾಳದಿಂದ** ಪಶ್ಚಿಮಭಾಗ **ವಿಟ್ಲ** ಸಮೀಪ). ಕೊನೆಗೆ ಸೋತ ಬಲ್ಲಾಳರು ಮನಸ್ಸಿಲ್ಲದ ಮನಸ್ಸಿಂದ ಆ ದೈವಕ್ಕೆ ಮಕ್ಕಳನ್ನು ಸಮಾಧಿ ಮಾಡಿದ ಸ್ಥಳದಲ್ಲಿ ಸ್ಥಾನ ಕಟ್ಟಿಸಿಕೊಟ್ಟರು. ಬಹುಶ ಸ್ಮಶಾನದಲ್ಲಿ ಸ್ಥಾನ ಇರುವ ಉದಾಹರಣೆ ಮಲಾರನ್ನು ಬಿಟ್ಟರೆ ಬೇರೆಲ್ಲೂ ಸಿಗಲಾರದೇನೋ"1

ಇಲ್ಲಿಯ ಭೂತ ಸ್ಥಾನಗಳಲ್ಲಿ ಮುಖ್ಯವಾಗಿ 'ಆಲಡೆ' ಎಂದು ಕರೆಯಲ್ಪಡುವ ಜಾಗದಲ್ಲಿ ಹೆಗ್ಗಡೆ, ಪೂಜಾರಿ ಅಥವಾ ದರ್ಶನ ಪಾತ್ರಿ-ಇವರುಗಳನ್ನು ದೈವಕ್ಕೆ ಸೇರಿಸಿರುವ ಅನೇಕ ಉದಾಹರಣೆಗಳಿವೆ: ಹಿರಿಯಡ್ಕ, ನಂದಳಿಕೆ-ಈ ದೈವ ಸ್ಥಾನಗಳ ಆವರಣದಲ್ಲಿ ಹಿರಿಯ ಮೂಲ ಚೇತನಗಳ ಆಕೃತಿಯನ್ನು ಮರದಲ್ಲಿ ಮಾಡಿರುವ ಉರು (ಗೊಂಬೆ) ಗಳಿವೆ. ಪುರಾತನ ಆಲಡೆಗಳು ಒಂದು ನಿರ್ದಿಷ್ಟ ವಂಶಸ್ಥರಿಗೆ ಮೀಸಲಿಟ್ಟ ಸ್ಥಳಗಳಾಗಿದ್ದಿರಬಹುದು. ಹಿರಿಯರ ಸಮಾಧಿಗಳು-ಇರುವಂಥ ಸೂಚನೆಗಳು ಇಂದು ದೈವಸ್ಥಾನದ ಮಾದರಿಯಲ್ಲಿ ರೂಪಿತಗೊಂಡಿದೆ ಎನ್ನಬಹುದು.

ಇತ್ತೀಚೆಗೆ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಸಂಗ್ರಹಿಸಿದ ಜುಮಾದಿ ಭೂತ(?)ದ ಮುಖವಾಡ, ಕನ್ನಪಾಡಿ-ಸುಳ್ಯ ತಾಲೂಕು ಎಂಬಲ್ಲಿ ಭೂಮಿ ಅಗೆದಾಗ-ಸಿಕ್ಕಿರುವುದು ಗಮನಾರ್ಹ ಸಂಗತಿ.2

ಮುಖವಾಡಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಮನುಷ್ಯನ ತಲೆಬುರುಡೆ. ಉದಾ: ನ್ಯೂಗಿನಿಯ ಆದಿವಾಸಿಗಳು ಮುಖವಾಡವನ್ನು ಮನುಷ್ಯನ ತಲೆ ಓಡುಗಳಿಂದಲೇ ಮಾಡುತ್ತಾರೆ. ತದನಂತರ ಮರದ ತೊಗಟೆ, ಮರದ ಹಾಳೆ, ಚರ್ಮ, ಅಡಿಕೆ ಹಾಳೆ, ಮರ, ಲೋಹ-ಹೀಗೆ ಕ್ರಮೇಣ ರೂಪುಗೊಂಡಿರಬಹುದು. ಇದಕ್ಕಾಗಿ ಬಳಸಿದ ವಸ್ತುವು ಬದಲಾದರೂ ಸಾಂಪ್ರದಾಯಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರವೃತ್ತಿಯ ಆಚರಣೆಗಳು ಒಂದಲ್ಲ ಒಂದು ವಿಧದಲ್ಲಿ ಪ್ರಕಟಗೊಳ್ಳುತ್ತಿರುತ್ತವೆ. ದ.ಕ. ಜಿಲ್ಲೆಯ ಜನಪದರಲ್ಲಿ ಹಲವು ಬಗೆಯ ದೈವಗಣಗಳ. ಭೂತಗಳ, ಮಂಡಲ ನೃತ್ಯ-ಇತ್ಯಾದಿಗಳಿವೆಯಷ್ಟೆ. ಆವಾಹನೆ-

ಉಪಾಸನೆ-ವಿಸರ್ಜನೆ-ಈ ತ್ರಿಗುಣಗಳ ಕೈಂಕರ್ಯವಾಗಿ ಭೂತ, ನಾಗಮಂಡಲ, ಮೊದಲಾದ ಆಚರಣೆಗಳಲ್ಲಿ ಒಂದು ಧಾರ್ಮಿಕ ಸಂಸ್ಕೃತಿಯ ಸ್ವರೂಪಗಳೆನ್ನುವಂತೆ ಉಳಿದುಕೊಂಡು ಬಂದಿವೆ. ಆದುದರಿಂದ ಭೂತಾರಾಧನೆ, ನಾಗಮಂಡಲ, ಹಗಲುಮೆಚ್ಚಿ, ರಾತ್ರಿಕೋಲ, ನೇಮ, ಪಾಣಾರಾಟ, ಕಾಪ್ಯಾನಾಟ (ಮುಗ್ಗೇರರ ಕಾಳಿಂಗನಾಗರ-ಮಂಡಲ ಆರಾಧನೆ) ಮುಂತಾದುವು ಶತಮಾನಗಳಿಂದ ನಡೆಯುತ್ತಾ ಬಂದಿರುವುದು.

ಅಳಿಯಕಟ್ಟಿನ ಜನಾಂಗದವರಾದ ಮುಗ್ಗೇರ, ಮುಂಡೇಲ, ಪಾಣಾರ, ನಲಿಕೆ, ಪಂಬದ, ಮರೆಕಲ, ಬಂಟ ಯಾನೆ ನಾಡವ ಮತ್ತು ಬಿಲ್ಲವ-ಈ ವರ್ಗದವರ ವಾಂಶಿಕ ಸೇವೆ ನಿರಂತರ ವಾಗಿ ನಡೆದುಬಂದಿದೆ.

ದ್ರಾವಿಡ ಪದ್ಧತಿಯ ಕ್ರಮದಂತೆ ನಡೆಯುವ ಈ ಆಚರಣಾತ್ಮಕ ಆರಾಧನೆಗಳಲ್ಲಿ ಆವಾಹ ನೆಯ ಕ್ರಮಗಳು ಹಲವು ಬಗೆಯಲ್ಲಿವೆ. ಇವುಗಳಲ್ಲಿ ಮುಖವಾಡದ ಬಳಕೆಯೂ ಒಂದು ಭಾಗ ಮತ್ತು ಈ ಆಚರಣೆಗಳಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿವೆ. ಆಕೃತಿ (Icon) ಅಥವಾ ಅನಾಕೃತಿ (anican) ಯ ದೈವಿಕ ವಸ್ತುಗಳ ಬಳಕೆ, ಪ್ರತಿಮಾ ಸೌಂದರ್ಯ ಇವುಗಳ ಜೊತೆಯಲ್ಲಿ ಬರುವ ಪಾಡ್ದನ, ನುಡಿಗಟ್ಟು, ಬಿರುಪನ್ನಿನಿ (ತುಳು)-ವೀರ ಸಾಂಸ್ಕೃತಿಕರ ಸಾಹಸಗಾಥೆ, ಕಬಿತೆ, ಇತ್ಯಾದಿ ಆವೇಶಗೊಳ್ಳಲು ಅಥವಾ ಆವಾಹನೆಯ ಸ್ಥಿತಿಗೆ ಸದಾ ಪೂರಕವಾಗಿರುತ್ತವೆ.

ಭೂತಾರಾಧನೆಯಲ್ಲಿ ಮುಖವಾಡಗಳನ್ನು ಧರಿಸುವ ಭೂತಗಳು ಕೆಲವೇ ಕೆಲವು. ಇಂದು ಹೆಚ್ಚಾಗಿ ಲೋಹದಿಂದ ನಿರ್ಮಿತ ಮುಖವಾಡಗಳು ಬಳಕೆಯಲ್ಲಿವೆ. ಇದರ ಸಾಮಗ್ರಿ ಸಂರಕ್ಷಣೆಯ ಹೊಣೆ ಕೆಲವು ಕಡೆ, ಶೆಟ್ಟಿ ಯಾನೆ ನಾಡವರಲ್ಲಿಯೂ ಇನ್ನೂ ಕೆಲವು ಕಡೆ ಬಿಲ್ಲವ ರಲ್ಲಿ ಸಂರಕ್ಷಿತವಾಗಿರುವುದನ್ನು ಕಾಣಬಹುದು. ಜಾಗೆದ (ಸ್ಥಳ) ಭೂತ ಸಂಬಂಧಿಯಾದ ಸಾಮಗ್ರಿಗಳು ಆಯಾಯಾ ಸ್ಥಳದ ಮುಖ್ಯಸ್ಥರಲ್ಲಿರುವುದು. ನಿಡಗಲ್ಲು (ಉಜಿರೆ ಬಳಿ) ಇರುವ ಕ್ಷೇಮಕಲ್ಲ ಪಂಜುರ್ಲಿ ಸ್ಥಾನದ ಮುಖವಾಡವು ಸ್ಥಾನಿಕ ಬ್ರಾಹ್ಮಣರಲ್ಲಿ ರಕ್ಷಿತಗೊಂಡಿದೆಯಷ್ಟೆ.

ಭೂತಾರಾಧನೆಯ ಸಂಸ್ಕೃತಿಯಲ್ಲಿ ಪುರಾತನ ಕಾಲದಿಂದ ಕಾಪಾಡಿಕೊಂಡು ಬಂದಿರುವ ಪ್ರತಿಯೊಂದು ಪಳೆಯುಳಿಕೆಗೂ ಸ್ಥಾನಗೌರವಗಳಿವೆ. ಅವುಗಳಲ್ಲಿ ಪೂಜಿಸಿಕೊಂಡು ಬಂದಿರುವ ಕಲ್ಲು, ಖಡ್ಗ, ಗುರಾಣಿ, ಲೋಹ ನಿರ್ಮಿತ ಆಕೃತಿ, ನಿರ್ದಿಷ್ಟ ಮರ ಅಥವಾ ಸ್ಥಳ, ಲೋಹದ ಮುಖವಾಡ, ಗಿಂಡಿ ಮತ್ತು ನೀರು (ಕಳಸ), ಚೌರಿ, ಕಬ್ಬಿಣದ ತುಂಡು(ದಂತ), ಮರದ ಪಾಪೆ (ಉರುಗಳು), ಮರದ ಮುಖವಾಡ, ಪ್ರಾಣಿ, ಪಕ್ಷಿ ಪ್ರತಿಮೆ ಅಥವಾ ಪ್ರಾಣಿ-ಮನುಷ್ಯರ ದೇಹದ ಭಾಗ, ಹೆಣ್ಣು ಮತ್ತು ಗಂಡು-ಅಂಶ ಹೊಂದಿದ ದೈವ (ಉಭಯ ಲಿಂಗ ಪ್ರತಿಮೆ-ರೂಪ), ದೀಪ, ಘಂಟಾಮಣಿ, ಹಾವಿನ ಹುತ್ತ, ದೀವಟಿಗೆ, ಮರದ ಕಂಬ, T ಆಕಾರದಲ್ಲಿ ನಿರ್ಮಿಸಿದ ಮರದಮಣೆ (ಮಾಡ), ತೂಗುಯ್ಯಾಲೆಯಲ್ಲಿ ಸ್ಥಾಪಿಸಲ್ಪಟ್ಟ ಭೂತಗಣಗಳ ಪ್ರತಿಮೆ-ಮುಖವಾಡ, ಬಿಲ್ಲು ಬಾಣ, ಇತ್ಯಾದಿ. ಇವೆಲ್ಲಾ

ಭೂತಾರಾಧನೆಯ ಸಂಸ್ಕೃತಿಯನ್ನು ಅಭಿವ್ಯಕ್ತಿಸಬಲ್ಲ ಕುರುಹುಗಳು.

ಲೋಹದಿಂದ ನಿರ್ಮಿತ ಅಥವಾ ಅಡಿಕೆ ಹಾಳೆಯ ಭೂತದ ಮುಖವಾಡಗಳನ್ನು ಆವೇಶಕ್ಕೆ ಒಳಗಾಗುವ ದರ್ಶನಕಾರ/ಪಾತ್ರಿ ಮುಖಕ್ಕೆ ಧರಿಸಿಕೊಳ್ಳುವುದು, ಸಹಜವಾದರೂ ಲೋಹದ ಮುಖವಾಡವನ್ನು ತಲೆಯ ಮೇಲ್ಗೆ ಏರಿಸಿಕೊಳ್ಳುವ ಸಂಪ್ರದಾಯವೂ ಇದೆ. ಉದಾ: ಜುಮಾದಿ, ಮಲೆ ಜುಮಾದಿ, ಪಿಲಿಚೌಂಡಿ. ಮುಖಕ್ಕೆ ಧರಿಸಿಕೊಳ್ಳುವಲ್ಲಿ ಪಂಜುರ್ಲಿ ಭೂತದ (ಅಡಿಕೆ ಹಾಳೆಯದು) ದರ್ಶನಕಾರ ಕಟ್ಟಿಕೊಳ್ಳುವುದಿದೆ.[3] ಲೋಹದ ಮುಖವಾಡ ಧರಿಸಿಕೊಳ್ಳಲು ಸಾಧ್ಯವಾಗದಿದ್ದರೆ ಕೈಯಲ್ಲಿ ಹಿಡಿದು ಬಲಿ (ಪ್ರದಕ್ಷಿಣೆ) ಬರುವ ಸಂಪ್ರದಾಯವೂ ಇದೆ. ಬಹುಶ ಲೋಹದ ಮುಖವಾಡ ಭಾರವಾದುದರಿಂದ ತಲೆಗೆ ಏರಿಸಿಕೊಳ್ಳುವ ಸಂಪ್ರದಾಯ ರೂಢಿಗೆ ಬಂದಿರಬಹುದು. ಡಾ. ವಿವೇಕ ರೈ[4] ಅವರು ತಿಳಿಸುವಂತೆ ''ಪುತ್ತೂರು, ಸುಳ್ಯ ಭಾಗಗಳಲ್ಲಿ ಮುಖದ ಭಾಗಕ್ಕೆ ಲೋಹ ನಿರ್ಮಿತ ಮುಖವಾಡ ಧರಿಸಿಕೊಳ್ಳುವರು''-ಅಪೂರ್ವ ಭೂತದ ಮುಖವಾಡಗಳನ್ನು (ಲೋಹದವು) ಇಂದಿಗೂ ಮಂಗಳೂರು ವಿಶ್ವವಿದ್ಯಾನಿಲಯದಲ್ಲಿನ ಜಾನಪದ ವಸ್ತುಸಂಗ್ರಹಾಲಯದಲ್ಲಿ ಕಾಣಬಹುದಾಗಿದೆ. ಲೋಹದ ಮುಖವಾಡವನ್ನು ಸಂಪೂರ್ಣವಾಗಿ ಧರಿಸಿಕೊಳ್ಳುವ ಭೂತ ವಿಷ್ಣುಮೂರ್ತಿ ದೈವ. **ಒತ್ತೆಕೋಲದ** ಅಂತ್ಯದಲ್ಲಿ ಸಿಂಹಮುಖ (ಲೋಹನಿರ್ಮಿತ) ಧರಿಸಿಕೊಂಡು ಪ್ರಸಾದ ಕೊಡುವ ಕ್ರಮವಿದೆ. ಉದಾ: ಎಡನೀರು (ಕಾಸರಗೋಡು) ಮತ್ತು ಕುಕ್ಕುಜಡ್ಕ (ಸುಳ್ಯ ತಾ.)

**ಮಾಂಕಾಳಿ ಮುಗ:** ಮಾಂಕಾಳಿ-ಮುಖವಾಡವನ್ನು (ಅಡಿಕೆ ಹಾಳೆಯದು) ಹೊತ್ತು ಕೆಲವು ನಿರ್ದಿಷ್ಟ ಗುತ್ತು, ಬೀಡು-ಗಳ ಮನೆಗೆ ಹೋಗಿ ಪಡಿ-ಕಾಣಿಕೆ ಪಡೆಯುವ ತಿರುಗಾಟ ದ.ಕ. ಜಿಲ್ಲೆಯಲ್ಲಿ ಕಾಣಬಹುದು. ದೀಪಾವಳಿ ಆರಂಭದ ಮೊದಲ ವಾರದಲ್ಲಿ ನಡೆಯುವ ಮಾಂಕಾಳಿ ತಿರುಗಾಟ ಮತ್ತು ಆಚರಣೆಯ ಕುಣಿತ ಪಾಡ್ದನ ಹೇಳುವಿಕೆ ನಲ್ಕೆ, ಪಂಬದ, ಪಾಣಾರ-ಜನಾಂಗದವರಿಗೆ ಬಂದ ವಾಂಶಿಕ ಕುಲಕಸುಬು.

ಮಾಂಕಾಳಿ-ಮುಖವಾಡ ಹೊತ್ತವರು ಭೂತದ ಸೂಡಿ ಪಡೆಯುವ ಹಕ್ಕು ವಂಶಪಾರಂಪರ್ಯದಿಂದ ಬಂದ ಕಾಯಕ. ನಿಯಮಿತವಾಗಿ ರೂಪಿಸಿಕೊಂಡ ಕಟ್ಟು-ಕಟ್ಟಲೆಗಳನ್ನು ಪಾಲಿಸುವಾಗ ಪಾಣಾರ ಜನಾಂಗ ಸಂಪ್ರದಾಯ ಕ್ರಮದಂತೆ ಭತ್ತದ ಕಾಳನ್ನು ಸ್ಪರ್ಶಿಸುವರು. ಮನೆಯ ಯಜಮಾನ ತೆಳ್ಳನೆಯ ದೋಸೆ ಅಥವಾ ಅಡ್ಯ (ಕಡುಬು ಮಾದರಿ ತಿನಿಸು) ಕೊಡುವುದು ನಿಯಮ. ಮಾಂಕಾಳಿ ಮುಖವಾಡ ಧರಿಸಿ ಕಂಡಕಂಡವರ ಮನೆಗೆಲ್ಲಾ ಹೋಗುವ ಹಾಗಿಲ್ಲ, ಈ ಸಂಪ್ರದಾಯವನ್ನು ಇಂದಿಗೂ ಬೈಲೂರು, ದೊಡ್ಡನಂಗಡಿ, ಸೀರೇ ಬೈಲೂರು (ಹಿರಿಯಡ್ಕ-ಉಡುಪಿ ತಾ.) ಮುಂತಾದೆಡೆ ಕಾಣಬಹುದು. ಇಲ್ಲೆಲ್ಲಾ ಕೃಷಿಕರ ಮನೆತನದವರು ಕೊಡುವ ಉದ್ದೇಶದ ಮುಖ್ಯ ಆಶಯ ಫಲವತ್ತಿಕೆ-ಶ್ರೀಮಂತಗೊಳ್ಳಲೆಂದು.

ಪಾಣಾರ ಜನಾಂಗದವರ ಮಾಂಕಾಳಿಪಡೆ ತಿರುಗಾಟದಲ್ಲಿ ಪರವ ಜನಾಂಗದವರು-

ತೆಂಬೆರೆ-(ತುಳು) [ಚರ್ಮದಲ್ಲಿ ಮಾಡಿದ ಚಿಕ್ಕವಾದ್ಯ] ನುಡಿಸಲು ಸಹಾಯಕರಾಗಿ ಬರುವರು. 'ತೆಂಬೆರೆ'ಗಿಂತ ಸ್ವಲ್ಪ ಚಿಕ್ಕಪ್ರಮಾಣದ ವಾದ್ಯವನ್ನು **'ಕರಂಡೆ'** ಎಂದು ಕರೆಯುವ ಸಂಪ್ರದಾಯವಿದೆ.[5]

ಮಾಂಕಾಳಿ ಮುಖವಾಡವನ್ನು ಅಡಿಕೆ ಹಾಳೆಯಲ್ಲಿ ತಯಾರಿಸಿ ಪಾಣಾರರು ಧರಿಸಿಕೊಂಡು ಹೊರಡುವ ಮುನ್ನ ಮನೆಯಲ್ಲಿ ಅಗೇಲು (ಎಡೆ) ಹಾಕಿ ಪೂಜಿಸಿ ನಂತರ ತಿರುಗಾಟಕ್ಕೆ ಹೊರಡುವರು. ಆ ತಿರುಗಾಟದ ನಂತರ ಅಡಿಕೆ ಹಾಳೆಯಲ್ಲಿ ನಿರ್ಮಿಸಿದ ಮುಖವಾಡವನ್ನು ಹಾಗೆಯೇ ಸಂರಕ್ಷಿಸಿ ಮುಂಬರುವ ದೀಪಾವಳಿಗೆ ಉಪಯೋಗಿಸುವರು.

ಇಂದು ಮಾಡಿಕೊಳ್ಳುವ ಮಾಂಕಾಳಿಯ ಬಣ್ಣ ಕೆಂಪು (ನಾಲಗೆ), ಹಸಿರು (ಮುಖದ ಬಣ್ಣ) ಮತ್ತು ಕಪ್ಪು ಮಸಿ (ಕಣ್ಣು-ಹುಬ್ಬುಗಳಿಗೆ) ಬಳಿದು ಮಾಂಕಾಳಿಯ ವಿನ್ಯಾಸ ಮಾಡಿಕೊಳ್ಳುವರು. ಕಾರಣ-'ತಿರುಗಾಟದಲ್ಲಿ ಸ್ಪಷ್ಟವಾಗಿ ಎದುರಿದ್ದವರು ಕಾಣಲೋಸ್ಕರ ಅರೆ-ತೆರೆದ ಭಂಗಿಯಲ್ಲಿ ಮುಖವಾಡ ಹಾಕಿಕೊಂಡು ಬೆನ್ನ ಹಿಂಬದಿಗೆ ಬಟ್ಟೆ (ಸೀರೆ) ಇಳಿಜಾರು ಬಿಡುವರು.

ನಲ್ಕೆ ಜನಾಂಗದವರಿಗೂ ಮಾಂಕಾಳಿ-ತಿರುಗಾಟದ ಹಕ್ಕುಂಟು. ಇವರಿಗೆ ಯಾವ ಸಂದರ್ಭದಲ್ಲಿಯಾದರೂ 'ಪಡಿದಾನ' ಕೊಡಬಹುದಂತೆ. ಕಾರಣ ಇವರು 'ಪೊಲಿಸು' (ವೃದ್ಧಿಯ ಆಶಯ) ಒಳಮನೆಗೆ ಬಿಸಾಡುವುದರಿಂದ ಶ್ರೇಷ್ಠರು-ಎಂಬ ಜನಾಂಗದ ನಂಬಿಕೆ.

**ಮರದ ಮತ್ತು ಚಿನ್ನ-ಬೆಳ್ಳಿಯ ಮುಖವಾಡಗಳು :** ಕರಾವಳಿ ಕರ್ನಾಟಕದ ದಕ್ಷಿಣ ಭಾಗದಲ್ಲಿ ಸ್ತ್ರೀ ಶಕ್ತಿ ದೇವತೆಯಾದ 'ಉಳ್ಳಾಲ್ತಿ' ಅಮ್ಮನವರು ಖ್ಯಾತಿ ಪಡೆದ ಹೆಸರು. ಮಾಂಕಾಳಿ-ತಿರುಗಾಟದ ದೈವವಾಗಿರುವಂತೆ 'ಉಳ್ಳಾಲ್ತಿ' ಅಜಿಲರ, ಬ್ರಾಹ್ಮಣರ (ಪೂರ್ವದಲ್ಲಿ ಜೈನ ಅರಸು ಮನೆತನದ ದೈವ) ಕೊಂಕಣಸ್ತರ ಆರಾಧನಾ-ವಿಧಿವಿಧಾನಗಳಲ್ಲಿ ಸ್ಥಾನವನ್ನು ಪಡೆದ ದೈವ.

ಈ ದೈವದ ಆಚರಣೆಯನ್ನು 'ಮೆಚ್ಚಿ' ಎಂದು ಬಂಟವಾಳ ತಾಲ್ಲೂಕಿನ ಅನಂತಾಡಿಯಲ್ಲಿ ಕರೆದಿರುವರು. ಸಪ್ತಮಾತೃಕೆಯರ ಸಾಲಿಗೆ ಸೇರುವ 'ಉಳ್ಳಾಲ್ತಿ' ಮಾತೃಶಕ್ತಿ ದೈವಗಳಿಗೆ ಮರದ ಮುಖವಾಡ ಹಾಗೂ ಚಿನ್ನ-ಬೆಳ್ಳಿಯ ಮುಖವಾಡಗಳಿರುವುದನ್ನು ದ.ಕ. ಜಿಲ್ಲೆಯಲ್ಲಿ ಇಂದಿಗೂ ಕಾಣಬಹುದು.

ಅನಂತಾಡಿಯ ಉಳ್ಳಾಲ್ತಿಯ ಮೆಚ್ಚಿ (ಹಗಲುಕೋಲ-ಜಾತ್ರೆ ಉತ್ಸವ) ದಿನದಂದು ಈ ದೈವದ ಎರಡು ಮುಖವಾಡಗಳನ್ನು ಪರವ ಜನಾಂಗದ, ದರ್ಶನಕ್ಕೆ ಒಳಗಾಗುವ ಪಾತ್ರಿ ಧರಿಸಿಕೊಳ್ಳುವ ಸಂಪ್ರದಾಯವಿದೆ. ಮರದಲ್ಲಿ ಮಾಡಲ್ಪಟ್ಟ ಮುಖವಾಡ-ನಸುಗೆಂಪು ಬಣ್ಣದಿಂದ ಕೂಡಿರುವುದು. ಹೇಳಿಕೆಯ ಪ್ರಕಾರ ಈ ಮುಖವಾಡವನ್ನು ರಕ್ತಚಂದನ ಮರದಿಂದ ತಯಾರಿಸುವರಂತೆ. ಇದೇ ದೇವಸ್ಥಾನದ ಮೇಲಂಕಣದಲ್ಲಿ ಬಹಳ ಹಳೆಯದಾದ ಚಂದನದ ಮುಖವಾಡ ಇರಿಸಿರುವರು.[6]

'ಉಳ್ಳಾಲ್ತಿ' ದೈವದ ಮುಖವಾಡ ಧರಿಸುವ ಮುನ್ನ ಸುಮಾರು 10ರಿಂದ 12 ಅಡಿಗಳು

ಎತ್ತರದ 4ರಿಂದ 5 ಅಡಿ ಅಗಲವುಳ್ಳ ಒಂದು ಅಡಿಕೆ ಹಾಳೆಯಲ್ಲಿ ವಿನ್ಯಾಸಮಾಡಿದ ಅಣಿ (ಪ್ರಭಾವಳಿ) ನಿರ್ಮಿಸಿಕೊಳ್ಳುವರು. ಅಡಿಕೆ ಹಾಳೆಯ ಈ 'ಅಣಿ'ಯ ನಿರ್ಮಾಣಕ್ಕೆ ಪರವ ಜನಾಂಗದ ಕುಟುಂಬದವರು ಉಳ್ಳಾಲ್ತಿ-ಪಾತ್ರಿಗೆ ಸಹಾಯಕರಾಗಿರುತ್ತಾರೆ. ಇದೇ ಸಮಯ ದಲ್ಲಿ ಪಾತ್ರಿಯಾಗುವವನು ಸ್ವತಹ ಹಳದಿವರ್ಣದ ಮುಖವರ್ಣಿಕೆ ಮಾಡಿಕೊಳ್ಳುವನು. ಹಿನ್ನೆಲೆಯಾಗಿ ಆತನ ಹೆಂಡತಿ ಅಥವಾ ಮನೆಯ ಹೆಂಗಸರು ಉಳ್ಳಾಲ್ತಿಯ ಪಾಡ್ದನದ ಘಟನೆಗಳನ್ನು ಹಾಡುವ ಕ್ರಮವಿದೆ. ಬಣ್ಣ-ವಿನ್ಯಾಸದಿಂದ ನಿರ್ಮಿತ 'ಅಣಿ' ತಯಾರಾದ ನಂತರ ಸೊಂಟದ ಕೆಳಭಾಗಕ್ಕೆ ತಿರಿ (ತೆಂಗಿನ ಎಳೆಯ ಸಿರಿವೋಲಿ) ಇಳಿಬಿಟ್ಟ ನೆರಿಗೆಯ ಆಕಾರೋಪಾದಿಯಲ್ಲಿ ಧರಿಸಿಕೊಳ್ಳುವನು. ಕಾಲಿಗೆ ಗಗ್ಗರ ತೊಟ್ಟ ನಂತರ ರಕ್ತಚಂದನದ ಮುಖವಾಡವನ್ನು ದೇವಸ್ಥಾನದ ಮುಖ್ಯಸ್ತರು 'ಪರವನ' ಮಡಿಲಲ್ಲಿ ಇರಿಸುವರು. ದೇವಿಯ ಮುಖವಾಡಕ್ಕೆ ಸುಮಾರು 5ರಿಂದ 6 ಅಡಿ ಅಡಕೆ ಹಾಳೆಯಿಂದ ತಯಾರಿಸಿದ 'ಕೆನ್ನಾಲಿಗೆ'ಯನ್ನು ಜೋಡಿಸುವರು. ಈ ಕೆನ್ನಾಲಿಗೆಯಲ್ಲಿ ಅರಿಶಿನ ಮತ್ತು ಸುಣ್ಣ ಮಿಶ್ರಣ ದಿಂದ (ಕೆಂಪು ಓಕಳಿವರ್ಣ) ಬೇಕಾದ ಭಾಗಕ್ಕೆ ಲೇಪಿಸುವರು.

ಅಡಿಕೆ ಹಾಳೆಯ ಕೆನ್ನಾಲಿಗೆಯನ್ನು ರಕ್ತಚಂದನದ ಮುಖವಾಡಕ್ಕೆ (ಬಾಯಿಯ ಬಳಿ) ಸಿಕ್ಕಿ ಸುವರು. ಇದು 'ತಡ್ಪೆ ಅಣಿ'ವರೆಗೆ ಚಾಚಿಕೊಂಡಿರುತ್ತದೆ. (ಪಾತ್ರಿಯ ಸೊಂಟದ ಮುಂಭಾಗದಲ್ಲಿ 'ತಡ್ಪೆ-ಅಣಿ'ಯ ಅರ್ಧಚಂದ್ರಾಕಾರದಲ್ಲಿ ನಿರ್ಮಿಸಿದ ಅಡಿಕೆ ಹಾಳೆಯ ಮೊರವಾಗಿರುತ್ತದೆ.)

ಮುಖವಾಡವನ್ನು ಆವಾಹನೆ ಮಾಡಿಕೊಳ್ಳುವ ಮುನ್ನ ಪರವ ಪಾತ್ರಿಯು ಮನಸ್ಸಿನಲ್ಲೇ ದೇವಿಗೆ ಪ್ರಾರ್ಥನೆ ಸಲ್ಲಿಸಿ ತರುವಾಯ 'ಮುಗ' ಇಡುವಂತೆ (ಕಟ್ಟುವಂತೆ) ತನ್ನ ಸಹಾಯಕ ರಿಗೆ ಕೈಸನ್ನೆಯಲ್ಲಿ ಸೂಚಿಸುವನು.7 ಇದಾದ ನಂತರ ಆತನ ಎರಡೂ ಕೈಗೆ ಉರಿಯುವ ಸೂಟೆಗಳನ್ನು ಕೊಡುವರು. ಇನ್ನೂ ಆವೇಶ ಹೆಚ್ಚುವುದು. ದೈವದ ಸ್ಥಾನದ ಸುತ್ತ ಮೂರು ಬಾರಿ ಬಲಿ (ಪ್ರದಕ್ಷಿಣೆ) ಬರುವಲ್ಲಿ ನಾಗಸ್ವರ, ಡೋಲು, ಮುಂತಾದ ವಾದ್ಯ ಮೇಳವಿರುತ್ತದೆ. ಈ ಸಂದರ್ಭದಲ್ಲಿಯೇ ಕೊರಗರು ದೈವ ಸ್ಥಾನದ ಹೊರಗೆ ನಿಂತು ಡೋಲುಗಳು, ಕೊಳಲು (ಅವರದೇ ಮೇಳ) ಬಾರಿಸುವರು.8

ಹೀಗೆ ರಕ್ತಚಂದನದ ಮುಖವಾಡದ ಬಲಿಯ ನಂತರ ಬೆಳ್ಳಿಯ ಮುಖವಾಡವನ್ನು ಧರಿ ಸುವ ಕ್ರಮವಿದೆ (ಅನಂತಾಡಿಯಲ್ಲಿ). ಈ ವೇಳೆಗೆ ಅಂದರೆ 'ಬಲಿ'ಯಲ್ಲಿ, ದೇವಸ್ಥಾನದ ಸುತ್ತಾ ಹೆಂಗಸರು ಇರುವಂತಿಲ್ಲ. ಬೆಳ್ಳಿಯ ಮುಖವಾಡದಲ್ಲಿ ಅಮ್ಮನವರನ್ನು ಅವರಾರೂ ನೋಡಬಾರದೆಂಬ ನಿಯಮವಿದೆ.9

ಈ ಬೆಳ್ಳಿಯ ಮುಖವಾಡದಿಂದ ಪಾತ್ರಿಯ ಆವೇಶವು ಇಮ್ಮಡಿಸುತ್ತದೆ. ನ್ಯೈನಡುಕ ಆರ್ಭಟಗಳು ತೀವ್ರವಾಗುತ್ತವೆ. ಸಂಪೂರ್ಣ 'ಅಣಿ' ಹೊತ್ತಾಗಲಂತೂ ಈ ದೃಶ್ಯದಲ್ಲಿ ರೌದ್ರತೆಯ ಛಾಯೆಯು ಸೃಷ್ಟಿಯಾಗುವುದು.10

ಮಂಗಳೂರಿನ ಭಾಗದ ಕಾಂಞಗಾಡು-ದೇವಸ್ಥಾನದ ಉಳ್ಳಾಲ್ತಿಯನ್ನು 'ಕೆಂಪು ಉಳ್ಳಾಲ್ತಿ'

ಎನ್ನುವದಿದೆ. ಇಲ್ಲಿ ರಕ್ತ-ಚಂದನದ ಮುಖವಾಡವೂ ಇದೆ. ಚಿತ್ತಾರಿ ಗ್ರಾಮದ(ಪಯ್ಯಾವಳಿಕೆ-ಕಾಸರಗೋಡು ತಾಲೂಕು) ಉಳ್ಳಾಲ್ತಿಗೆ ಚಿನ್ನದ ಮುಖವಾಡವಿದೆ. ಇಲ್ಲಿಯ ಉತ್ಸವದಲ್ಲಿ ಮುಖವಾಡ ಹಿಡಿದಾತನಿಗೆ ಆವೇಶ(ಶಕ್ತಿ ಸಂಚಾರ) ಬರುವುದು. ಇಲ್ಲಿ ವಕ್ಕಣಿಕೆ ನೀಡುವ ಕ್ರಮವಿದೆ. ಈ ಚಿನ್ನದ ಮುಖವಾಡ ಧರಿಸಿಕೊಳ್ಳುವಾತ ಕೆಳವರ್ಗದ ಪಂಬದ ಜನಾಂಗಕ್ಕೆ ಸೇರಿದವನು.

ದೈವ ಕಾರ್ಯ ಹಂಚಿಕೊಳ್ಳುವಲ್ಲಿ ಇಂದಿಗೂ ಮೂರು ವರ್ಗದವರೂ ಪ್ರಮುಖವಾಗಿ ಕಾರ್ಯ ಸೇವೆಯಲ್ಲಿ ತೊಡಗಿದವರಾಗಿರುತ್ತಾರೆ. ಮೊದಲ ಕೈ ಬಿಲ್ಲವರ ಸ್ವಾಧೀನದಲ್ಲಿದ್ದು ಎರಡನೆಯದು ಶೆಟ್ಟರ ಮುಕ್ತೇಸರ ಆಡಳಿತಕ್ಕೆ ಸೇರಿದ್ದು ಇದೀಗ ಡಾ. ಎಂ.ಪಿ. ಪೈ ಜನಾಂಗಕ್ಕೆ 'ಮೆಚ್ಚಿ' ನಡೆಸುವ ಹೊಣೆ ಸೇರಿದೆ. ಪೈ ಜನಾಂಗದವರು ಆಡಳಿತಗಾರರಾಗಿದ್ದು ಪೂಜೆ-ದರ್ಶನಗಳಿಗೆ ಗೌಡ ಜನಾಂಗದವರು ಪೈಗಳ ಪರವಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಒಟ್ಟಿನಲ್ಲಿ ನಾಲ್ಕು ಪಂಗಡಗಳಿಂದ ಸೇವಾಕಾರ್ಯದ ಹೊಣೆ ನೆರವೇರುತ್ತಾ ಬಂದಿದೆ. ದೇವಿಯ ಆವಾಹನೆ, ದರ್ಶನ ತಂತ್ರ-ಕೆಳವರ್ಗದ ಪರವ ಜನಾಂಗಕ್ಕೆ ವಂಶಪಾರಂಪರ್ಯದಿಂದ ಮೀಸಲಾಗಿದೆ.

ಅನಂತಾಡಿಯ ಉಳ್ಳಾಲ್ತಿಯ 'ಮೆಚ್ಚಿ'-ಆಚರಣೆಯಲ್ಲಿ ಲೋಹ ನಿರ್ಮಿತ ಪಂಜುರ್ಲಿಯ ಮುಖವಾಡವಿದೆ. ಅಲ್ಲದೆ ಸಕಾಲದಲ್ಲಿ ಪಂಜುರ್ಲಿ ದೈವಕ್ಕೂ ಪೂಜೆ ಪಲ್ಲಕಿ ಮೆರವಣಿಗೆ ಸಲ್ಲುವುದು. ಉಳ್ಳಾಲ್ತಿ-ಮುಖವಾಡ ಧರಿಸಿಕೊಳ್ಳುವ ಪರವ ಪಾತ್ರಿ ತನ್ನ ದೇಹಕ್ಕೆ ಲೋಹದ ಎದೆಕಟ್ಟುಗಳಿಂದ ಸಿಂಗರಿಸಿಕೊಳ್ಳುವನು. ಅಲ್ಲದೆ ಚಿನ್ನದ-ಬೆಳ್ಳಿಯ ಆಭರಣಗಳು ಶೃಂಗಾರದ ವಸ್ತುಗಳೂ ಆಗಿವೆ. ಇದು ಸಾಂಪ್ರದಾಯಿಕವಾದ ಕ್ರಮವೂ ಆಗಿದೆ.

## ಎರಡು

ದ.ಕ, ಜಿಲ್ಲೆಯ ಅನೇಕ ಭಾಗಗಳಲ್ಲಿ ಪಿಲಿಚೌಂಡಿ ಅಥವಾ ಪಿಲಿಚಾಮುಂಡಿ ಎಂಬ ದೈವದ ಕೋಲ, ನೇಮಗಳು-ವಿಶಿಷ್ಟತೆಯಿಂದ ಕೂಡಿದೆ. ಇದರಲ್ಲಿ ಲೋಹದ ಮುಖವಾಡವನ್ನು ಪೂಜಿಸಿ, ಕ್ರಮಪ್ರಕಾರ 'ಅಣಿ' ಧರಿಸಿ(ಪಾಣಾರ ಜನಾಂಗದ ಪಾತ್ರಿ) ಮುಖವಾಡವನ್ನು ತಲೆಗೆ ಏರಿಸಿಕೊಂಡು 'ಬಲಿ' ಬರುವದಿದೆ.12 ಕೆಲವೆಡೆ ಅಡಿಕೆ ಹಾಳೆಯ ಮುಖವಾಡಗಳನ್ನು ದೈವದ ಸಂಕೇತವಾಗಿ ಬಳಸುವರು. (ಉದಾ: ಕಾಪು-ಪಿಲಿಭೂತ, ದ.ಕ., ಉಡುಪಿ ತಾಲೂಕು)

ಪಿಲಿ ಚೌಂಡಿ-ಸ್ತ್ರೀ ಶಕ್ತಿ ಹಾಗೂ ಪ್ರಾಣಿ ಶಕ್ತಿಯ ಸಂಕೇತ. ಇದರಲ್ಲಿ ಮರದ ಹುಲಿ ಅಥವಾ ಲೋಹದ ಮುಖವಾಡ ಇರುತ್ತದೆ. ಕರಾವಳಿಯಲ್ಲಿ ಪಂಜುರ್ಲಿ (ಹಂದಿ), ಪಿಲಿ (ಹುಲಿ), ಮಹಿಷ(ಕೋಣ)-ಇವು ವಿಶಿಷ್ಟ ದೈವಗಳಾಗಿ ಪೂಜೆ ಕೊಳ್ಳುತ್ತವೆ. ಇವು ಭೂತಾರಾಧನೆಯ ಸಹಾಯಕ ಗಣದೈವಗಳಾಗಿರುವುದನ್ನೂ ಗಮನಿಸಬಹುದು. ಬಹುತೇಕ ಭಾಗಗಳಲ್ಲಿ ಪ್ರಾಣಿ ದೈವದ ಮುಖವಾಡವು ಅಡಿಕೆ ಹಾಳೆಯಿಂದ ಆಗುತ್ತದೆ. ಕೋಲ, ನೇಮ ಆಚರಣೆಗಳಿಗೆ ಇವು ಸಲ್ಲುತ್ತವೆ.

ಪಿಲಿ ಭೂತಕ್ಕೆ ಸಂಬಂಧಿಸಿದಂತೆ ಪರೋಕ್ಷವಾಗಿ ನರಬಲಿಯ ಆಚರಣೆ ಹಾಗೂ 9 ದಿನಗಳ ಕೋಲವಿದೆ. ಈ ಕೊನೆಯ ದಿನದ ಪಿಲಿಭೂತದ ಕೋಲವು ಭಯಾನಕವೂ, ಕುತೂಹಲ ಕಾರಿಯೂ ಆಗಿದೆ.13 ಇಲ್ಲಿ ಆವೇಶಗೊಳ್ಳುವ ಪಾತ್ರಿಯು ಅಡಿಕೆ ಹಾಳೆಯ ಹುಲಿಯ ಮುಖವಾಡ ಧರಿಸಿಕೊಳ್ಳುವ ಕ್ರಮವಿದೆ. ಈತ ನಲಿಕೆ ಜನಾಂಗದವ(ನಲ್ಕೆ-ತುಳು) ಒಂಬತ್ತನೇ ದಿನದ ಕೋಲದಲ್ಲಿ ಈತನು ಹುಲಿವೇಷದ ಬಣ್ಣ-ಹಚ್ಚಿಕೊಂಡು ಹುಲಿಯಂತೆ ಹೂಂಕರಿಸುತ್ತಾ/ಘರ್ಜಿಸುತ್ತಾ ಪಿಲಿ ಚೌಂಡಿ ಸ್ಥಾನದಲ್ಲಿ 'ಬಲಿ' ಬರುವುದಿದೆ' ಅಡಕೆ ಹಾಳೆಯ ಮುಖವಾಡಧರಿಸಿ ಜನರನ್ನು ಅಟ್ಟಿಸಿಕೊಂಡು ಹೋಗಿ ಸ್ಪರ್ಶಿಸುವುದೂ ಇದೆ. ಹಾಗೆ ದೈವದ ಆವೇಶದಲ್ಲಿ ಸ್ಪರ್ಶಿಸಿಕೊಂಡಾತ ಎರಡು ವರ್ಷಗಳ ಅವಧಿಯಲ್ಲಿ ಮರಣಹೊಂದುತ್ತಾನೆ.14 ಆದುದರಿಂದ ಪಿಲಿ ಭೂತ ಅಟ್ಟಿಸಿಕೊಂಡು ಬಂದಾಗ ನೆರೆದ ಜನ ದಿಕ್ಕಾಪಾಲಾಗುತ್ತಾರೆ. ಇದರ ಸೊಂಟಕ್ಕೆ ಹುರಿಹಗ್ಗ ಬಿಗಿದು ಕಟ್ಟಾಳುಗಳು ನಿಯಂತ್ರಿಸುತ್ತಾರೆ. ಆದರೂ ಯಾರಾದರೂ ಸಿಕ್ಕಿಬಿದ್ದಲ್ಲಿ ಪಿಲಿಭೂತ ಸ್ಪರ್ಶಿಸಲೇ ಬೇಕು. ಇದು ನಿಯಮ. ಇದನ್ನು ಭೂತದ ಶಾಪವೆಂದೇ ಭಾವಿಸಲಾಗಿದೆ.

ಇಲ್ಲಿ ಪಿಲಿಭೂತದ ಕಾರ್ಯಾಚರಣೆ, ವಿಧಿವಿಧಾನಗಳನ್ನು ಗಮನಿಸಿದಾಗ ಪೂರ್ವ ನಿರ್ಧಾರಿತ ನಂಬಿಕೆ-ಸಾಯುವುದು ಖಚಿತ, ಎಂಬ ಮನೋದೌರ್ಬಲ್ಯವೂ ಪರಿಣಾಮಕಾರಿಯಾಗಿ ಒಂದು ಬಗೆಯ ಆಕಸ್ಮಿಕ ಸಂಬಂಧದಂತೆ ಕೆಲಸಮಾಡಬಹುದಾಗಿದೆ. ಇದಕ್ಕೆ ಹಲವು ದಂತ ಕಥೆಗಳೂ ದೊರಕುತ್ತಿವೆ. ಇಂತಹ ಭಯಕ್ಕೆ ನರಬಲಿಯು 'ಶಾಂತಿ'ಯೆನ್ನುವುದಾದರೆ ಇದೂ ನರಬಲಿಯ ಉದಾಹರಣೆಯಾಗುತ್ತದೆಯಷ್ಟೆ ?

ಈ ಸಂದರ್ಭದಲ್ಲಿ ಈ ಪಾತ್ರಿಯು ಯಾರನ್ನೂ ಮುಟ್ಟಲಾಗದೇ ಹೋದಲ್ಲಿ ಅವನಿಗಾಗಲಿ, ಅವನ ವಂಶಕ್ಕಾಗಲಿ ಮರಣದ ಆತಂಕ ತಟ್ಟುತ್ತದೆ. ಆದುದರಿಂದ ಈ ಪಾತ್ರಿಯ ಮಾನಸಿಕ ಸ್ಥಿತಿ ಕೂಡ ಸೂಕ್ಷ್ಮವಾದುದಾಗುತ್ತದೆ. ಇಂತಹ ಪರಿಸ್ಥಿತಿಯು ಕಾಪು-ಮಾಗಣೆಯಲ್ಲಿ ಜರುಗುವ ಪಿಲಿ ಭೂತದ ಆಚರಣೆಯು ವಿಶಿಷ್ಟವಾಗಿದೆ.

ಪಿಲಿ ಭೂತದ ಪಾತ್ರಿ ಹಾಗೂ ಆತನ ಇಬ್ಬರು ಸಹಾಯಕರು ಪಿಲಿ ಸ್ಥಾನದ ಬಳಿ ಬಿಳಿ ಬಟ್ಟೆಯ ಮುಸುಕಿನಲ್ಲಿ ಹಾಜರಾಗಬೇಕು. ಏಕೆಂದರೆ, ಅವರನ್ನು ಯಾರೂ ನೋಡಬಾರದು-ಎಂಬ ನಂಬಿಕೆಯಿದೆ. ಇಂತಹ 'ಮುಸುಕಿ'ನಲ್ಲಿಯೇ ಆವೇಶ ಬರುತ್ತದೆ. ಹಾಗೆಯೇ(ಬಿಳಿ ಬಟ್ಟೆಯ ಮುಸುಕಿನಲ್ಲಿಯೇ) ಸ್ನಾನಕ್ಕೆ ಕಳುಹಿಸುವರು. ನಂತರವೂ ಬಿಳಿಬಟ್ಟೆಯ ಮುಸುಕಿನಲ್ಲಿಯೇ ಆಚರಣೆಯು ಮುಂದುವರಿಯುವುದು. ಬೈರ ಅರಸ ಗುತ್ತಿನ ಮನೆಯವರು ಬಸವನನ್ನು(ಮುಂಡು-ತುಳು) ಹಗ್ಗದಲ್ಲಿ ಹಿಡಿದು ಪಾತ್ರಿಯ ಮುಂದೆ ನಿಲ್ಲಿಸುವರು. ಆಗ ಹಗ್ಗದ ಒಂದು ತುದಿಯನ್ನು ಪಿಲಿ ಭೂತದ ಪಾತ್ರಿಯ ಮೇಲೆ ಬೀಸಾಡುವ ಕ್ರಮವಿದೆ. ಹೀಗೆ ಮಾಡಿದಾಗ ಪಾತ್ರಿಯು(+ಇಬ್ಬರೂ ಸಹ) ತಮ್ಮ ತಮ್ಮ ಮುಸುಕನ್ನು ಒಗೆದು ಹತ್ತಿರದವರನ್ನು ಪಾತ್ರಿಯು ಮುಟ್ಟಲು ನುಗ್ಗುವುದು-ಆಗುತ್ತದೆ. ಹೀಗೆ ನರಬಲಿಯ ಬದಲು ಪ್ರಾಣಿಯು ಬಲಿಯಾಗುತ್ತದೆ. ಅದನ್ನು ನಲಿಕೆಯವರಿಗೆ ಸಾಮಾನ್ಯವಾಗಿ ದಾನ ಮಾಡಲಾಗುತ್ತದೆ. ಅದೂ ಮನುಷ್ಯನಂತೆಯೇ ಶಾಪಗ್ರಸ್ತವಾಗುವುದೆಂಬ ಸೋಜಿಗ

ಉಳಿದುಬಂದಿದೆ. ಇದನ್ನು 'ಪಿಲಿ ಭೂತಗು ಮುಂಡುಆಹಾರ'(ತುಳು) ಎಂದು ಹೇಳುತ್ತಾರೆ.

'ಮುಂಡು'ವಿನ ಹಗ್ಗ ಬೀಸಾಡಿದ ತರುವಾಯ ಸಂಪ್ರದಾಯದಂತೆ ಆ ಪಾತ್ರಿಯ ಹೆಂಡತಿಯು ಎದುರಾಗಿ ಅಡ್ಡಬೀಳುತ್ತಾಳೆ. ಆಗ ಆಕೆಯ ಮುತ್ತೈದೆತನದ ಅಂಶಗಳನ್ನು ಕಳೆಯಲಾಗುತ್ತದೆ(ಕುಂಕುಮ, ಬಳೆ, ಬಿಚ್ಚಾಲೆ, ನತ್ತು, ತಾಳಿ-ಮಾಂಗಲ್ಯ). ಇದು, ಆಗ ದೈವಕ್ಕೆ(ಪಾತ್ರಿಗೆ) ಯಾರೂ ಸಿಕ್ಕದಿದ್ದಲ್ಲಿ ಗಂಡನ ಸಾವಿನ ಮುನ್ನಿನ ಆಚಾರವಾಗಿದೆ. ಆದರೆ ಈ ಸಂಪ್ರದಾಯದ ಆಚರಣೆಯನ್ನು ಪಿಲಿ ಸ್ಥಾನದ ಎದುರು ನಡೆಸುವುದಿಲ್ಲ-ಅಷ್ಟೆ.15

ಬಿಳಿಬಟ್ಟೆಯ ಬಿಡುಗಡೆಯಾದಮೇಲೆ ಆತನ ಸಹಾಯಕರು ಆತನನ್ನು 'ಪೊಲಿಮದೆ'ಗೆ (ತೆಂಗಿನ ತಿರಿಯಲ್ಲಿ ನಿರ್ಮಿಸಿದ ಕುಟೀರಕ್ಕೆ) ಕರೆದೊಯ್ಯುವರು. ಅಲ್ಲಿ ಪಾಡ್ದನ ಹೇಳುವ ಕ್ರಮವಿದೆ. ಅಲ್ಲದೆ ಹುಲಿಯನ್ನು ವೇಷಗೊಳಿಸುವ ಕಾರ್ಯ ಸಾಗುವುದು. 'ಪೊಲಿಮದೆ'- ಇದು ಆಕಾರದಲ್ಲಿ ಚಚೌಕವಾಗಿದ್ದು ಹುಲಿಯ ಪಂಜರದಂತೆ ನಿರ್ಮಾಣವಾಗಿರುತ್ತದೆ. ಪೂರ್ಣವೇಷವಾದ ನಂತರ ಗರ್ಜನೆಯೊಂದಿಗೆ ಹುಲಿಯ ಮುಖವಾಡ ಧರಿಸಿದಾತನಿಗೆ (ಪಾತ್ರಿಗೆ) ದೀಪ-ಧೂಪ ಬೆಳಗುವರು. ಅಲ್ಲಿಂದ ಕೂಡಲೆ ನೆರೆದಿದ್ದ ಜನ ದಿಕ್ಕಾಪಾಲಾಗಿ ಓಡಲು ಪ್ರಾರಂಭಿಸುವರು. ಕಾರಣ-ಹುಲಿವೇಷದ ಭೂತದ ಕೈಗೆ ಸಿಗಬಾರದೆಂಬ- ಭೀತಿಯಿಂದ.

ಕಂಗಾಲಾಗಿ ಓಡುವ ಜನರನ್ನು ಅರಸಿಕೊಂಡು ಹೋಗುವ ಮುನ್ನ ಪಿಲಿ ಭೂತವು ನೇರ ವಾಗಿ ಅಡಿಕೆ ಹಾಳೆಯ ಮುಖವಾಡ ಧರಿಸಿಕೊಂಡು 'ಬಂಟಕಂಬ'ದ ಜಾಗಕ್ಕೆ ಹೋಗು ವುದು. ಪೂರ್ವನಿರ್ಧರಿತ ಸ್ಥಳದಲ್ಲಿ ಬಾಳೆಯ ಕಂಬಕ್ಕೆ ತೆಂಗಿನ ತಿರಿಯನ್ನು ಅಲಂಕರಿಸಿ ಅದರೊಳಗೆ ಒಂದು ಕೋಳಿಯನ್ನು ಅಡಗಿಸಿಟ್ಟಿರುತ್ತಾರೆ. ಮುಖವಾಡಹೊತ್ತ ಹುಲಿ ದೈವ ಆವೇಶದಲ್ಲಿ 'ಬಂಟಕಂಬ' ಬೀಳಿಸಿ ಕೋಳಿಯನ್ನು ಹಿಡಿದು ಅದರ ಹಸಿಮಾಂಸ ತಿನ್ನುವಲ್ಲಿ ರಕ್ತ ಹೀರುವುದು. (ಸಿಗಿದು ತಿನ್ನುವುದೂ ಉಂಟು). ಹೀಗೆ ರಕ್ತ ಹೀರಿದ ಹುಲಿ ತನ್ನ ನರಬೇಟೆಗೆ ಹೊಂಚುಹಾಕುತ್ತಾ ನಿರ್ದಿಷ್ಟ ಗಡಿಯೊಳಗೆ ತಿರುಗಾಡುವುದು.

ಹುಲಿ ದೈವವು ರಕ್ತಾಹಾರ ಪಡೆದ ನಂತರ ತನ್ನ ಮುಖವಾಡವನ್ನು ಬಂಟಕಂಬದ ಬಳಿಯೇ ತೆಗೆದಿರಿಸುವುದು. ಇಲ್ಲಿ ಬಹು ಹಿಂದೆ ಹುಲಿ ಪಾತ್ರಿಯಿಂದ ನರಬೇಟೆ ಜರುಗುತ್ತಿತ್ತೇ ? ಹೇಗೆಂಬ ಅನುಮಾನ ಹುಟ್ಟಲೂಬಹುದು. ಆ ದೈವವು ಸಂಜೆ ಐದರ ಒಳಗೆ ಯಾರ ನ್ನಾದರೂ ಮುಟ್ಟಲೇಬೇಕು. ಈ ಬಾರಿ 16ನೆಯ ಕೋಲದಲ್ಲಿ ಮುಂಬಯಿಂದ ಬಂದಿದ್ದ ಒಬ್ಬ ಯುವಕನು ಸಿಕ್ಕಿಬಿದ್ದ ವದಂತಿಯಾಗಿದೆ.

ಪಿಲಿ ಭೂತವು ಸ್ಪರ್ಶಿಸಿದ ಕೂಡಲೆ ಎಲ್ಲಿಯೂ ನಿಲ್ಲದೆ ಪಿಲಿ ಚೌಂಡಿ ಸಾನಕ್ಕೆ ಹಿಂತಿರುಗಿ ಶರಣಾಗುವುದು. ಸಾನ (ಸ್ಥಾನ)ದ ಬಳಿ ಬಂದಾಗ ' ಕೋರಿ-ತಾರಾಯಿ" (ಕೋಳಿ ಮತ್ತು ತೆಂಗಿನಕಾಯಿ) ಮಾರಿ ಗುಡಿ ಬಳಿ ನೀಡುವರು. ತೆಂಗಿನಕಾಯಿ ಒಡೆದ ನಂತರ ಕೋಳಿ ಯನ್ನು ಕಚ್ಚಿ ರಕ್ತಹೀರಿ, ನಂತರವೂ ಕಚ್ಚಿಕೊಂಡೇ ತೂಗಾಡಿಸಿಕೊಂಡು ಪಿಲಿ ಚೌಂಡಿ- ಜಾಗದ ಎದುರು ಬರುವುದು. ಬಾಯಲ್ಲಿ ಕಚ್ಚಿ ಹಿಡಿದ ಕೋಳಿಯ ದೇಹವನ್ನು ಅಲ್ಲಿಯೇ

ಹುಲಿಯಂತೆ ಬೀಸಾಡುವುದು. ಹಾಗೆ ಬೀಸಾಡಿದಾಗ ಎಷ್ಟು ದೂರವೋ ಅಲ್ಲಿಯವರೆಗೂ ಪಾತ್ರಿಯು ಹೋಗಿ ಸ್ನಾನದವರೆಗೂ ಸಿಕ್ಕಂತಹವರನ್ನು ಸ್ಪರ್ಶಿಸುವುದು. ಈ ಸಂದರ್ಭ ದಲ್ಲೂ ಸಿಕ್ಕಿಕೊಂಡವನಿಗೆ ಸಾವಿನ ಶಾಪವಿದೆ. ಇನ್ನು ಮುಂದೆ ಪಿಲಿ ಸಾನದ ಎದುರು ಹಲಸಿನ ಎಲೆಯ ಚಾಪೆ (ಹಲಸಿನ ಎಲೆಯ ರಾಶಿ)ಯ ಮೇಲೆ ಬೋರಲಾಗಿ ಇಡೀ ರಾತ್ರಿ ಒಬ್ಬಂಟಿಯಾಗಿ ಮಲಗುವನು. ಆಗ 'ಪಿಲಿ ಚೌಂಡಿ'ಯ ಪಾಡ್ದನ ಹಾಡುವ ಕ್ರಮವಿದೆ. ಮಧ್ಯರಾತ್ರಿಗೆ ಒಂದು ಬಾರಿ ಆತನು ಗರ್ಜಿಸಿ ಮಗ್ಗುಲು ಬದಲಾಯಿಸಿ ಮಲಗಿಕೊಳ್ಳು ವನು. ಪೂರ್ಣಪಾಡ್ದನ ಕೇಳಿದ ತರುವಾಯ ಪಿಲಿ ಭೂತದ ಆವೇಶ ಕಳೆದು ಸಾದಾ ಸ್ಥಿತಿಗೆ ಬರುವುದು.

ಪಿಲಿ ಭೂತ ಕಟ್ಟಿದವನ ಹೆಂಡತಿಗೆ ಮತ್ತೆ ಬಳೆ, ಸೀರೆ, ಮಾಂಗಲ್ಯ ನೀಡಿ, ಮುತ್ತೈದೆತನ ಕೊಡುವರು.17

## ಮೂರು

ದ.ಕ. ಜಿಲ್ಲೆಯ ತೆಂಕುನಾಡಿನ ಭಾಗದಲ್ಲಿ ಎರು-ಕೋಲ, ಸಾಮಾಜಿಕವಾಗಿ ಬಂಟರ ಹಾಗೂ ಬಿಲ್ಲವರಲ್ಲಿ ಜರುಗುವ ಒಂದು ಪ್ರಾಣಿ ದೈವದ ಆಚರಣೆ. 'ಎರು' ಎಂದರೆ ಜಾನುವಾರು. ಹೋರಿ ಮತ್ತು ಕೋಣಗಳೆರಡನ್ನೂ 'ಎರು' ಎಂದು ಕರೆಯುವ ವಾಡಿಕೆ ಇವರಲ್ಲಿದೆ. 'ಗಿಡ್ಡೆರು' ಎಂಬುದನ್ನು ಕುದ್ಕಾಡಿ ವಿಶ್ವನಾಥ ರೈ ಅವರು ಕಂಬಳದಲ್ಲಿ ಓಡಿಸುವ ಕೋಣ ಎಂದೇ ಅರ್ಥೈಸಿದ್ದಾರೆ. ಆದುದರಿಂದ ಎರುಕೋಲ-ವು ಎತ್ತಿನ ಮುಖವಾಡ ಧರಿಸಿದ ಕಂಬಳ, ಸ್ಮಶಾನಯಾತ್ರೆ, ಭೂತಾರಾಧನೆಗಳಂತಹ ಸಾಮಾಜಿಕ-ಧಾರ್ಮಿಕ ಆಚರಣೆಗಳಲ್ಲಿನ ಪಾತ್ರ-ಎನ್ನಬಹುದು. ಈ ಕೋಲದ ಪಾತ್ರಿಯು ನಲ್ಕೆ ಜನಾಂಗದವನು. ಅಡಿಕೆ ಹಾಳೆ ಯಿಂದ ತಯಾರಿಸಿದ ಮುಖವಾಡ, ತೆಂಗು-ಕಂಗುಗಳ ಹಾಳೆ, ಸಿರಿ (ತೆಂಗಿನ ಸಿರಿ) ಅಲಂಕಾರ ಗೊಂಡು ಗೆಜ್ಜೆ ಅಥವಾ ಗಗ್ಗರ ಧರಿಸುವುದನ್ನು ಕಂಬಳ ಹಾಗೂ ಬಂಟ ಮನೆತನದವರು ನಡೆಸುವ 'ಪೂಕರೆ'18 ಆಚರಣೆಯಲ್ಲಿ ಕಾಣಬಹುದಾಗಿದೆ.

ದ.ಕ. ಜಿಲ್ಲೆಯ ಬೇಸಾಯದ ಆಚರಣೆಯಲ್ಲಿ ಗದ್ದೆಗೆ ಬಾಳೆ ಹಾಕುವ ಕ್ರಮವಿದೆ, ತುಳು ವಿನಲ್ಲಿ ಇದನ್ನು 'ಬಾರೆಪಾಡುನಿ' ಎನ್ನುತ್ತಾರೆ. ಇಂತಹ ಆಚರಣೆಯಲ್ಲಿ 'ಎರುಕೋಲ' ಜರುಗುತ್ತದೆ.

ಈ ಎರುಕೋಲ-ಎಂಬ ದೈವವೇ 'ಮೈಸಂದಾಯ', 'ನಂದಿಗೋಣ'-ಇವುಗಳ ಸಂಕೇತ ವಾಗಿರುವುದನ್ನು ಭೂತಕೋಲಗಳಲ್ಲಿ ಕಾಣಬಹುದಾಗಿದೆ.

ಎರುಕೋಲದ ಇನ್ನೊಂದು ರೂಪ 'ಸನ್ನಿಕೋಲ' ಅಥವಾ 'ಕಾಲೆಕೋಲ'. ಬಾಣಂತಿ ಯರಿಗೆ ಬರುವ 'ಸನ್ನಿ'ಯ ನಿವಾರಣೆ ಮಾಡುವ ಚಿಕಿತ್ಸಾ ರೂಪದ ಕೋಲ-ಇಲ್ಲಿಯೂ ನಲ್ಕೆಯವರ ಪಾತ್ರ ಮುಖ್ಯ, ಕಾಲೆ-ಎಂಬುದು ಕಪ್ಪು ಬಣ್ಣವನ್ನು ಪ್ರತಿನಿಧಿಸುವುದು. ಇದರ ಪಾತ್ರಿಯು ಕೋಣನಂತೆ ಅರುಚುವ ಧ್ವನಿಯಿಂದ 'ಎರುಕೋಲ'ವು ಇಲ್ಲಿ ಇನ್ನೊಂದು ರೂಪ ತಾಳಿದಂತೆ ಆಗುತ್ತದೆ.

ದೊಡ್ಡಮನೆತನದವರು (ಬಂಟರು-ಜೈನರು) 'ದೂಪೆ' (ಸ್ತೂಪ) ಕಟ್ಟಿಸಿ, ಸತ್ತವರಿಗೆ ಸ್ವರ್ಗ ಸೇರಿಸುವ ಸಂಸ್ಕಾರದ ಆಚರಣೆಯಲ್ಲಿ ಎರುಕೋಲ-ದ ಪಾತ್ರಣವಿದೆ. ಎರುಕೋಲ ಅಥವಾ ಕಾಲೆಕೋಲವು 'ದೂಪೆ' ಆಚರಣೆಯ ಮೆರವಣಿಗೆಯಲ್ಲಿ ಮೊದಲಲ್ಲಿರುತ್ತದೆ. ಅದರ ಹಿಂದೆ ವಾಲಗ, ಊರವರು, ಸಾವಲರು (ಸೂತಕದವರು) ಜೊತೆಗೂಡಿ ದೂಪೆಯ ಸುತ್ತ ಅಲಂಕರಿಸುವರು. ಅಲ್ಲಿಯೇ ಒಂದು ಜೊತೆ ಎತ್ತನ್ನು ನೇಗಿಲಿಗೆ ಕಟ್ಟಿ ಅಪ್ರದಕ್ಷಿಣೆ ಯಾಗಿ ಭೂಮಿಯನ್ನುತ್ತು 'ಹಣ' ಬಿತ್ತುತ್ತಿದ್ದರಂತೆ.[19]

ಬಹುಶ ಎರುಕೋಲ, ಮೈಸಂದಾಯ, ನಂದಿಗೋಣ-ಈ ಪ್ರಾಣಿ ಶಕ್ತಿಗಳು ಜೀವ ಸಂರಕ್ಷಕರಾದ ಕಾರಣ ದೈವರೂಪಗಳೆಂದು ಪರಿಗಣಿಸಿದಂತಿದೆ. ಕೃಷಿ ಪ್ರಧಾನವಾದ ಇವ ರಲ್ಲಿ (ತುಳುವರು) ಪ್ರಾಣಿಶಕ್ತಿಗಳ ಆರಾಧನೆಯೂ ರೂಢಿಗೆ ಬಂದಿದೆ. ಆದುದರಿಂದ 'ಕಂಬಳ'-ದಂತಹ ಕ್ರೀಡೆ ಮತ್ತು ಎರುಕೋಲವು ಕರಾವಳಿ ಜನತೆಗೆ ಹುಟ್ಟು-ಸಾವಿನ ಆಚರಣೆಗಳಲ್ಲಿ ಪ್ರಾತಿನಿಧಿತ್ವವನ್ನು ಪಡೆದುಕೊಂಡಿವೆ-ಎನ್ನಬಹುದು.

**ಗುಳಿಗ:** ಎಂಬುದು ರಕ್ಷಕ ಹಾಗೂ ಭಕ್ಷಕ ಗಣಶಕ್ತಿ. ಸತ್ತವರ ಪ್ರೇತಾತ್ಮಗಳು ಈ ಗುಳಿಗನ ಕೈವಶವಾಗಿದ್ದರೆ ಬಿಡುಗಡೆಗೊಳಿಸುವುದಕ್ಕೆಂದು ಆಚರಣೆಗಳು ತುಳುನಾಡಿನಲ್ಲಿವೆ. ಈ ಗುಳಿಗನ ಕೋಲದಲ್ಲಿಯೂ ಮುಖವಾಡದ ಬಳಕೆಯಿರುವುದು ಮತ್ತೊಂದು ಗಹನ ವಿಚಾರವೂ ಆದೀತು.

ಕಾಸರಗೋಡು-ಗಡಿಭಾಗಗಳಲ್ಲಿ ಪ್ರತಿಯೊಬ್ಬ ಕೃಷಿಕನ ಮನೆಯಲ್ಲೂ 'ಗುಳಿಗ' ದೈವದ ಉತ್ಸವ ಅಥವಾ ನೇಮ ನಡೆಯುವ ಸಂಪ್ರದಾಯವಿದೆ. (ಪಂಪಭಾರತದಲ್ಲಿ 'ದುರ್ಯೋಧನಂ ದಾಡೆಗಳೆದ ಕುಳಿಕನಂತೆಯುಂ'-ಆಶ್ವಾಸ 7, ವಚನ 39-ಎಂದು ಹೇಳಿರುವುದನ್ನು ವಿದ್ವಾಂಸರು ಸರ್ಪ = ಕುಳಿಕಂ ಎಂದು ಅರ್ಥೈಸಿದ್ದಾರೆ. ಆದುದರಿಂದ ಕುಳಿಕ =ಗುಳಿಗ ಎಂದೂಹಿಸಿದಲ್ಲಿ ತಪ್ಪಾಗಲಾರದು)

## ನಾಲ್ಕು

**ಜಾಲಾಟ ಮತ್ತು ಮುಖವಾಡ :** ಕರಾವಳಿಯ ದಕ್ಷಿಣ ಭಾಗದ ಬೆಳ್ತಂಗಡಿ-ಸುಳ್ಯ, ತಾಲೂಕಿನಲ್ಲಿ ಭೂತಾರಾಧನೆಯ ಮತ್ತೊಂದು ಪ್ರಕಾರ **ಜಾಲಾಟವು** ರೂಢಿಯಲ್ಲಿದೆ.[20] ಇಲ್ಲಿನ ಜಾಲಾಟದಲ್ಲಿ 'ಮುಗ' ಧರಿಸುವ (ಮುಖವಾಡದ) ಭೂತಗಳಿವೆಯಾದರೂ ಲೋಹದ 'ಮುಗ'ದ ಬಳಕೆ ಪರಪು, ಅಡಿಮರಾವಂಡಿ ಭೂತಕ್ಕೆ ಮಾತ್ರ. ಪರಾರಿ ಪುತ್ತಿಲದ ಪೆರ್ಮಾಳ್ಳು ಮುಗವನ್ನು ಅಡಿಕೆ ಹಾಳೆಯಿಂದ ಕೋಲದಲ್ಲಿಯೇ ತಯಾರಿಸಲಾಗುತ್ತದೆ.

ಕರಾವಳಿ ಪ್ರದೇಶದ ಅನೇಕ 'ಗರಡಿ', 'ಸಾನ'ಗಳಲ್ಲಿ ನಾಥಪಂಥ ಹಾಗೂ ಜೈನ ಧರ್ಮದ ಪ್ರಭಾವಗಳಿವೆ. 'ಜಾಲಾಟದ ಮಂಗಳೇರ್ ಭೂತದ ಹೆಸರೇ ಕುತೂಹಲವನ್ನುಂಟು ಮಾಡುತ್ತದೆ. ಬೌದ್ಧ ಧರ್ಮದಲ್ಲಿ 'ಮಂಗಲ-ಳ' ಎಂಬ ಪದ ಭಿಕ್ಷು-ಸೂಚಕವಾಗಿರುವುದ ರಿಂದ ಬೌದ್ಧ ಭಿಕ್ಷುಗಳೇ 'ಮಂಗಳೇರ್' ಎಂದಾಗಿ ಜಾಲಾಟದಲ್ಲಿ ಆರಾಧನೆ ಪಡೆಯುತ್ತಿರ

ಬೇಕು. (ಡಾ. ಚಿನ್ನಪ್ಪಗೌಡ ಕೆ.)

'ಮಂಗಳೇರ್' ಭೂತಕ್ಕೆ ಹಾಳೆಯ ಮುಗ ಧರಿಸಿಕೊಂಡು ದೈವದ 'ನುಡಿ' ಕೊಡುವ ಕ್ರಮವಿದೆ. ಮುಖವಾಡ ತಯಾರಿಸುವ ಅಡಿಕೆ ಹಾಳೆಗೆ ಎಣ್ಣೆ ಸವರಿ ಬೆಂಕಿಯಲ್ಲಿ ಬಿಸಿ ತಾಗಿಸಿ ಮೆದು ಬರಿಸಿ ಬಾಯಿ-ಕಣ್ಣು ಕೊರೆದು, ಹುಬ್ಬು-ಹಲ್ಲು ಬರೆದು ಅರಸಿನ ಲೇಪಿಸಿ ನೀಟು ನಾಮಹಾಕಿ ಮುಖವಾಡವನ್ನು ಸಿದ್ಧಪಡಿಸುವರು. ಇಂಥ ಮುಖವಾಡ ಧರಿಸಿದ ನಂತರ 'ಗಿಂಡಿ ಹಾಲು' ಕುಡಿದು ಹಿಂಗಾರ (ಅಡಿಕೆಹೂ) ಪ್ರಸಾದವಾಗಿ ಕೊಡುವುದು. ಕೈ ಕಾಣಿಕೆ ಸ್ವೀಕರಿಸುವ ಕ್ರಿಯೆ. 'ಅಡಿಮರ'ದ (ಭೂತಕ್ಕೆ ನಿರ್ಮಿಸಿದ ಎತ್ತರದ ಸ್ಥಾನ) ಮೇಲೆ ಕುಳಿತು ಕಟ್ಟುಕಟ್ಟಲೆಯ ನಡಾವಳಿಕೆಯು ಪ್ರಾದೇಶಿಕ ವಿಧಿಯಂತೆ ಜರುಗುವುದು.

'ವಿಷ್ಣುಮೂರ್ತಿ ಕೋಲ'ದಲ್ಲಿ ಅಥವಾ 'ಒತ್ತೆಕೋಲ'ದಲ್ಲಿ ಸಿಂಹದ ಮುಖವಾಡವನ್ನು ಧರಿಸುವುದರ ಮೂಲಕ ಹಿಂದೂ ಪುರಾಣಗಳ ನರಸಿಂಹಾವತಾರದ ರೂಪದಲ್ಲಿ ಕಾಣಿಕೆ ಸ್ವೀಕರಿಸಿ ಹೂ-ಗಂಧ ನೀಡುವ ಕ್ರಮವಿದೆ. ಇಲ್ಲಿ ಒಮ್ಮೊಮ್ಮೆ ಕುತ್ತಿಗೆಯ ತನಕ ಮುಖ ವಾಡವನ್ನು ಹಾಕಿಕೊಳ್ಳಬಹುದು-ಹಾಗೆ ಮೂರ್ತಿಯ ತಲೆಯು ಪೊಳ್ಳಾಗಿರುವುದೂ ಉಂಟು ಅಥವಾ ಎಡದಕೈ ಸಹಾಯದಿಂದ ಮುಖಕ್ಕೆ ಹಿಡಿದುಕೊಂಡು ದೈವದ ನುಡಿ ಮತ್ತು ಜನರ ಅಭೀಷ್ಟವನ್ನು ಹಾರೈಸುವುದುಂಟು.21

ದ.ಕ. ಜಿಲ್ಲೆಯ ಬಡಗು ಪ್ರದೇಶದಲ್ಲಿ ಕಲ್ಕುಟಿಗ ಭೂತ ಹಾಗೂ ಕಲ್ಲುರ್ಟಿ ಭೂತದ ಆರಾಧನೆಯಿದೆ. ಇದಕ್ಕೆ ಐತಿಹಾಸಿಕ ಮಹತ್ವವೂ ಇರುವಂತಿದೆ. ಇವರ ಪಾಡ್ದನದಲ್ಲಿ ಆಚಾರಿಗಳ ಜಾತಿಗೆ ಸೇರಿದ ಮಹತ್ವದ ಕಥಾನಕವೂ ಇರುವಂತಿದೆ. ಕಾರ್ಕಳದ ಗೊಮ್ಮಟ ಶಿಲ್ಪ, ತಂದೆಮಕ್ಕಳ ಸಂಘರ್ಷ, ಬೈರರಸು ನೀಡಿದ ಶಿಕ್ಷೆ, ಮುಂದೆ ಛಲದಿಂದ ವೇಣೂರಿನಲ್ಲಿ ಗೊಮ್ಮಟನ ಕೆತ್ತನೆ ಇತ್ಯಾದಿಯಲ್ಲದೆ ಕೊನೆಗೆ ಶಿಲ್ಪಿ ಜೀರು ಅಚ್ಚವನ ದುರಂತ ವಿಚಾರ. ಈತನ ತಂಗಿ ಸತ್ಯಮ್ಮನು ಅಣ್ಣನನ್ನು ಹುಡುಕಿಕೊಂಡು ಬರುವುದು-ಅಣ್ಣನ ಸಾವನ್ನು ಕಾಣುವುದು-ನಂತರದ ವಿಚಾರದಲ್ಲಿ ಈ ಇಬ್ಬರೂ ಮಾಯಾರೂಪ ತಾಳಿ ಬೈರರಸನ ಪಟ್ಟಣವನ್ನು ನಾಶಪಡಿಸುವುದು-ಇಂಥ ಅತೃಪ್ತ(?) ಆತ್ಮಗಳ ಶಾಂತಿಗಾಗಿ ಕೋಲ ನಡೆಸು ವುದು. ಇಲ್ಲಿಯ ಜಾನಪದ ಐತಿಹ್ಯ ಅಥವಾ ಐತಿಹಾಸಿಕ ಅಂಶಕ್ಕೆ ಆಚರಣೆಯೊಂದೇ ಆಧಾರ ವಾದಂತಿದೆ. ಇದನ್ನು ವಿದ್ವಾಂಸರು ಕೇರಳದ 'ಕುಟ್ಟಿಚಾತನ್ ತೈಯಂ' ಆಚರಣೆಗೆ ಸಮಾನ ವಾಗಿದೆ ಎನ್ನುತ್ತಾರೆ. ಇಲ್ಲಿ ಗಮನಿಸಬೇಕಾದುದೆಂದರೆ ಈ ಕೋಲದಲ್ಲಿನ ಸೋಗಿನ ವೇಷ ಹಾಕುವವರು ಮುಖಕ್ಕೆ ಅಡಿಕೆಹಾಳೆಯ ಮುಖವಾಡ ಧರಿಸಿಕೊಂಡು ಹಾಸ್ಯ-ವಿನೋದ ಮಾಡುತ್ತಾರೆ. ಆದರೆ ಇವೆರಡೂ ಅಣ್ಣ-ತಂಗಿ ಭೂತಗಳಿಗೆ ಮುಖವರ್ಣಿಕೆಯೇ ಪ್ರಧಾನ ವಾಗಿರುತ್ತದೆ.

ಭೂತಾರಾಧನೆಯಲ್ಲಿ ಕಂಡುಬರುವ ಮುಖವಾಡ ದೈವ ಪ್ರತಿಮೆಗೆ ಹಲವು ಹೆಸರುಗಳಿಂದ ಕರೆಯುವುದು ವಾಡಿಕೆಯಾಗಿದೆ. ಉದಾ : ಕಾಸರಗೋಡು ವಿಭಾಗದಲ್ಲಿ ಪಂಜುರ್ಲಿ ದೈವಕ್ಕೆ 'ಬಾಯಾರು' ಗ್ರಾಮದಲ್ಲಿ ಕಾಲಾವಧಿ ನೇಮ-ಕೋಲ ಜರುಗುವುದು. ಇದೇ

ಪ್ರತಿಮೆಯ ಆಕಾರ ಹೋಲುವ ಹಂದಿ ಮುಖವಾಡವು 'ಮಲರಾಯ' ದೈವಕ್ಕೂ ಇರುವುದನ್ನು ಪುತ್ತೂರು, ಸುಳ್ಯ ಹಾಗೂ ಕೇರಳ-ಕರ್ನಾಟಕದ ಗಡಿಭಾಗದಲ್ಲಿ ಕಾಣಬಹುದು. ಪೈಕ-ನೇತ್ರಾಜೆ ಗ್ರಾಮದಲ್ಲಿ (ಕಾಸರಗೋಡು ತಾಲೂಕು) ಪಂಜುರ್ಲಿ ಮುಖವಾಡದ ಭೂತಕ್ಕೆ 'ಬೀರಣ್ಣ ದೈವ' ಎಂದೂ ಕರೆಯುವುದುಂಟು.

**ಯಕ್ಷಗಾನ ಬಯಲಾಟ ಮತ್ತು ಮುಖವಾಡ:** ದಕ್ಷಿಣ ಕನ್ನಡದ ಯಕ್ಷಗಾನ ಬಯಲಾಟವು ಸುಪ್ರಸಿದ್ಧವಾಗಿರುವ ಕಲೆ. ಇದರ ಪ್ರಸಂಗಗಳಾದ 'ರತಿ ಕಲ್ಯಾಣ'ದಲ್ಲಿ ದ್ರೌಪದಿ-ಕಾಳಿಯಾಗಿ ಬರುವಲ್ಲಿ ಕಾಳಿಕಾದೇವಿಯ ಮುಖವಾಡ ಧರಿಸುವುದುಂಟು. ದ್ವಾರಪಾಲಕರನ್ನು ಬೆದರಿಸುವ ಸಂದರ್ಭದಲ್ಲಿ ಮರದ ಮುಖವಾಡವಿದ್ದು ಎದುರು ಪಾತ್ರಧಾರಿಗಳನ್ನು ನೋಡಲು ಕಣ್ಣಿನ ಭಾಗದಲ್ಲಿ ರಂಧ್ರಗಳಿರುತ್ತವೆ.[22]

ಯಕ್ಷಗಾನ ಬಯಲಾಟದ ಬಣ್ಣದ 'ಚೌಕಿ'ಯಲ್ಲಿ ಗಣಪತಿಯ ಮುಖವಾಡವಿರುವುದುಂಟು. ಮೂಡಲಪಾಯದ ಯಕ್ಷಗಾನ ಬಯಲಾಟದಲ್ಲಿ ನೇರವಾಗಿ ಗಣಪತಿ-ಮುಖವಾಡ ಧರಿಸುವ (ಸಾಮಾನ್ಯವಾಗಿ 8-10ರ ಪ್ರಾಯದ ಹುಡುಗ) ಪಾತ್ರಕ್ಕೇ ಮೊದಲ ಪೂಜೆ ಸಲ್ಲುತ್ತದೆ.[23] ಕೃಷ್ಣ ಪಾರಿಜಾತ ಪ್ರಸಂಗ, ಮಹಾರಾಷ್ಟ್ರದ ಸೋಂಗಿ ರಾಮಾಯಣ, ತಮಾಷಾ ಮತ್ತು ಬ್ಯಾರೂಡ್ (ಬಹುರೂಪ) ಮುಂತಾದ ಪ್ರದರ್ಶನ ಕಲೆಗಳಲ್ಲಿ ಗಣಪತಿ ಮತ್ತು ಮುಖವಾಡದ ಬಳಕೆಯನ್ನು ಕಾಣಬಹುದು. ಆಂಧ್ರದ ಕುಚಿಪುಡಿ-ಕಲಾಪ್ರಕಾರದಲ್ಲಿಯೂ ಗಣಪತಿಯ ಮುಖವಾಡವಿದೆ.

ಯಕ್ಷಗಾನ ಬಯಲಾಟದ 'ಅಶ್ವಮೇಧ ಯಾಗ'ದಲ್ಲಿ ಕುದುರೆಯ ಮುಖವಾಡದ ಬಳಕೆಯಿರುತ್ತದೆ. ಆದರೆ ಇದು ಮರದ ಮುಖವಾಡವಾಗಿರುತ್ತದೆ. ಇಲ್ಲೆಲ್ಲಾ ಮುಖವಾಡದ ಬಳಕೆಯು ಪಾತ್ರದ ವೈವಿಧ್ಯಕ್ಕೆ ಬಳಕೆಯಾಗುವುದು-ತುಂಬ ಗಂಭೀರ ವಿಷಯವೂ ಆಗಿದೆ. ಹೀಗೆಯೇ 'ನಂದಿ'ಯ ಮುಖವಾಡವೂ ಬಳಕೆಯಾಗುತ್ತಿದ್ದಿತು,

### ಐದು

**ಮುಖವಾಡದ ತಯಾರಿಕೆ:** ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಅದಕ್ಕೆ ಹೊಂದಿದ ಕೇರಳ ಭಾಗದಲ್ಲಿ ಇಂದಿಗೂ ಪ್ರಕೃತಿದತ್ತ ಸಾಧನಗಳಿಂದ ದೈವಗಳನ್ನು, ದೈವಾವೇಶ ಪಾತ್ರಿಗಳನ್ನೂ ಅಲಂಕರಿಸುವ ಸಂಪ್ರದಾಯವಿದೆ. ಅದರಂತೆಯೇ ಬೇಕಾದ ಅಥವಾ ಪರಂಪರಾಗತ ಆಕೃತಿಗಳನ್ನು ನಿರ್ಮಿಸುವಲ್ಲಿ ದ.ಕ.ದ ಕೆಳವರ್ಗದವರಾದ ನಲಿಕೆ, ಪಂಬದ, ಪಾಣಾರ ಮತ್ತು ಪರವರು ನಿಸ್ಸೀಮರಾಗಿದ್ದಾರೆ.

ಭೂತಾರಾಧನೆಯ ಮುಖವಾಡದ ತಯಾರಿಕೆಯಲ್ಲಿ ಮೂರು ಪ್ರಕಾರಗಳಿವೆ; 1. ಅಡಿಕೆ ಹಾಳೆಯ ಮುಖವಾಡಗಳು. 2. ಮರದ ಕೆತ್ತನೆಯ ಮುಖವಾಡಗಳು ಮತ್ತು 3. ಲೋಹ-ಎರಕದ ಮುಖವಾಡಗಳು.

ಅಡಿಕೆ ಹಾಳೆಯಲ್ಲಿ ನಿರ್ಮಿಸುವ ಮುಖವಾಡದ ಕಲೆಗಾರಿಕೆಯು ಅತ್ಯಂತ ಪುರಾತನ ಹಾಗೂ

ಪರಂಪರೆಯಿಂದ ಬಂದ ವಾಂಶಿಕ ಕಲೆ :

**ಅಡಿಕೆ ಹಾಳೆ :** ಪ್ರಕೃತಿದತ್ತವಾಗಿ ಅಡಿಕೆ ತೋಟದಲ್ಲಿ ದೊರಕುವುದು. ಚೆನ್ನಾಗಿರುವ ಹಾಳೆಯನ್ನು ನೇರವಾಗಿ ಮುಖವಾಡಕ್ಕೆ ಬಳಸುವ ಮುನ್ನ ಹದ ಅಥವಾ ಮೆದು ಮಾಡುವ ಕ್ರಮಗಳಿವೆ. ತೆಂಗಿನ ಎಣ್ಣೆಯನ್ನು ಅಡಿಕೆ ಹಾಳೆಗೆ ತೆಳುವಾಗಿ ಹಚ್ಚಿ ಸ್ವಲ್ಪ ಬಿಸಿ ತಾಗಿಸುವುದರ ಮೂಲಕ ಮೆತುವಾಗಿಸುವರು. ಆನಂತರ ಬೇಕಾದ ಆಕಾರಕ್ಕೆ ಆಕೃತಿ ಮಾಡುವರು. ಈ ಕಲೆ ಸಂಬಂಧಿಯಾಗಿ ಪ್ರದೇಶದಿಂದ ಪ್ರದೇಶಕ್ಕೆ ಹಲವು ವ್ಯತ್ಯಾಸಗಳಿವೆ. ಬಾಯಿ, ಮೂಗು ಮತ್ತು ಕಣ್ಣಿನ ಭಾಗದಲ್ಲಿ ರಂಧ್ರ ಬರುವಂತೆ ಹರಿತವಾದ ಚಾಕುವಿನಿಂದ ಕೊರೆಯುವರು. ಅಡಿಕೆ ಹಾಳೆಯಲ್ಲಿ ನಿರ್ಮಿತವಾದ ಎಲ್ಲ ಮುಖವಾಡಗಳನ್ನೂ ಮುಖಕ್ಕೆ ಕಟ್ಟಲೇ ಬೇಕೆಂಬ ನಿಯಮವಿಲ್ಲ. ಕೆಲವೊಮ್ಮೆ ಮುಖವಾಡವನ್ನು ಸಿಂಗರಿಸಿದ ಅಣಿಯ ಮೇಲಿರಿಸಿ ಪಾತ್ರಿಯು ಅಂದವಾಗಿ ಮುಖವರ್ಣಿಕೆ ಮಾಡಿಕೊಂಡು ನರ್ತಿಸುವುದಿದೆ.

ಅಡಿಕೆ ಹಾಳೆಯಲ್ಲಿ ತಯಾರಾಗುವ ಹಾಗೂ ದ.ಕ.ದ ಭೂತಾರಾಧನೆಯಲ್ಲಿ ಆಚರಣೆಗೆ ಸೇರಿರುವ ಭೂತ/ದೈವಗಳಲ್ಲಿ ಮುಖ್ಯವಾಗಿ ಕೆಲವನ್ನು ಗುರುತಿಸಬಹುದು. (ಅ) ಮಾಂಕಾಳಿ. (ಆ) ಪಂಜುರ್ಲಿ. (ಇ) ಮೈಸಂದಾಯ, (ಈ) ಪಿಲಿ ಚೌಂಡಿ/ಪಿಲಿ ಭೂತ. (ಉ) ಜುಮಾದಿ. ಮಲೆ ಜುಮಾದಿ. (ಊ) ಕಲ್ಕುಡ. (ಋ) ಲೆಕ್ಕೆಸಿರಿ ಮಾಂಕಾಳಿ. (ೠ) ಏಳೆಲೆಕೋಲದ ಮುಡಿ. (ಎ) ಮಂಗಳೇರ್. (ಏ) ಗುಳಿಗ.

ಇವುಗಳಲ್ಲಿ ಲೋಹ ನಿರ್ಮಿತ ಮುಖವಾಡಗಳಲ್ಲಿಯೇ ಆರಾಧನೆಯು ಹೆಚ್ಚು ಪ್ರಚಲಿತವಾಗಿರುವುದರಿಂದ ಅಡಿಕೆ ಹಾಳೆಯ ಮುಖವಾಡದ ಬಳಕೆಯು ಇತ್ತೀಚೆಗೆ ಕಡಿಮೆಯಾಗಿದೆ-ಎಂದು ಹೇಳಬಹುದು. ಆದರೂ ಇಂದಿಗೂ ಮಾಂಕಾಳಿ, ಪಿಲಿಭೂತ, ಪಂಜುರ್ಲಿ, ಲೆಕ್ಕೆಸಿರಿ ಮಾಂಕಾಳಿ ಮತ್ತು ಮೈಸಂದಾಯ ಭೂತದ ಆರಾಧನೆಗಳಲ್ಲಿ ಅಡಿಕೆ ಹಾಳೆಯ ಮುಖವಾಡವು ಬಳಕೆಯಲ್ಲಿದೆ.

ಅಡಿಕೆ ಹಾಳೆಯ ಮುಖವಾಡ ಧರಿಸಿದ ಪಿಲಿಭೂತಕ್ಕೆ ರಕ್ತಾಹಾರವನ್ನು ಮುಖವಾಡದಲ್ಲಿಯೇ ಕೊಡುವರು. (ಅದಕ್ಕೆ ಅವಕಾಶ ಮಾಡಿರುವರು.) ಅದಕ್ಕಾಗಿ ಮುಖವಾಡವನ್ನು ತೆಗೆಯಬೇಕಾಗುವುದಿಲ್ಲ ಅಥವಾ ಓರೆಮಾಡಬೇಕಾಗುವುದೂ ಇಲ್ಲ. ಅದಕ್ಕಾಗಿ ಕೋಳಿಯನ್ನು ತುಂಡರಿಸಿ ಪಾತ್ರಿಯ ಬಾಯಿಗೆ ಕೊಡುವರು.

ಮೈಸಂದಾಯಕ್ಕೆ ಮಾತ್ರ ಮುಖವಾಡಕ್ಕೆ ಬದಲು ಮಹಿಷದ ಕೊಂಬು ಚಿತ್ರಿತವಾಗುವಂತೆ ಅಡಿಕೆ ಹಾಳೆಯಲ್ಲಿ ಕೊರೆದು ತಲೆಗೆ ಕಟ್ಟುವರು. ಪಂಜುರ್ಲಿ ಭೂತ ಅಥವಾ ದೈವದ ಮುಖವಾಡವನ್ನು ತಯಾರಿಸಿ. ಅದರ ಹಿಂಭಾಗದಲ್ಲಿ ಒಂದು ಅಡ್ಡ ಕೋಲನ್ನು ಸಿಕ್ಕಿಸುವರು. ಪಾತ್ರಿ ಅದನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ನರ್ತಿಸುವದಿದೆ.[24]

ಅಡಿಕೆ ಹಾಳೆಯ ಮುಖವಾಡವನ್ನು ಧರಿಸುವ ಭೂತಗಳಿಗೆ ಅಥವಾ ದರ್ಶನ ಪಾತ್ರಿ(ಪರವ, ನಲ್ಕೆ-ಪಾಣಾರ)ಗೆ ಮುಖವರ್ಣಿಕೆ ಮಾಡಿಕೊಳ್ಳುವುದು ಕಡ್ಡಾಯವಾಗಿದೆ.

ಹಾಳೆಗೆ ಬಳಿಯಲು ಬಣ್ಣಗಳನ್ನು 1. ಅರೆದಾಳ (ಅರಸಿನ), 2. ಇಂಗಲೀಕ (ಕೆಂಪು), 3. ಹಸಿರು ಪಚ್ಚೆ ಅಥವಾ ಜಂಗಲ್ ಪಚ್ಚೆ ಮತ್ತು 4. ಕಪ್ಪು ಅತಿಮುಖ್ಯವಾಗಿ ಬಳಸುತ್ತಾರೆ.

ಅರೆದಾಳ ಅಥವಾ ಇಂಗಲೀಕ ಬಣ್ಣದ ಕಲ್ಲುಗಳನ್ನು ನೀರಿನೊಂದಿಗೆ ಅರೆದು ಗೋಂದು ಸೇರಿಸಿ ಬಣ್ಣ ಬಳಿಯುತ್ತಿದ್ದರಂತೆ. ಇಂದು ಮಾರುಕಟ್ಟೆಯಲ್ಲಿ ಪುಡಿ ಮಾಡಿದ ಅರದಾಳ (ಅಡಿಗೆಯ ಅರದಾಳದ ಪುಡಿ) ಸಿಕ್ಕುವುದರಿಂದ ನೇರವಾಗಿ ತಂದು ಗೋಂದು ಸೇರಿಸಿ ಹಚ್ಚುತ್ತಾರೆ. ಹಸಿರು ಪಚ್ಚೆ-ಬಣ್ಣವು ಇತ್ತೀಚೆಗೆ ಬಳಕೆಗೆ ಬಂದಿರುವುದಾಗಿದೆ. ಅಂಗಡಿ ಯಲ್ಲಿ ದೊರಕುವ ರಾಸಾಯನಿಕ ಪುಡಿ (ಹಸಿರು ಬಣ್ಣ) ಯನ್ನು ಮಾಂಕಾಳಿ ಮುಖವಾಡಕ್ಕೆ ಬಳಸುವರು. ಕಪ್ಪು ಬಣ್ಣದ ತಯಾರಿಕೆಯಲ್ಲಿ ದೇಶೀತನ/ಸ್ವಂತಿಕೆಯಿನ್ನೂ ಉಳಿದುಬಂದಿದೆ. ತಿಪ್ಪಿ (ತೆಂಗಿನ ಚಿಪ್ಪು, ಕರಟ) ಯನ್ನು ಮಸಿ ಮಾಡಿ ನಂತರ ಚೆನ್ನಾಗಿ ನೀರಿನೊಂದಿಗೆ ಅರೆದು (ಅಂಟು ಬರಿಸಲು) ಒಂದು ಹಿಡಿ ಕುಸಲಕ್ಕಿಯನ್ನು ಸುಣ್ಣಗೆ ಅರೆದು ಬೆರಸಬೇಕು. ಹೀಗೆ ತಯಾರಾದ ಕಪ್ಪು ಬಣ್ಣವನ್ನು ಮುಖವರ್ಣಿಕೆಗೂ ಮುಖವಾಡದ ವಿನ್ಯಾಸಕ್ಕೂ ನಲ್ಕೆ (ತುಳು) ಪಾಣಾರ (ಕನ್ನಡ ?) ಜನಾಂಗದವರು ಬಳಸುತ್ತಾರೆ.

**ಮರದ ಕೆತ್ತನೆಯ ಮುಖವಾಡ**[25] **:** ದ.ಕ. ಜಿಲ್ಲೆಯಲ್ಲಿನ ಆರಾಧನಾ ಕೇಂದ್ರಗಳಲ್ಲಿ ಮರದ ಕೆತ್ತನೆಯ ಪಾಪೆ (ಗೊಂಬೆ) ಮತ್ತು 'ಉರು'ಗಳೆಂದು ಕರೆಯುವ ದಾರು ಶಿಲ್ಪ ಗಳಿವೆ. ಇದಕ್ಕೆ ಮೆಕ್ಕೆಕಟ್ಟೆಯ ನಂದಿಕೇಶ್ವರ ದೇವಾಲಯ (ಉಡುಪಿ ತಾಲೂಕು) ಕಬತಾರ ಮತ್ತು ಹಿರಿಯಡ್ಕ ಕೇಂದ್ರಗಳನ್ನು ಉದಾಹರಿಸಬಹುದು. ಕೆಲವು ಬೆಟ್ಟುಗಳಲ್ಲೂ ಭೂತ ಗಳ ಶಿಲ್ಪಗಳನ್ನು ಕಾಣಬಹುದು-ಉದಾ : ಚೆಂಪಿ-ಕೋಟದಲ್ಲಿನ ನಾಯಿರಿಗಳ ಗರಡಿಗೆ ಸೇರಿದ ದೇವಸ್ಥಾನ ಮತ್ತು 'ಚಂಡಿ'ಯ ಸ್ಥಂಬ (ಇದರಲ್ಲಿ ನಾಗಗಳನ್ನು ಕೆತ್ತಿರುವರು. ಇದರ ಪಾದದಲ್ಲಿ ಕ್ಷೇತ್ರಪಾಲ-ಎನ್ನುವ ಮುಖವಾಡದಂಥ ಕೆತ್ತನೆಯೂ ಉಂಟು.

ಈ 'ಉರು'ಗಳನ್ನು ಮಾಡಬಲ್ಲ ಕಲಾಕಾರರಲ್ಲಿ ಎರಡು ವರ್ಗಗಳಿವೆ. 1. ಗುಡಿಗಾರರು ಮತ್ತು 2. ಮರಗೆಲಸದ ಆಚಾರಿಗಳು. ಇವರಿಬ್ಬರೂ ವಿಶ್ವಕರ್ಮ ಜನಾಂಗದವ ರಾಗಿದ್ದಾರೆ. ಇವರು ದೈವ, ಭೂತಗಳಿಗೆ ಮತ್ತು ಯಕ್ಷಗಾನ ಬಯಲಾಟ ಹಾಗೂ ಗೊಂಬೆ ಯಾಟದ ಕಲಾವಿದರಿಗೆ ಮುಖವಾಡ ಹಾಗೂ ಇತರೆ ಸಾಧನಗಳನ್ನು ಮಾಡಿಕೊಡಬಲ್ಲರು. ಕುಂದಾಪುರದ ಉಪ್ಪುಂದ ಗ್ರಾಮದಲ್ಲಿ ಮತ್ತು ಬಸರೂರಲ್ಲಿ ಇಂದಿಗೂ ಉರು ಶಿಲ್ಪ ಮುಖವಾಡಗಳನ್ನು ಬೇಡಿಕೆಯ ಮೇರೆಗೆ ಮಾಡಿಕೊಡಬಲ್ಲ ಕಲಾವಿದರಿವರು.

ಬಂಟವಾಳ ತಾಲ್ಲೂಕಿನ ಉಳ್ಳಾಲ್ತಿ ಅಮ್ಮನವರು-ದೈವಕ್ಕೆ ರಕ್ತ ಚಂದನದಿಂದ ಮಾಡಿದ ಮುಖವಾಡವಿದೆ. ಮರದ ಬಣ್ಣಕ್ಕೆ ತೆಳುವಾಗಿ ಕಾವಿ ಕೆಂಪು ವರ್ಣ ಲೇಪಿಸಿದಂತಿದೆ. ಇಂಥ ಮುಖವಾಡಗಳನ್ನು ಮಾಡಲು ರಕ್ತಚಂದನ ಅಥವಾ ಧೂಪದ ಮರವನ್ನು ಉಪಯೋಗಿಸು ವರು. ಉರುಗಳಿಗೆ ಹೆಬ್ಬಲಸು ಮತ್ತು ಹಲಸಿನ ಮರವನ್ನು ಮಾತ್ರ ಬಳಸುವರು. ಬೇರೆ ಯಾವ ಮರದಲ್ಲಿ ಪ್ರತಿಮೆಯನ್ನು ಮಾಡಿದರೂ ಅಂತಹವು ಪ್ರತಿಷ್ಠೆ-ಪೂಜೆಗಳಿಗೆ

ಅರ್ಹವಲ್ಲವೆಂದು ಗುಡಿಕಾರರ ಅಭಿಪ್ರಾಯ. ಯಕ್ಷಗಾನದ ಗೊಂಬೆ ಅಥವಾ ಮುಖವಾಡ ತಯಾರಿಸಲು ಆಲೆ ಅಥವಾ ಕರಿ ಆಲೆ ಜಾತಿಯ ಮರವನ್ನು ಉಪಯೋಗಿಸುವರು.[26]

ಉರು ಶಿಲ್ಪಗಳಿಗಾಗಲಿ ಭೂತದ 'ಕೊಟ್ಟಿಗೆ'ಗೆ ಬೇಕಾದ ಗಣಗಳ ಶಿಲ್ಪವನ್ನು ತಯಾರಿಸಲು ಯಾವುದೇ ಶಾಸ್ತ್ರ ಸಮ್ಮತ ಸೂತ್ರಗಳಾಗಲಿ ಧ್ಯಾನ ಶ್ಲೋಕಗಳಾಗಲಿ ಇಲ್ಲ. ಕೆತ್ತನೆ ಹಾಗೂ ಬಣ್ಣಗಾರಿಕೆ (ಕೈಬಣ್ಣ) ನಿರ್ಮಾಣ ಗುಡಿಕಾರರಿಗೆ ವಾಂಶಿಕವಾಗಿ ಬಂದ ಜ್ಞಾನ. ಪರಂಪರೆಯ ಬಣ್ಣಗಾರಿಕೆ ಇಂದು ನಶಿಸಿಹೋಗಿದೆ, ಬಹುತೇಕ ಅಂಗಡಿಯಲ್ಲಿ ದೊರೆಯುವ ರಸಾಯನಿಕ ಬಣ್ಣಗಳನ್ನೇ ಹೆಚ್ಚು ಪ್ರಯೋಗಿಸುವರು. ಮುಖವಾಡಗಳಿಗೂ ರಸಾಯನಿಕ ಬಣ್ಣವನ್ನೇ ಹೆಚ್ಚಾಗಿ ಬಳಸುವುದನ್ನು ಕಾಣಬಹುದು.

ದೇಶೀ ಬಣ್ಣ ಅಥವಾ ಕೈ ಬಣ್ಣಗಾರಿಕೆಯು ಇಂದು ಬಳಕೆಯಲ್ಲಿ ಇಲ್ಲವಾದರೂ ಗುಡಿ ಕಾರರ ವಾಂಶಿಕರು ಬಳಸುತ್ತಿದ್ದ ಸಾಮಗ್ರಿ ಹಾಗೂ ಬಣ್ಣ-ಸಂಸ್ಕಾರಗಳನ್ನು ಕುರಿತು ಅಭ್ಯಾಸಮಾಡಬೇಕಾಗಿದೆಯಷ್ಟೆ. ದೇಶೀಯವಾಗಿ ಉಪಯೋಗಿಸುತ್ತಿದ್ದ ಇಂಗಲೀಕ, ಅರೆದಾಳ-ಸಂಗ್ರಹಿಸಿ ಚೆನ್ನಾಗಿ ಅರೆದು ಕೋಳಿಮೊಟ್ಟೆಯ ಬಿಳಿ ಭಾಗದೊಂದಿಗೆ (ಹಳದಿ ಭಾಗ ಮಿಶ್ರಣವಾಗಬಾರದು) ಬೆರೆಸಿಕೊಳ್ಳುತ್ತಿದ್ದರು. ಹೀಗೆ ಸಂಸ್ಕರಿಸಿಕೊಂಡ ಬಣ್ಣವನ್ನು ಉರು-ಶಿಲ್ಪಗಳಿಗೆ ಅಥವಾ ಮುಖವಾಡಗಳಿಗೆ ಲೇಪಿಸಿ ಒಣಗಿದ ನಂತರ ಅರಗಿನ ಲೇಪನ ಮಾಡಲಾಗುತ್ತಿತ್ತು.

**ಅರಗಿನ ಲೇಪನ ತಯಾರಿಕೆ ವಿಧಾನ**[27] **:** ಅರಗಿನ ಲೆಪ್ಪ ಮತ್ತು ರಾಳದ ಪುಡಿ ಮಿಶ್ರ ಮಾಡಿ ಬೆಂಕಿಯಲ್ಲಿ ಕಾಯಿಸಿ ಗೋಲಿ ಆಕಾರದ ಪ್ರಮಾಣದಲ್ಲಿ ಮಾಡಿಟ್ಟುಕೊಳ್ಳು ವರು. ಬಣ್ಣ ಹಚ್ಚಿದ ಪ್ರತಿಮೆಯ ಮೇಲುಭಾಗಕ್ಕೆ ಮೇಲೆ ಹೇಳಿದ ಲೇಪನದ ಅಂಟನ್ನು ಬಿಸಿ ಮಾಡಿ ಬೀಳುವಂತೆ ವ್ಯವಸ್ಥೆ ಮಾಡಿಕೊಳ್ಳುವರು. (ಇದಕ್ಕಾಗಿ ಒಂದು ಕೋಲಿನ ತುದಿಗೆ ಗೋಲಿ ಆಕಾರದ ಅಂಟನ್ನು ಅಂಟಿಸಿ, ಮರದ ಶಿಲ್ಪದ ಬಳಿಯಲ್ಲೇ ಕೆಂಡದ ಬಿಸಿ ತಾಗಿಸಿ ಮಿಶ್ರಣದ ಅಂಟು ಕರಗಿ ಬೀಳುವಂತೆ ಮಾಡುವರು.) ನಂತರ ಹೊಳೆಯ ಬದಿಯಲ್ಲಿ ದೊರಕುವ ನಾಲ್ಕೈದು ಹುಲ್ಲುಕಡ್ಡಿ ಒಟ್ಟಾಗಿಸಿಕೊಂಡು ಕರಗಿಬಿದ್ದ ಬಿಸಿ ರಸವನ್ನು ಪ್ರತಿಮೆ ಅಥವಾ ಮುಖವಾಡದ ಮೇಲ್ಭಾಗದಿಂದ ಕೆಳಮುಖವಾಗಿ ತೀಡುವರು. ಬಿಸಿ ಆರಿದ ಕೂಡಲೆ ಬಣ್ಣವು ಶಾಶ್ವತವಾಗಿ ನಿಲ್ಲುವುದು. ಈ ಬಗೆಯಲ್ಲಿ ಹಚ್ಚುವ ಬಣ್ಣದಲ್ಲಿ ಮಂದ ವಾದ ಹೊಳಪಿದ್ದು ದೀರ್ಘಕಾಲಾವಧಿಯವರೆಗೆ ಪ್ರತಿಮೆಗಳಲ್ಲಿ ಅಥವಾ ಮುಖವಾಡಗಳಲ್ಲಿ ಬಣ್ಣವು ಉಳಿಯುವುದು.

ಭೂತ ಅಥವಾ ಮಾರಿಕಾಂಬಾ ಮುಂತಾದ ಮರದ ವಿಗ್ರಹಗಳಿಗೆ ಬಣ್ಣ ಹಚ್ಚಿದ ಮೇಲೆ ದೃಷ್ಟಿ ಬಣ್ಣ ಕೂಡಿಸುವಲ್ಲಿ ಗಿಡಮೂಲಿಕೆ ರಸ ಮಿಶ್ರಣದ ಪ್ರಯೋಗವಿದೆ. ಬಹುಶ ಭೂತದ ಮುಖವಾಡಗಳ ತಯಾರಿಕೆಯಲ್ಲೂ ಇದೇ ಬಣ್ಣಗಾರಿಕೆ ನಡೆದಿರಬೇಕು. ದೃಷ್ಟಿ ಬಣ್ಣದ ತಯಾರಿಕೆಯು ಯಾವಾಗಲೂ ಕಪ್ಪು ಬಣ್ಣವಾಗಿರುತ್ತದೆ.

ಧೂಪದ ಮರದ ಅಂಟು (ರಾಳದ ಮರ, white Dammar or Indian Copal

Tree ತಂದೊಳಿಗೆದ ಮರ-ತುಳು.) ತಯಾರಿಸಿಕೊಂಡು ಒಣಗಿದ ತರುವಾಯ ಪುಡಿ ಮಾಡಿ ಕೆಂಡಕ್ಕೆ ಹಾಕಿದಾಗ ದಟ್ಟವಾದ ಕಪ್ಪು ಹೊಗೆ ಮೇಲೇಳುವುದು. ಇದೇ ಸಂದರ್ಭ ದಲ್ಲಿ ಕಂಚಿನ ಪಾತ್ರೆ ಅಥವಾ ಮಣ್ಣಿನ ಪಾತ್ರೆಯನ್ನು ಬೋರಲು ಹಾಕುವರು. ಕೆಂಡದಲ್ಲಿ ಹಾಕಿದ್ದ ಧೂಪದ ಹುಡಿ ಸಂಪೂರ್ಣ ಉರಿದ ನಂತರ ಪಾತ್ರೆಯ ಒಳಭಾಗದಲ್ಲಿ ಸಂಗ್ರಹ ವಾದ ಕರಿ (ಮಸಿ) ಯನ್ನು ಸಂಗ್ರಹಿಸಿಕೊಳ್ಳುವರು. ಇದೇ ಅವರ ಕಪ್ಪು ಬಣ್ಣ. ಈ ಕಪ್ಪಿಗೆ ಧೂಪದ ಮರದಿಂದ ಪಡೆದ ರಸವನ್ನು ಮಿಶ್ರ ಮಾಡಿ ಕಪ್ಪು ಅಂಟು ತಯಾರಿಸು ವರು. (ಇತರ ಬಣ್ಣಗಳನ್ನೂ ಧೂಪದ ಮರದ ರಸದಿಂದ ಮಿಶ್ರಣ ಮಾಡಿ ಲೇಪನ ಮಾಡುವ ಪದ್ಧತಿಯು ಐದಾರು ದಶಕಗಳ ಹಿಂದೆ ಬಳಕೆಯಲ್ಲಿದ್ದಿತು. ಇಂದು ಈ ಶ್ರಮ ವನ್ನು ಬಿಡಲಾಗಿದೆ. ರಾಸಾಯನಿಕ ಬಣ್ಣಗಳು ಅಂಗಡಿಯಲ್ಲಿ ದೊರಕುವುದೇ ಇದಕ್ಕೆ ಕಾರಣವೆನ್ನಬಹುದು.

**ಲೋಹದ ಮುಖವಾಡಗಳು :** ದ.ಕ. ಜಿಲ್ಲೆಯಲ್ಲಿ ಬಹುತೇಕ ಭೂತ ಸ್ಥಾನಗಳಲ್ಲಿ ಕಂಚಿನ ವಿಗ್ರಹ, ಪಂಚ ಲೋಹದ ಮುಖವಾಡ, ಚಿನ್ನ-ಬೆಳ್ಳಿಯ ಮುಖವಾಡಗಳು ಹೆಚ್ಚಾಗಿ ಕಂಡುಬರುತ್ತವೆ.

ಚಿನ್ನ-ಬೆಳ್ಳಿಯ ಕೆಲಸ ಮಾಡುವವರನ್ನು ಆಚಾರಿಗಳೆಂದೂ; ಕಂಚಿನ, ಹಿತ್ತಾಳೆಯ ಮತ್ತು ಲೋಹದ ಕೆಲಸ ಮಾಡುವವರನ್ನು **ಮೂಜಾರಿಗಳೆಂದೂ** ಕರೆಯುವ ವಾಡಿಕೆಯಿದೆ.

ಮೂಜಾರಿಗಳು ಹೆಚ್ಚಾಗಿ ಕೇರಳದ ಭಾಗದಿಂದ ಬಂದಂತಹ ವಿಶ್ವಕರ್ಮ ಜನಾಂಗಕ್ಕೆ ಸೇರಿ ದವರಾಗಿದ್ದಾರೆ. ಪ್ರತಿಮೆ ಮಾಡಲು ವಿಶ್ವಕರ್ಮ ಪುರಾಣಕ್ಕೆ ಅನ್ವಯವಾಗುವ ಶಾಸ್ತ್ರ ವಿಧಿಗಳಿವೆ. ಆದರೆ ಭೂತ, ದೈವದ ಗಣಗಳ ಮುಗ (ಮುಖವಾಡ) ತಯಾರಿಸಲು ಯಾವುದೇ ಶಾಸ್ತ್ರ-ಸೂತ್ರಗಳಿದ್ದಂತಿಲ್ಲ. ಭೂತ-ದೈವ ಗಣಗಳ ಬಿಂಬ ಮಾಡುವ ಲೆಖ್ಖಾಚಾರದಲ್ಲಿ ನಾಗನ ಹೆಡೆಯನ್ನು ಸಿಂಗರಿಸುವಲ್ಲಿ ಸಂಪ್ರದಾಯದ ಸೂತ್ರವಿದೆ. ಅದರಲ್ಲಿ ನಾಗನ ಹೆಡೆಯ ನಿರ್ಮಾಣದಲ್ಲಿ ಬೆಸ ಸಂಖ್ಯೆಯಲ್ಲಿರಬೇಕೆಂಬುದು ನಿಯಮ.

ಭೂತದ ಮುಖವಾಡಗಳ ಪ್ರತಿಮೆಯ ವಿನ್ಯಾಸ-ರಚನೆಯ ಸೂತ್ರವು ಮೂಜಾರಿಗಳಿಗೆ ವಾಂಶಿಕವಾಗಿ ಬಂದ ಕಸುಬಿನಲ್ಲಿದೆ. ಈ ಮುಖವಾಡಗಳಲ್ಲಿ ಮುಖ್ಯವಾದುವೆಂದರೆ ಜುಮಾದಿ, ಮಲೆ ಜುಮಾದಿ, ಪಂಜುರ್ಲಿ, ಪಿಲಿ ಚೌಂಡಿ, ಕಲ್ಕುಡ, ವಿಷ್ಣುಮೂರ್ತಿ ದೈವ, ಉಳ್ಳಾಲ್ತಿ.....ಇತ್ಯಾದಿ.

ಲೋಹದ ಎರಕದಲ್ಲಿ ಭೂತ-ದೈವದ ಮುಖವಾಡವನ್ನು ಮಾಡುವಾಗ ಪ್ರಾರಂಭದಲ್ಲಿ ಗಣಪತಿ ಪೂಜೆ, ಧ್ಯಾನ ಮಾಡುವರು. ಮುಖವಾಡದ ಸಾಮಗ್ರಿಗಳಲ್ಲಿ ಕಂಚು + ತವರ + ತಾಮ್ರ ಮಿಶ್ರಿತ ಲೋಹ ಅಥವಾ ಎರಕದ ಲೋಹವನ್ನು ಪ್ರತ್ಯೇಕಿಸಿ ಇರಿಸಿಕೊಳ್ಳುವರು. ಜೊತೆಗೆ ಜೇನುಮೇಣ, ಲೋಹದ ಎರಕ ಸಿದ್ಧಪಡಿಸುವಲ್ಲಿ ಮೂಸೆ (ಮಲಯಾಳಂ) ಅಥವಾ ಕೋವೆ (ಕನ್ನಡ) ಎಂಬ ಸಣ್ಣಮಣ್ಣಿನ ಪಾತ್ರೆ ಅತಿ ಮುಖ್ಯವಾದುದು. ಮುಖ ವಾಡ ಅಥವಾ ಯಾವುದೇ ಎರಕದ ಪ್ರತಿಮೆಯನ್ನು ತಯಾರಿಸಲು ಎರಡು ಬಗೆಯ

ಮಣ್ಣಿನ ಪದವನ್ನು ಬಳಸುವರು. (1) ಅಚ್ಚಿನ ಮಣ್ಣು (ಸಣ್ಣ ಮಣ್ಣು) (2) ಆವೆ ಮಣ್ಣು. ಕುಲುಮೆಯಲ್ಲಿ ಚೆನ್ನಾಗಿ ಬೆಂದ ಅಚ್ಚಿನ ಮಣ್ಣನ್ನು ಕರುವಿನ ಸೆಗಣಿಯ ಜೊತೆ ಚೆನ್ನಾಗಿ ಅರೆದು ಪುಡಿ ಮಾಡಿಕೊಂಡು, ಹದವಾಗಿ ನೀರು ಬೆರಸಿ (ಚೆನ್ನಾಗಿ ಅಂಟು ಬರುವಂತೆ, ಜಿಗುಟು ಆಗುವಂತೆ) ಅಚ್ಚಿನ ಮಣ್ಣನ್ನು ಸಿದ್ಧಮಾಡಿಕೊಳ್ಳುವರು. ಪ್ರತಿ ಬಾರಿಯೂ ಅಚ್ಚಿಗೆ ಲಗತ್ತಿಸುವ ಮಣ್ಣು ಬೆಂದ ನಂತರ ಪುನಃ ಜೇಡಿಮಣ್ಣನ್ನು ಸ್ವಲ್ಪ ಸೇರಿಸಿ-ಸಂಸ್ಕರಿಸಿ ಅಚ್ಚಿನ ಮಣ್ಣು ತಯಾರಿಸಿಕೊಳ್ಳುವರು.

ಆವೆ ಮಣ್ಣು ಅತಿಮುಖ್ಯವಾಗಿ ಮುಖವಾಡ ಅಥವಾ ಪ್ರತಿಮೆಗಳಿಗೆ ಅಡಿಪಾಯ ಅಥವಾ ತಳಕಟ್ಟು (ಕಟ್ಟೆ, ಪೀಠ) ಇದ್ದಂತೆ. ಈ ಆವೆ ಮಣ್ಣು ಭದ್ರವಾಗಿ ಅಂಟಿಕೊಂಡಿರಲು (ಸಿಮೆಂಟ್ ಮಾದರಿಯಲ್ಲಿ) ಭತ್ತದ ಕರಿ ಮತ್ತು ಗೋಣಿ ನಾರು ಅಥವಾ ಹತ್ತಿ, ಎಲ್ಲವನ್ನೂ ಚೆನ್ನಾಗಿ ಕುಟ್ಟಿ ನುಣ್ಣಗೆ ಅರೆಯುವರು.

ಹೀಗೆ ಮಿಶ್ರಣಗೊಂಡ ಮಣ್ಣಿಗೆ ನೀರು ಬೆರೆಸಿ-ಹದವಾದ ನಂತರ ಅದನ್ನು ಮುಖವಾಡದ ತಳಪಾಯವನ್ನು ಕಟ್ಟಲೋಸ್ಕರವೇ ಬಳಸುವರು. ದೊಡ್ಡ ಮುಖವಾಡವಾದರೆ ಸಣ್ಣ ತಾಮ್ರದ ಸರಿಗೆ/ತಂತಿಯನ್ನು ಅಳವಡಿಸಿ ಸಂಸ್ಕರಿಸಿದ ಆವೆ ಮಣ್ಣಿನ ಮೂಲಕ ಗುಪ್ಪೆ ಮಾದರಿಯಲ್ಲಿ ಸಿದ್ಧಪಡಿಸುವರು, ತಳಪಾಯವನ್ನು ಗುಪ್ಪೆಯಾಕಾರದಲ್ಲಿ ಸಿದ್ಧಪಡಿಸಿಕೊಂಡ ನಂತರ ಆವೆ ಮಣ್ಣಿನ ಅಂಟನ್ನು ಬಳಸಿಕೊಂಡು ಮುಖವಾಡದ ವಿನ್ಯಾಸ ಅಥವಾ ಪ್ರತಿಮೆಯನ್ನು ಅದರಿಂದಲೇ ತಯಾರಿಸುವರು.

ಒಮ್ಮೆ ಮುಖವಾಡದ ಆಕೃತಿಯು ತಯಾರಾದ ಮೇಲೆ ಅಲಂಕರಣ ಮಾಡಬಹುದಾದ ಕಣ್ಣು, ಕಿವಿ, ನಾಗರಹೆಡೆ, ಇತ್ಯಾದಿ ವಿನ್ಯಾಸಗಳನ್ನು (ಜೇನುಮೇಣಕ್ಕೆ ಕರಿಯನ್ನು ಮಿಶ್ರ ಮಾಡಿ) ಮೇಣದಿಂದಲೇ ನಿರ್ಮಿಸುವರು. ಈ ಎಲ್ಲಾ ಹಂತಗಳಲ್ಲಿ ತಾಳ್ಮೆ, ಜಾಗರೂಕತೆ ಮತ್ತು ಏಕಾಗ್ರತೆ ಅತ್ಯಗತ್ಯ. ಒಮ್ಮೆ ಮೇಣದಿಂದ ಆಕೃತಿ ಸಿದ್ಧವಾದ ಕೂಡಲೆ ಮುಖವಾಡದ ಆಕೃತಿಯ ಕೆಳಭಾಗ ಹಾಗೂ ಹೊರಭಾಗಗಳಿಗೆ ಮತ್ತೊಮ್ಮೆ ಅಚ್ಚಿನ ಮಣ್ಣು ಉಪಯೋಗಿಸಿ ಮಂದವಾಗಿ ಮೆತ್ತುವರು. ಸಂಸ್ಕರಿಸಿದ ಅಚ್ಚಿನ ಮಣ್ಣು ಸಂಪೂರ್ಣವಾಗಿ ಮುಖವಾಡದ ಆವರಣಕ್ಕೆ (ಮೇಲ್ಮೈಗೆ) ಮೇಲು ಹೊದಿಕೆಯಾದ ನಂತರ ಒಂದು ಭಾಗದಲ್ಲಿ ಲೋಹದ ಬಿಸಿ ಎರಕ ಹುಯ್ಯಲು ಪ್ರಣಾಳಿಕೆ ವಿನ್ಯಾಸದ ಮಾದರಿಯಲ್ಲಿ ರಂಧ್ರದ ವ್ಯವಸ್ಥೆಯನ್ನು ಮಾಡುವರು. (ಈ ರಂಧ್ರದ ಮೂಲಕ ಒಳಗಿನ ಜೇನುಮೇಣದ ಹೊದಿಕೆಯು ಕಾಣುವಂತಿರಬೇಕು.)

ಮುಖವಾಡದ ಪ್ರತಿಮಾ ಲಕ್ಷಣಗಳನ್ನು ಆವೆ ಮಣ್ಣಿನಲ್ಲಿ ತಯಾರಿಸಿದ ಮೇಲೆ ಮೇಣದ ಹೊದಿಕೆ ಅಥವಾ ಮೇಣದ ವಿನ್ಯಾಸದಲ್ಲಿ ಅಳತೆಯು ಸಮಪ್ರಮಾಣದಲ್ಲಿರಬೇಕು. ಹೆಚ್ಚು ಕಡಿಮೆಯಾಗಿ ಮೇಣ ಮೆತ್ತುವ ಕ್ರಿಯೆ ನಡೆದಿದ್ದರೆ ಬಿಸಿ ಎರಕ ಹೊಯ್ದಾಗ ಮುಖವಾಡದ ಕೆಲವು ಭಾಗ ತೆಳುವಾಗಿಯೂ ಕೆಲವು ಭಾಗ ದಪ್ಪವಾಗಿಯೂ ಲೋಹದ ಮಿಶ್ರಣ ಸೇರಿ ಅಂದ ಕೆಡುವ ಸಾಧ್ಯತೆಯಿದೆ. ಇಷ್ಟೆಲ್ಲಾ ಜಾಗರೂಕತೆಯಿಂದ ಅಚ್ಚು ಮಣ್ಣು, ಆವೆ

ಮಣ್ಣು, ಮೇಣದ ಹೊದಿಕೆ, ಪುನಹ ಅಚ್ಚಿನ ಮಣ್ಣು ಕೂಡಿಸುವ ಅಥವಾ ನಿರ್ಮಿಸಿದ ಪ್ರತಿಮೆಯನ್ನು ಕುಲುಮೆಯಲ್ಲಿ ಹದವಾಗಿ ಕಾಯಿಸಿ ಒಳಗೆ ಅಂಟಿದ್ದ ಜೇನುಮೇಣ ಕರಗಿಸಿ ಬೇರೊಂದು ಪಾತ್ರೆಗೆ ಸುರಿಯುವರು. (ಕರಗಿದ ಮೇಣ ಗಟ್ಟಿಯಾದ ನಂತರ ಬೇರೊಂದು ಮುಖವಾಡ ಅಥವಾ ಪ್ರತಿಮೆಯನ್ನು ಮಾಡಲು ಮೂರ್ತಿಕಾರರು ಉಪಯೋಗಿಸುವರು.)

ಮೇಣ ಕರಗಿದ ಮೇಲೆ ಮಣ್ಣಿನ ಹೊದಿಕೆಯೊಳಗೆ ಸಣ್ಣ ಮಣ್ಣಿನಲ್ಲಿ ತಯಾರಾದ ಆಕೃತಿಯು ಪಡಿಯಚ್ಚಿನ ರೂಪದಲ್ಲಿರುತ್ತದೆ. ಪಡಿಯಚ್ಚಿನ ರೂಪವನ್ನು ಅಡಿಪಾಯದ ಅಚ್ಚಿನ ಮಣ್ಣು ಸದಾ ಬಿಗಿ ಹಿಡಿತದಲ್ಲಿಟ್ಟುಕೊಳ್ಳುವಂತಹ ವ್ಯವಸ್ಥೆಯಲ್ಲಿರುವುದು. ಹೀಗೆ ತಯಾರಾದ ಅಚ್ಚು ಮಣ್ಣಿನ ಆಕೃತಿಯನ್ನು ದೊಡ್ಡ ಕುಲುಮೆ ಮಾಡಿ ಕೆಂಪಗೆ ಕಾಯಿಸಿಕೊಳ್ಳುವರು. ಇನ್ನೊಂದೆಡೆ ಲೋಹ ಮಿಶ್ರಣದ ಎರಕವನ್ನು ಕೋವೆ (ಮೂಸೆ) ಯಲ್ಲಿ ಕಾಯಿಸಿಕೊಳ್ಳುವರು. ಪ್ರತ್ಯೇಕವಾಗಿ ಎರಡೂ ಕುಲುಮೆಗಳಲ್ಲಿ ಏಕಪ್ರಕಾರವಾಗಿ ಕೆಲಸ ಸಾಗುವುದು. ಚೆನ್ನಾಗಿ ಕಾದ ಅಚ್ಚುಮಣ್ಣಿನ ಆಕೃತಿಯನ್ನು ಕುಲುಮೆಯಿಂದ ಹೊರಕ್ಕೆ ತೆಗೆದು ನೆಲದಲ್ಲಿ ಒಂದು ಗುಂಡಿ ತೋಡಿ ಮೆದುಮಣ್ಣೊಳಗೆ ಪ್ರಣಾಳಿಕೆ ಅಥವಾ ಎರಕದ ಬಾಯಿ (ರಂಧ್ರ) ಹೊರಚಾಚಿರುವಂತೆ ಸ್ಥಾಪಿಸಬೇಕು. ಆದಷ್ಟು ಜಾಗ್ರತೆ ವಹಿಸಿ ಸಮಪ್ರಮಾಣದಲ್ಲಿ ಮೆದು ಮಣ್ಣಿನೊಳಗೆ ಹುದುಗಿಸುವುದು ಅಗತ್ಯ.

ಮೆದುಮಣ್ಣಿನಲ್ಲಿ ಸ್ಥಾಪಿತವಾದ ಅಚ್ಚುಮಣ್ಣಿನ ಆಕೃತಿಯ ರಂಧ್ರಕ್ಕೆ ಕರಗಿರುವ ಲೋಹದ ಬಿಸಿಬಿಸಿ ಎರಕವನ್ನು ನೇರವಾಗಿ ಕೋವೆಯ ಮೂಲಕ ಇಕ್ಕಳದ ಸಹಾಯದಿಂದ ಸುರಿಯುವರು. ನಿಗಿನಿಗಿ ಕೆಂಡದಂತೆ ಕಾಣುವ ಲೋಹದ ಬಿಸಿಬಿಸಿ ಎರಕವನ್ನು ಸುರಿಯುವಾಗ ಕೆಲವೊಮ್ಮೆ ಅಚ್ಚುಮಣ್ಣು ಒಡೆದು ಲೋಹದ ರಸ ಸೋರಿಹೋಗುವ ಸಂದರ್ಭಗಳೂ ಇವೆ. ಇದನ್ನು ತಡೆಗಟ್ಟುವುದಕ್ಕಾಗಿ ಅಚ್ಚುಮಣ್ಣಿನ ಆಕೃತಿಯನ್ನು ನೆಲದೊಳಗೆ ಹುದುಗಿಸುವಾಗ ಆವರಣದ ಮಣ್ಣು ಮೆದುವಾಗಿರುವಂತೆ ನೋಡಿಕೊಳ್ಳುವರು. ಲೋಹದ ರಸವನ್ನು (ಎರಕ) ಸುರಿಯುವ ಮುನ್ನ ಮೆದುಮಣ್ಣಿನ ಮೇಲೆ ಒಂದು ಅರ್ಧ ಅಡಿ ಅಗಲದ ಉದ್ದನೆಯ ಮರದ ಪಟ್ಟಿಯನ್ನು ತಾತ್ಕಾಲಿಕವಾಗಿ ಇರಿಸಿರುತ್ತಾರೆ. ಸಂಪೂರ್ಣವಾಗಿ ಲೋಹದ ಬಿಸಿಬಿಸಿ ರಸವನ್ನು ಹೊಯ್ಯುವಾಗ ಪ್ರಣಾಳಿಕೆಯ ಬಾಯಿಯಲ್ಲಿ ರಸದ ಪ್ರಮಾಣವು ಸಮವಾಗಿ ನಿಲ್ಲದೆ ಗುಳಿಬಿದ್ದರೆ ಕೂಡಲೇ ಮೆದುಮಣ್ಣಿನ ಪಟ್ಟಿಯನ್ನು ಕಾಲಿನಿಂದ ಒತ್ತುವರು. ಹೀಗೆ ಒತ್ತುವಾಗ ಅಚ್ಚುಮಣ್ಣನ್ನು ಒಡೆದುಕೊಂಡು (ನೆಲವಲ್ಲಿ ಹುಗಿದ ಒಳಭಾಗದಲ್ಲಿ) ರಸ (ಎರಕ) ವು ಸೋರಿಹೋಗುವ ಆ ಗಳಿಗೆಯಲ್ಲಿ ಒತ್ತಡವು ಸಿಕ್ಕಿದಂತಾಗಿ ಬಿಸಿಬಿಸಿ ಎರಕದ ಸೋರುವಿಕೆಯು ತಡೆಹಿಡಿದಂತಾಗುವುದು. ಈ ಜಾಗರೂಕತೆಯು ಅನುಭವದಿಂದ ಮಾತ್ರ ಅರಿವಾಗುವಂತಹ ವಿಶೇಷ ಜ್ಞಾನ. ಎರಕ ಹೊಯ್ದು ತರುವಾಯ ಐದು-ಹತ್ತು ನಿಮಿಷಗಳೊಳಗೆ ಆಕೃತಿಯು ಸಿದ್ಧಗೊಂಡಿರುತ್ತದೆ. ಹುದುಗಿಸಿದ ಅಚ್ಚಿನಾಕೃತಿಯನ್ನು ಮೇಲೆ ತೆಗೆದು ಹೊದಿಸಿದ ಅಚ್ಚು ಮಣ್ಣನ್ನು ಸುತ್ತಿಗೆಯಿಂದ

ಹೊಡೆದು ಎರಕದ ಆಕೃತಿಯನ್ನು ಬೇರ್ಪಡಿಸುವರು. ಕೊನೆಯದಾಗಿ ಎರಕದ ಪ್ರತಿಮೆಯನ್ನು ನಯಗಾರಿಕೆ ಮಾಡಲು ಕಡವಿನ (ಪಾಲಿಶ್ ಮಾಡಲು/ಹೊಳಪುಗೊಳಿಸಲು ಉಪಯೋಗಿಸುವ ಕೈಯಂತ್ರ) ಮೂಲಕ ನಯಗೊಳಿಸುವರು.

ಇಂತಿಷ್ಟು ಹಂತಗಳನ್ನು ದಾಟಿ ಸಂಸ್ಕಾರಗೊಂಡ ಪ್ರತಿಮೆಗೆ (ಯಾ ಮುಖವಾಡಕ್ಕೆ) ಕೆಂಪು ವಜ್ರದ ಕಲ್ಲನ್ನು ಕಣ್ಣಿಗೆ ಕೂರಿಸಬೇಕೆಂಬ ನಿಯಮವಿದೆ. (ಯಾವುದೇ ಭೂತದ ಲೋಹ ನಿರ್ಮಿತ ಮುಖವಾಡಕ್ಕೆ ಬಣ್ಣ ಹಚ್ಚುವುದು ನಿಷೇಧ) ಈ ಕ್ರಿಯೆಗೆ 'ದೃಷ್ಟಿ ಕೊಡುವುದು' ಎಂದು ಹೆಸರು.

ದೃಷ್ಟಿ ನೀಡಿದ ನಂತರ ತುಳಸಿ ಎಲೆಯನ್ನು ಶ್ರೀಗಂಧದ ನೀರಿನಲ್ಲಿ ಮುಳುಗಿಸಿ ದೃಷ್ಟಿ ಮುಚ್ಚುವರು. ಒಮ್ಮೆ ದೃಷ್ಟಿಯನ್ನು ಮುಚ್ಚಿದ ಮೇಲೆ ಸ್ಥಾನದವರು-ಪಾತ್ರಿಗಳು ಬಂದು ಸ್ವೀಕರಿಸುವವರೆಗೆ ತೆರೆಯುವಂತಿಲ್ಲ.

'ದೃಷ್ಟಿ ನೀಡುವ' ಕ್ರಮಕ್ಕೆ ಪ್ರತಿಮಾ ಲಕ್ಷಣದಲ್ಲಿ ಅತ್ಯಂತ ಗೋಪ್ಯ ಹಾಗೂ ಸಂಪ್ರದಾಯದ ನಿಯಮಗಳಿವೆ. ಭೂತದ ಮುಖವಾಡವನ್ನು ಮಾಡುವ ಶ್ರೀ ರಾಘವಾಚಾರಿ (ಉಡುಪಿ) ಯವರು 'ದೃಷ್ಟಿ ನೀಡುವಾಗ ಎಲ್ಲರ ಸಮಕ್ಷಮದಲ್ಲಿಯೇ ಮಾಡಬಹುದು'-ಎನ್ನುತ್ತಾರೆ.

**ಮುಖವಾಡದ ಬಿಡುಗಡೆ:** ಭೂತಾರಾಧನೆಯ ಮುಖವಾಡ ಅಥವಾ ಕಡ್ತಲೆ (ಕತ್ತಿ) ಯನ್ನು ಮೂಚಾರಿಯ ಮನೆಯಿಂದ ಮಾಡಿಸಿಕೊಂಡು ಹೋಗುವ ಮುನ್ನ ಅದನ್ನು ಮಾಡಿಸಿದ ಯಜಮಾನನ ಅಥವಾ ಸ್ಥಾನದ ಪಾತ್ರಿಯು ಜೊತೆಗೂಡಿ ಮೂಚಾರಿಗೆ ನಿರ್ದಿಷ್ಟ ಮೂಹೂರ್ತದಲ್ಲಿ ಬರುವುದಾಗಿ ತಿಳುಹಿಸಬೇಕು. ಮುಖವಾಡ ಸ್ವೀಕರಿಸುವ ದಿನ ಸ್ಥಾನದ ಪಾತ್ರಿ ಹಾಗೂ ಯಜಮಾನನು 'ಶುದ್ಧಾಚಾರದ ಮಡಿಯಲ್ಲಿ' ಬಂದು ಆಚಾರಿಯ ಮನೆ ಹೊರಭಾಗದಲ್ಲಿ ನಿಲ್ಲುವರು. ಮೂಚಾರಿಯು ತನ್ನ ಮನೆಯಿಂದ ಸ್ವಲ್ಪ ದೂರದಲ್ಲಿ ಮುಖವಾಡ ಅಥವಾ ಕಡ್ತಲೆ (ಕತ್ತಿ) ಯನ್ನು ಕೊಡಿಬಾಳೆ ಎಲೆಯಲ್ಲಿಟ್ಟು ಅದರ ಬಲ ಭಾಗದಲ್ಲಿ ಎಡೆ-ಅರ್ಪಿಸುವನು. ಎದುರು ಭಾಗದಲ್ಲಿ ನಾಲ್ಕು ಕೋಲಿನ ಬತ್ತಿಯನ್ನು ನೆಲದಲ್ಲಿ ಸ್ಥಾಪಿಸಿ ದೀಪ ಹಚ್ಚುವರು. ಎಡೆ-ಅರ್ಪಣೆಯಲ್ಲಿ ಒಂದು ಸೇರು ಬೆಳ್ತಕ್ಕಿ, ಒಂದು ಬೆಲ್ಲದ ಅಚ್ಚು, ಅವಲಕ್ಕಿ, ಎಲೆ-ಅಡಿಕೆ, ಗಂಧ, ಅಕ್ಷತೆ, ಕುಂಕುಮ, ಊದುಬತ್ತಿ ಮತ್ತು ಒಂದು ಎಳನೀರು (ಸೀಯಾಳ) ಇಡುವ ಕ್ರಮವಿದೆ. ದೀಪಾರತಿ ಹಾಗೂ ಧೂಪ ಬೆಳಗಿದ ನಂತರ ಒಂದು ಕೋಳಿಯನ್ನು ಎದುರಿಗೆ ಬಲಿಕೊಡುವರು. ಅದೇ ಕೋಳಿಯ ರಕ್ತವನ್ನು ಮುಖವಾಡದ ನಾಲಿಗೆ ಅಥವಾ ಬಾಯಿಗೆ ತಾಗಿಸುವರು. ನಂತರ ತುಳಸಿ ಎಲೆಯಿಂದ ಮುಚ್ಚಿದ್ದ 'ದೃಷ್ಟಿ ತೆಗೆದು, ಮುಖವಾಡವನ್ನು ಹಿಡಿಯಲು ನಿಂತ ಪಾತ್ರಿಗೆ ಒಪ್ಪಿಸುವರು. ಈ ಸಂದರ್ಭದಲ್ಲಿ ಅನುಕೂಲವಿದ್ದವರು ಬ್ಯಾಂಡ್-ಭಜಂತ್ರಿಯ ಅದ್ದೂರಿ ವಾಲಗ ಸದ್ದುಗಳೊಂದಿಗೆ ಮೆರವಣಿಗೆಯಲ್ಲಿ ಸ್ಥಾನ ತುಂಬಿಸಿಕೊಳ್ಳುವರು. ಸ್ಥಾನದ ಪಾತ್ರಿಗೆ ಮುಖವಾಡ ಒಪ್ಪಿಸಿದ ಕೂಡಲೇ ಮುಖವಾಡದ ಪ್ರತಿಮೆಯನ್ನು ಮಾಡಿದ

ಮೂಜಾರಿಯು ಗಣಪತಿ, ಮಾಂಕಾಳಿ, ಗುರು ಮತ್ತು ಸಭೆಯನ್ನು ಪ್ರಾರ್ಥಿಸಿ ತೀರ್ಥ ಪ್ರೋಕ್ಷಣೆ ಮಾಡುವನು. ತೀರ್ಥ ಪ್ರೋಕ್ಷಣೆಯಾದ ಕೂಡಲೆ ಮುಖವಾಡ ಹೊತ್ತವನಿಗೆ ಆವೇಶ ಬರುವುದು. ಅದು (ದೈವ/ಭೂತ ಚೇತನ ಮೈಮೇಲೆ ಬರುವಿಕೆ) ದ್ವಿಗುಣ ಗೊಂಡು ಆತನು ಬೀಳಬಹುದೆಂದು ಮುನ್ಸೂಚನೆಯಾಗಿ ಅರಿತು, ಮುಖವಾಡವನ್ನು ಹಿಡಿದವನ ಎಡ-ಬಲ ಭಾಗಗಳಲ್ಲಿ ನಾಲ್ಕಾರು ಕಟ್ಟಾಳುಗಳು ನಿಂತು ಗಟ್ಟಿಯಾಗಿ ಹಿಡಿಯು ವರು. ಅಲ್ಲಿಂದ ನೇರವಾಗಿ ಮುಖವಾಡವನ್ನು ಅಥವಾ ಭೂತ/ದೈವದ ಭಂಡಾರ ವಸ್ತು ಗಳ ಸ್ಥಾನಕ್ಕೆ ಮೆರವಣಿಗೆಯಲ್ಲಿ ಕೊಂಡೊಯ್ಯುವರು.

**ಸ್ಥಾನದಲ್ಲಿ ದರ್ಶನ :** ಮುಖವಾಡವನ್ನು ಸ್ಥಾನದೊಳಗೆ ತುಂಬಿಸಿಕೊಳ್ಳುವ ಮುನ್ನ ಮೂಜಾರಿಯು ಮನೆಯಿಂದ ನೇರವಾಗಿ ತಂದ ಭೂತದ ಮುಖವಾಡವನ್ನು ಸ್ಥಾನದ ಹೊರ ಭಾಗದಲ್ಲಿಯೇ ಇರಿಸುವರು. ರಾತ್ರಿ ಹೊತ್ತಿನಲ್ಲಿ ಪುನಹ ದರ್ಶನವು ಆರಂಭಗೊಂಡು ಆಚಾರಿ ಮಾಡಿದ ಭೂತದ ಮುಖವಾಡ ಹಾಗೂ ಇತರೆ ವಸ್ತುಗಳು ದೈವಕ್ಕೆ ತೃಪ್ತಿಕರ ವಾಗಿವೆಯೇ-ಎಂದು ಮಾಡಿಸಿದವರು ಪ್ರಶ್ನೆ ಕೇಳುವರು. ಅದೇ ಸಂದರ್ಭದಲ್ಲಿ ಮುಖ ವಾಡ ಮಾಡಿದ ಮೂಜಾರಿ-ಸಹಾಯಕರೂ ದರ್ಶನದ ಎದುರು ಭಾಗದಲ್ಲಿ ಹಾಜರಿರ ಬೇಕು. ದರ್ಶನ ಪಾತ್ರಿ ಆಚಾರಿಗೆ ಪ್ರಶ್ನಿಸುವುದು ''ಮಾಡಿದ ಮುಖವಾಡ ಶುದ್ಧಾ ಚಾರದಲ್ಲಿ ನಡೆದಿದೆಯೇ ?'' ಎಂದು. ಉತ್ತರವಾಗಿ ''ಎಲ್ಲಾ ನಿಮಗೇ ತಿಳಿದಿದೆ. ನಮ್ಮ ವಿಶ್ವಾಸದಲ್ಲಿ ನಾವು ಮಾಡಿದ್ದೇವೆ" ಎನ್ನುತ್ತಾರೆ. ದರ್ಶನ ಪಾತ್ರಿ ಪುನಹ ''ಯಜಮಾನರು ನಿಮ್ಮ ಲೆಕ್ಕಾಚಾರ ಸರಿಯಾಗಿ ಕೊಟ್ಟಿರುವರಾ ?" ಮುಂತಾಗಿ ಪ್ರಶ್ನಿಸಿ, ತೃಪ್ತಿಕರವಾದ ಉತ್ತರವನ್ನು ಪಡೆದ ತರುವಾಯ ಮುಖವಾಡವನ್ನು ಮಾಡಿದವರಿಗೆ, ಸಹಾಯಕ ಆಚಾರಿ ಗಳಿಗೆ 'ಹೂ-ಗಂಧ' ಪ್ರಸಾದವಾಗಿ ಕೊಡುವುದು. ಹೀಗೆ ಹಂತ ಹಂತವಾಗಿ ಆಚರಣೆಗಳು ಮುಗಿದ ನಂತರ ಮುಖವಾಡವನ್ನು ಭೂತದ ಸ್ಥಾನದೊಳಗೆ-ಮರದ ಮಂಚದಲ್ಲಿ ಸ್ಥಾಪಿಸು ವರು. ಕಾಲಾವಧಿಗೆ ತಕ್ಕ ಕೋಲ, ನೇಮ ಮತ್ತು ತಂಬಿಲಗಳು ನಂಬಿದ ಭಕ್ತರಿಂದ ನಂಬಿದಷ್ಟು ದಿನ ಜರುಗುವುದು.

**ಟಿಪ್ಪಣಿಗಳು**

1. ಗಣಪತಿ ಭಟ್ ಪಿ., **ಮುಲರಾಯ ಒಂದು ಅಧ್ಯಯನ,** ಮುಂಗಾರು ದಿನ ಪತ್ರಿಕೆ, ಮಂಗಳೂರು, ತಾ. 28-4-1988.

2. **ಸಂದರ್ಶನ ಮಾಹಿತಿ,** ವಿವೇಕ ರೈ ಬಿ.ಎ., ಕನ್ನಡ ವಿಭಾಗದ ಮುಖ್ಯಸ್ಥರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ತಾ. ....4-1988

3. ನೋಡಿ: ಡಾ. ಯು.ಪಿ. ಉಪಾಧ್ಯಾಯ ಮತ್ತು ಡಾ. ಸುಶೀಲ ಉಪಾಧ್ಯಾಯ, **ಭೂತ ವರ್ಶಿಪ್-ಆಸ್ಪೆಕ್ಟ್ಸ್ ಆಫ್ ಎ ರಿಚ್ಯುಲಿಸ್ಟಿಕ್ ಥಿಯೇಟರ್,** R.R.C., Udupi, 1984-PP 52-53.

4. **ಸದರಿ ಲೇಖಕನ ಸಂದರ್ಶನ,** ಡಾ. ವಿವೇಕ ರೈ ಬಿ.ಎ., ಕನ್ನಡ ವಿಭಾಗದ

ಮುಖ್ಯಸ್ಥರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

5. **ಕರಂಡೆ ವಾದ್ಯದ ಮಾದರಿ,** ನಿಡುಗಲ್ಲು (ಉಜಿರೆ ಬಳಿ), ಅಬ್ಬಗ-ದಾರಗರ ಚೆನ್ನೆಯಾಟದ ನಂತರ **ಮಾರಿಸೂಟೆ** ಹೊತ್ತಿಸಿ **ಕ್ಷೇಮುಕಲ್ಲ ಪಂಜುರ್ಲಿ** ಕುರಿತು ಪಾಡ್ದನ ಹೇಳುವಾಗ ಉಪಯೋಗಿಸುವರು-ಲೇಖಕ.

6. **ಈ ಅಮ್ಮನವರ ನೇಮ ನಡೆಸುವವರು,** ಡಾ. ಎಂ.ಪಿ. ಪೈಗಳು. ಕಾರಣ ಉಳ್ಳಾಲ್ತಿಯ ಜಾಗವನ್ನು ಪಡೆದುಕೊಂಡ ನಂತರ ದೈವದ ಕೈಂಕರ್ಯ **ಜಾಗೆದ ಧನಿಕುಲು** (ತುಳು) ಅಂದರೆ ಸ್ಥಳದ ಯಜಮಾನರು ನಡೆಸುವುದು ನಿಯಮ. ಹೀಗಾಗಿ **ಚಂದನದ ಮುಖವಾಡ** ಮತ್ತು **ಬೆಳ್ಳಿಯ ಮುಖವಾಡ** ಡಾ. ಪೈ ಅವರ ಮನೆಯಲ್ಲಿ ಭಂಡಾರದ ವಸ್ತುಗಳೊಂದಿಗೆ ಸುರಕ್ಷಿತವಾಗಿವೆ.

7. ಸೆಖೆಯಾಗಬಾರದೆಂದು ಪಾತ್ರಿಯ ಹಿಂಬದಿಯಲ್ಲಿ ಅಡಿಕೆ ಹಾಳೆಯಿಂದ ಮಾಡಿದ ಬೀಸಣಿಗೆಯನ್ನು ಹಿಡಿದು ಗಾಳಿ ಹಾಕುತ್ತಿರುವರು. ಕೆಲವೊಮ್ಮೆ ಇವರು ಎದುರಿಗೆ ಬರುವ ಭಕ್ತರು ಯಾರೆಂದು ಪಿಸುಮಾತಿನಲ್ಲಿ ಪಾತ್ರಿಗೆ ತಿಳಿಯಹೇಳುವುದೂ ಇದೆ.

8. ಇಂಥ ಉತ್ಸವಗಳಲ್ಲಿ ಕೊರಗರು ತಮ್ಮ ವಾದ್ಯದ ಸೇವೆ ಸಲ್ಲಿಸುವುದು ಒಂದು ಪುರಾತನ ಪದ್ಧತಿಯೂ ಆಗಿದೆ.

9. ಈ ಹಿಂದೆ ಮರಕಾಲ ಜಾತಿಯ ಹೆಂಗಸು ಅಮ್ಮನ ಮೂಗುತಿಗೆ ಆಸೆಪಟ್ಟು ಅಲ್ಲಿಯೇ ಕಲ್ಲಾದಳಂತೆ.

10. ಉಳ್ಳಾಲ್ತಿಯ ಇತಿಹಾಸವನ್ನು ಗಮನಿಸಿದರೆ ನಾಗ ಆಲಡೆಯಲ್ಲಿನ ಸ್ತ್ರೀ ಶಕ್ತಿ ದೈವ-ಇದು ಎನ್ನಬಹುದು. ಹೇಳಿಕೆಯ ಪ್ರಕಾರ ಏಳು ಪ್ರಾಂತ್ಯದಲ್ಲಿ ಉಳ್ಳಾಲ್ತಿಯ ದೈವ-ಮೆಚ್ಚಿ (ಕೋಲ) ಜರುಗುವುದು. (ಕೆಲಿಂಜ, ಕೇಪು, ಬಲ್ನಾಡು, ಪುತ್ತೂರು ಭಾಗ, ಮಾಣಿ, ಮಾಮೇಶ್ವರ, ಅನಂತಾಡಿ-ಬಂಟ್ವಾಳದ ಭಾಗ ಮತ್ತು ಚಿತ್ತಾರಿ-ಇವೇ ಅಮೂಲ್ಯ ಭಾಗಗಳಾಗಿವೆ.)

11. ಮಂಗಳೂರಿನ ಕಾಂಞಂಗಾಡು-ರಾಜ್ಯ ಹೆದ್ದಾರಿಯ ವಿಟ್ಲದಿಂದ 4 ಕಿ.ಮೀ. ದೂರದಲ್ಲಿರುವುದು. ದೈವಸ್ಥಾನ-ಇದು ವಿಟ್ಲ ಅರಸರ ಕಾಲದಿಂದ (ಸುಮಾರು 300 ವರ್ಷಗಳ ಹಿಂದೆ-ಉಳ್ಳಾಲ್ತಿ ದೈವ ಭಕ್ತರ ಅಭೀಷ್ಟ ನೆರವೇರಿಸುವ ಮಾತೃ ಶಕ್ತಿಯಾಗಿದೆ-ಕೆಂಪು ಉಳ್ಳಾಲ್ತಿ ದೈವಸ್ಥಾನದ ಪ್ರಕಟಣೆ, 1986. (ಪುಟ 54ರ ಕೊನೆ-ibid)

12. ರಂಗನ ಪಲ್ಡೆ (ಎಲಿಯಾಲ-ಕಾರ್ಕಳ ತಾಲೂಕು, ದ.ಕ.) ಆರ್.ಆರ್.ಸಿ.-ಉಡುಪಿಯಲ್ಲಿ 5 ಫೆಬ್ರವರಿ 1985ರಂದು ಮಾಡಿದ ವಿ.ಕ್ಯಾ. ನಂ. 57-ಪಿಲಿ ಚಾಮುಂಡಿ ಭೂತ, ಆಚರಣೆ.

13. ಆರ್.ಆರ್.ಸಿ-ಉಡುಪಿ, ಮೇ 1988-ರ ಪಿಲಿಭೂತದ ವೀಡಿಯೋ ದಾಖಲಾತಿ ಇದೆ. 112

14. ಈ ಪ್ರತೀತಿಯು ಇಂದಿಗೂ ಉಳಿದುಬಂದಿದೆ.

15. **ಲೇಖಕರಿಂದ ಸ್ವಂತ ಸಂದರ್ಶನ,** ವಕ್ತೃ-ಪಂಗು ಪಾಣಾರ, ಜಂತಿ ಬೆಟ್ಟು, ಹಿರಿಯಡ್ಕ, ಉಡುಪಿ ತಾ , ದ.ಕ. ಜಿಲ್ಲೆ.
''ಮುತ್ತೈದೆತನ ಕಳೆದ ನಂತರ ಅಲ್ಲಿಯೇ ಒಂದು ಕಡೆ-ಬಿಳಿ ಬಟ್ಟೆ ಉಟ್ಟು, ತಲೆಗೆ ಮುಸುಕು ಹಾಕಿಕೊಂಡು ಕೂರಬೇಕೆಂಬ ನಿಯಮವಿದೆ''-ಪಂಗು ಪಾಣಾರ.

16. **ಪಿಲಿಭೂತದ ಕೋಲ,** ಕಾಪು, ಉಡುಪಿ ತಾಲೂಕು, ದ.ಕ. ಜಿಲ್ಲೆ, ತಾ. 8 ಮೇ 1988. (ಪುಟ 57ಕ್ಕೆ ಸಂಬಂಧ-16ನೆಯ ಕೋಲ)

17. (1) **ಪಿಲಿ ಭೂತದ ಕೋಲ,** ಕಾಪು, ಉಡುಪಿ ತಾಲೂಕು, ದ.ಕ. ಜಿಲ್ಲೆ, ಆರ್.ಆರ್.ಸಿ., ಉಡುಪಿ. ದಾಖಲಾತಿಯ ನಿರ್ದೇಶಕರು-ಡಾ. ಉಪಾಧ್ಯಾಯ ದಂಪತಿಗಳು. ವೀಡಿಯೋ-ಶ್ರೀ ಹರ್ಷವರ್ಧನ ಭಟ್. ಕ್ಷೇತ್ರ ಕಾರ್ಯನಿರತರು-ಲೇಖಕರು.

(2) ಪಿಲಿ ಭೂತದ ವಿಚಿತ್ರ ಆಚರಣೆಗೆ ಮೌಖಿಕ (Oral Traditoin) ಇತಿಹಾಸವಿದೆ. ಕಾರ್ಕಳದ ಅರಸರು ರಾಜ್ಯ-ಕೋಶ ಕಳೆದುಕೊಂಡಾಗ ತಮ್ಮನ್ನು ಕಾಪಾಡುತ್ತಿದ್ದ ಜೋಡಿ **ಪಿಲಿ ದೈವ**ಗಳನ್ನು ಬೈರ ಅರಸನ ಕಡೆಗೆ ಕಳುಹಿಸಿದರಂತೆ. ಹೀಗಾಗಿ ಎರಡು ವರ್ಷಕ್ಕೊಮ್ಮೆ ಪಿಲಿ ಕೋಲ-ಜರುಗುತ್ತಾ ಬಂದಿದೆ.

18. **ಪೂಕರೆ**-ಅಡಿಕೆ ಮರ, ಬಿದಿರು ಸಲಿಕೆಗಳಿಂದ ಮಾಡಿದ ಅಟ್ಟೆಗಳಿಂದ ಕೂಡಿದ ಕಾರಣ **ಪೂ-ಕರೆ** ಎಂದಿರಬೇಕು-ನೋಡಿ. **ತುಳುನಾಡಿನ ಎರುಕೋಲ ಮತ್ತು ಗುಳಿಗ ಸೂಟೆ,** ಕುದ್ಕಾಡಿ ವಿಶ್ವನಾಥ ರೈ, ಉದಯವಾಣಿ, ತಾ. 29-8-1982, ಮಣಿಪಾಲ, ದ.ಕ.

19. ಅದೇ **ತುಳುನಾಡಿನ ಎರುಕೋಲ ಮತ್ತು ಗುಳಿಗ ಸೂಟೆ,** ಕುದ್ಕಾಡಿ ವಿಶ್ವನಾಥ ರೈ, 29-8-1982.

20. **ಜಾಲಾಟ,** ಡಾ. ಕೆ. ಚಿನ್ನಪ್ಪಗೌಡ.

21. **ಕ್ಷೇತ್ರಕಾರ್ಯ,** ಲೇಖಕರು.

22. **ಸಂದರ್ಶನದ ಮಾಹಿತಿ**-ಲೇಖಕರಿಂದ ರಾಘವನ್ ನಂಬಿಯಾರ್, 'ಯಕ್ಷಗಾನ ಕಲಾವಿದ' ಉದಯವಾಣಿ, ದ.ಕ., 25-5-88.

23. ಆರ್.ಆರ್.ಸಿ.ಯಲ್ಲಿ ವಿ.ಕ್ಯಾ. ನಂ. 67, ಮೂಡಲಪಾಯ ಯಕ್ಷಗಾನ ಪ್ರಸಂಗ **ಕೌಂಡಲಿಕ ವಧೆ,** ಅಂಬಲಿ ಜೀರಹಳ್ಳಿ, ನಾಗಮಂಗಲ ತಾ. ಮಂಡ್ಯ ಜಿಲ್ಲೆ.

24. ಕೇರಳದ ಭಾಗದಲ್ಲಿ (ದ.ಕ. ಜಿಲ್ಲೆಗೆ ಹತ್ತಿದ ಭಾಗ) ಮುಖವಾಡದ ಆಕೃತಿಯನ್ನು ತಯಾರಿಸಲು ಹಸಿರಾಗಿರುವ ಅಡಕೆ ಹಾಳೆಯನ್ನೇ ತಂದು ಬಳಸುವರು, ಅದರ ಹಸಿರು ಸಿಪ್ಪೆಯನ್ನು ತೆಗೆದು (ಆಗ ಹಾಳೆಯ ಮೆತುವಾದ ಭಾಗ ಸಿಕ್ಕುತ್ತದೆ) ವಿನ್ಯಾಸ ಮಾಡುವರು-ಲೇಖಕರು.

25. ಮರವೊಗಂ- ಎಂಬ ಪ್ರಯೋಗವು **ವಡ್ಡಾರಾಧನೆ**ಯಲ್ಲಿ ಬಳಕೆಯಾಗಿದೆ. ಇದನ್ನು ಬಳಸುತ್ತಿದ್ದವರು ಜಾನಪದ ಕಲಾವಿದರಿರಬಹುದಾಗಿದೆ. ನೋಡಿ : **ವಡ್ಡಾರಾಧನೆ**-ಸಂ. ಡಿ.ಎಲ್. ನರಸಿಂಹಾಚಾರ್.

26-27. **ಸಂದರ್ಶನ ಮಾಹಿತಿ**-ಲೇಖಕರಿಂದ. 23 ಜುಲೈ 1986. ಬಸರೂರು ಮೋಹನ ಮತ್ತು ಹೆಮ್ಮಾಡಿ ನಾಗಪ್ಪಯ್ಯ ಆಚಾರಿ, ಕುಂದಾಪುರ ತಾ., ದ.ಕ. ಜಿಲ್ಲೆ.

28. ಸಂದರ್ಶನ ಮಾಹಿತಿ ಹಾಗೂ ಪ್ರತ್ಯಕ್ಷ ವೀಕ್ಷಣೆಯ ಆಧಾರಗಳಿಂದ **ಮುಖವಾಡ** ತಯಾರಿಕೆಯ ಶಾಸ್ತ್ರ-ನಿಯಮಾವಳಿಯ ಕ್ರಮಗಳನ್ನು ತಿಳಿಸಲಾಗಿದೆ, ಕುಲುಮೆಯ ಕೆಲಸದ ಮಧ್ಯೆ ನನ್ನ ಕುತೂಹಲದ ಪ್ರಶ್ನೆಗಳಿಗೆ ಉತ್ತರಿಸಿದ ಶ್ರೀ ರಾಘವಾಚಾರಿ ಮತ್ತು ಕುಟುಂಬದವರಿಗೆ ಲೇಖಕನ ಕೃತಜ್ಞತೆಗಳು.

**ವಕ್ತೃ ವಿಳಾಸ :** ರಾಘವಾಚಾರಿ, ಕುಂಜಬೆಟ್ಟು, ಉಡುಪಿ (ದ.ಕ.) ಸಂದರ್ಶನದ ದಿನಾಂಕ-25, 26, ಮೇ 1988.

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಗೊಂಬೆಯಾಟ

–ಕೃಷ್ಣಯ್ಯ ಎಸ್.ಎ.

ಕರ್ನಾಟಕ ಜನಪದ ರಂಗಭೂಮಿಯ ಪ್ರಕಾರಗಳಲ್ಲಿ ಗೊಂಬೆಯಾಟ ಮಾಧ್ಯಮವೂ ಒಂದು ಪ್ರದರ್ಶನಾತ್ಮಕ ರಂಗಕಲೆ. ರಾಜ್ಯದ ಬಹುತೇಕ ಭಾಗಗಳಲ್ಲಿ ಗೊಂಬೆಯಾಟ ಪ್ರಕಾರಗಳಿಗೆ ತಕ್ಕುದಾದ ಪ್ರೋತ್ಸಾಹವಿಲ್ಲದೆ ಕ್ಷೀಣಿಸುತ್ತಿವೆ. ಮೂಲತಹ ಗೋಂಬೆಯಾಟ ಪರಂಪರೆ ಒಂದು ನಿರ್ದಿಷ್ಟ ಜನಾಂಗಕ್ಕೆ ಸೇರಿದ ಕುಲಕಸುಬು, ಅವರುಗಳಲ್ಲಿ ಮುಖ್ಯವಾಗಿ 'ಆಚಾರಿಗಳು' ಅಥವಾ 'ವಿಶ್ವಕರ್ಮ'-ಪಂಗಡಕ್ಕೆ ಸೇರಿದ ಜನಾಂಗದವರು. ಬಡಗಿ ವೃತ್ತಿಯನ್ನು ನಿರ್ವಹಿಸುವ ಆಚಾರಿಗಳಿಗೆ ಗೊಂಬೆಯಾಟ ನಡೆಸಿಕೊಡುವ ಉಪಕಾಯಕ ತಲೆತಲಾಂತರಗಳಿಂದ ಬಂದಿದ್ದರೂ ಇಂದಿನ ದಿನಗಳಲ್ಲಿ ಸೂತ್ರದ ಗೊಂಬೆಯಾಟವು ದ.ಕ. ಜಿಲ್ಲೆಯಲ್ಲಿ ಆಸಕ್ತ ಜನಪದ ರಂಗಕರ್ಮಿಗಳಲ್ಲಿ ಅಭಿವೃದ್ಧಿ ಹೊಂದುತ್ತಿರುವುದನ್ನು ಗಮನಿಸಬಹುದು. ಕ್ಷೇತ್ರಕಾರ್ಯದ ದತ್ತಕಾಂಶಗಳಿಂದ ತಿಳಿದುಬಂದ ವರದಿಯ ಪ್ರಕಾರ ಉತ್ತರ ಕರ್ನಾಟಕದಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೊಂಬೆಯಾಟ ಮಾಧ್ಯಮವು ವಿಶ್ವಕರ್ಮ ಜನಾಂಗ ಹಾಗೂ ಇತರ ಸಾಮಾಜಿಕ ವರ್ಗದವರುಗಳು ಕೂಡಿ ಪ್ರದರ್ಶನ ಕೊಡುವ ಕಲೆಯಾಗಿ ಬೆಳೆದಿದೆ.

ಕರಾವಳಿ ಕರ್ನಾಟಕದ ಗೊಂಬೆಯಾಟ ಪರಿಚಯಕ್ಕೆ ಮುನ್ನ ಜನಸಾಮಾನ್ಯರಿಗೆ ಪರಿಚಿತಗೊಂಡ ಕಲಾ ಮಾಧ್ಯಮಗಳೇನು-ಎಂದು ತಿಳಿಸುವ ಔಚಿತ್ಯವಿದೆ. ದ.ಕ. ಜಿಲ್ಲೆಯಲ್ಲಿ ಬಹುತೇಕ ಸಾಮಾಜಿಕ ಧಾರ್ಮಿಕ ಹಿನ್ನೆಲೆಯಲ್ಲಿ ಹೆಸರುಪಡೆದ-ಪಡೆಯುತ್ತಿರುವ ಕಲೆ-'ಯಕ್ಷಗಾನ ಬಯಲಾಟ'. ಅದರಂತೆಯೇ ವಿಧಿವತ್ತಾಗಿ ಜರುಗುವ ಆಚರಣಾತ್ಮಕ ಕಲೆಗಳು ಬಹುತೇಕ; ಉದಾ-ಭೂತಕೋಲ, ಮೆಚ್ಚಿ (ಕೋಲ), ನಾಗಮಂಡಲ, ಸಿರಿ, ಡಕ್ಕೆಬಲಿ, ಕಾಡ್ಯಾನಾಟ, ಪಾಣರಾಟ, ಇತ್ಯಾದಿ.

ಕರಾವಳಿ ಕರ್ನಾಟಕದ ಯಕ್ಷಗಾನ ಮಾಧ್ಯಮವನ್ನು ಎರಡು ಭಿನ್ನ ಶೈಲಿಗಳಾಗಿ ಗುರುತಿಸಬಹುದು. (1) ತೆಂಕು ತಿಟ್ಟು. (2) ಬಡಗು ತಿಟ್ಟು. ತೆಂಕು ತಿಟ್ಟು (ದಕ್ಷಿಣ ಭಾಗ) ಯಕ್ಷಗಾನ ಪ್ರಕಾರವು ಹೆಚ್ಚಾಗಿ ಪುತ್ತೂರು, ಸುಳ್ಯ, ಧರ್ಮಸ್ಥಳ, ಕಾಸರಗೋಡು ಗಡಿಯ ಭಾಗಗಳಲ್ಲಿ ಹೆಚ್ಚು ಪ್ರಚಲಿತಗೊಂಡಿರುವುದು. ಬಡಗು ತಿಟ್ಟು (ಉತ್ತರ ಭಾಗ), ಯಕ್ಷಗಾನ ಪ್ರಕಾರವು-ಸುರತ್ಕಲ್ ದಾಟಿದ ನಂತರ ಸಿಗುವ ಉದ್ಯಾವರ ಹೊಳೆಯ ಉತ್ತರ ಭಾಗಕ್ಕೆ ಬಡಗು-ತಿಟ್ಟಿನ ಯಕ್ಷಗಾನ ವೈಶಿಷ್ಟ್ಯತೆ ಕಾಣಬಹುದು. ಉದಾ:-ಉಡುಪಿ, ಕುಂದಾಪುರ, ಹಿರಿಯಡ್ಕ, ಇತ್ಯಾದಿ.

ತೆಂಕುತಿಟ್ಟು, ಬಡಗುತಿಟ್ಟುಗಳಲ್ಲಿ ಕನ್ನಡದ ಕಥಾಪ್ರಸಂಗಗಳು ಒಂದೇ ಆಗಿದ್ದರೂ ಕುಣಿತದ ಶೈಲಿ, ರಾಗಲಾಪನೆ, ವೇಷಭೂಷಣ, ವಾದ್ಯ ಪರಿಕರಗಳು ಮತ್ತು ಸಾದರ

ಪಡಿಸುವ ಬಗೆ ಭಿನ್ನವಾಗಿರುವುದನ್ನು ಗಮನಿಸಬಹುದು. ಇತ್ತೀಚಿನ ದಿನಗಳಲ್ಲಿ ತೆಂಕು ತಿಟ್ಟಿನ ಯಕ್ಷಗಾನ ಪ್ರಸಂಗಗಳಲ್ಲಿ 'ತುಳು'-ಭಾಷೆಯಲ್ಲಿ ರಚಿತಗೊಂಡ ಪ್ರಸಂಗಗಳು ಹೆಚ್ಚು ಬೇಡಿಕೆಯಲ್ಲಿರುವುದೂ ಗಮನಾರ್ಹ.

ಬಡಗು ಹಾಗೂ ತೆಂಕು ತಿಟ್ಟಿನ ಪ್ರಬೇಧಗಳನ್ನು ಅನುಸರಿಸಿಯೇ ಗೊಂಬೆಯಾಟ ಕಲಾ-ಪ್ರಕಾರವೂ ಕೂಡ ಯಕ್ಷಗಾನ ಬಯಲಾಟದಷ್ಟು ಜನಮನ್ನಣೆ ಪಡೆದಿದೆ.

ದ.ಕ. ಜಿಲ್ಲೆಯಲ್ಲಿನ ಗೊಂಬೆಯಾಟ ಪ್ರಕಾರಗಳನ್ನು ಗಮನಿಸಿದಲ್ಲಿ ಈ ಮಾಧ್ಯಮವು ಯಕ್ಷ ಗಾನ ಪರಂಪರೆಯನ್ನು ಅನುಸರಿಸಿ ಮುಂದುವರೆದಿರುವುದು. ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕ (ಮೈಸೂರು ವಿಭಾಗ) ಪ್ರಾಂತ್ಯದಲ್ಲಿರುವಂತೆ ಸೂತ್ರ ಮತ್ತು ಸರಳ ತಂತ್ರದ ಗೊಂಬೆಗಳಾಗಲಿ ಅಥವಾ 'ಸಲಾಕಿ ಗೋಂಬೆಯಾಟ'-ದ ಕೌಶಲ್ಯತೆಯು ತಂತ್ರ ಗಳನ್ನು ಅಳವಡಿಸಿಕೊಂಡ ಯಾವುದೇ ಮಾದರಿ ದ.ಕ. ಜಿಲ್ಲೆಯಲ್ಲಿನ ಗೊಂಬೆಯಾಟಗಳಲ್ಲಿ ಕಾಣ ಸಿಗುವುದಿಲ್ಲ. ಹೆಚ್ಚಾಗಿ ಸೂತ್ರದ ಸಹಾಯದಿಂದ ಚಾಲನೆಗೆ ಸಿದ್ಧವಾಗಬಲ್ಲ-ರಂಗ ತಂತ್ರ, ಗೊಂಬೆಗಳ ಪ್ರತಿಮೆ, ನಮೂನೆ ಪ್ರಚಲಿತದಲ್ಲಿರುವುವು.

ದಕ್ಷಿಣ ಕರ್ನಾಟಕದ ಗೊಂಬೆಯಾಟಗಳಲ್ಲಿ ಪ್ರಸಿದ್ಧಿಗೊಂಡ ಮುಖ್ಯ ತಂಡಗಳಲ್ಲಿ **'ಉಪ್ಪಿನ ಕುದ್ರು' ಶ್ರೀ ಗಣೇಶ ಯಕ್ಷಗಾನ ಗೊಂಬೆಯಾಟ-ಕುಂದಾಪುರ**-ಈ ಗೊಂಬೆ ಯಾಟದ ತಂಡ ಹಲವಾರು ಬಾರಿ ದೇಶ ವಿದೇಶಗಳಲ್ಲಿ ಸಂಚರಿಸಿ ಯಕ್ಷಗಾನ ಸಂಸ್ಕೃತಿ ಯನ್ನು ಗೊಂಬೆಯಾಟದ ಮೂಲಕ ಪರಿಚಯಿಸಿದೆ. ಇದರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದ ಮನೆತನವೆಂದರೆ ಶ್ರೀ ದೇವಣ್ಣ ಕಾಮತ್ ಹಾಗೂ ಕೊಗ್ಗ ಕಾಮತ್. ಇವರು ಗಳು ನೀಡುವ ಯಕ್ಷಗಾನ ಪ್ರಸಂಗಗಳು ಬಡಗು ಯಕ್ಷಗಾನ ಮಾದರಿಯಲ್ಲಿರುವುವು.

ತೆಂಕಲ ಭಾಗದಲ್ಲಿ ಇತ್ತೀಚೆಗೆ ಬೆಳವಣಿಗೆ ಹೊಂದುತ್ತಿರುವ ಮತ್ತೊಂದು ತಂಡ 'ಶ್ರೀ ಮಹಾಮಾಯೀ' ಬೆಳ್ತಂಗಡಿಯಲ್ಲಿರುವ ಶ್ರೀ ಮುಂಡಪ್ಪ ಶೆಟ್ಟಿ ಮತ್ತು ಬಳಗ ಸುಮಾರು 1976ರಿಂದ ಗೊಂಬೆಯಾಟ ಕಲೆಯನ್ನು ಒಂದು ಹವ್ಯಾಸ ಮತ್ತು ಅರೆವೃತ್ತಿ ಕಲೆಯಾಗಿ ಪ್ರಾರಂಭಿಸಿಕೊಂಡಿರುವರು. ಅಂತೆಯೇ ಕಾಸರಗೋಡಿನಲ್ಲಿ ಮತ್ತು ಉಪ್ಪುಂದ (ಕುಂದಾ ಪುರ) ತಾಲೂಕು ಈ ಭಾಗಗಳಲ್ಲಿಯೂ ಆಯಾಯ ಪ್ರಾಂತ್ಯಕ್ಕೆ ಅನುಗುಣವಾಗಿರುವ ಯಕ್ಷಗಾನ ಮಾದರಿಯಲ್ಲಿ ಗೊಂಬೆಯಾಟ ಪ್ರಚಲಿತದಲ್ಲಿರುವುದು. ಒಟ್ಟಿನಲ್ಲಿ ಕೈಬೆರಳೆಣಿಕೆಗೆ ಸಿಗುವಷ್ಟು ಮಾತ್ರ ದ.ಕ. ಜಿಲ್ಲೆಯಲ್ಲಿ ಗೊಂಬೆಯಾಟ ತಂಡಗಳಿವೆ. ಪ್ರಾಚೀನ ಇತಿಹಾಸ ವುಳ್ಳ ಗೊಂಬೆಯಾಟದ ತಂಡವೆಂದರೆ 'ಉಪ್ಪಿನಕುದ್ರು'-ಕಾಮತ್ ಮನೆತನದ ಗೊಂಬೆ ಯಾಟ ಸುಮಾರು 300 ಅಥವಾ 350 ವರ್ಷಗಳ ಪ್ರಾಚೀನತೆ ಮತ್ತು ಇತಿಹಾಸ ಉಳಿಸಿಕೊಂಡಿದೆ.

ಗೊಂಬೆಯಾಟ ಹುಟ್ಟಿ ಬೆಳೆದುದು ಭಾರತದಲ್ಲಿಯೇ ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವು ಇನ್ನೂ ಚರ್ಚಾಸ್ಪದವಾಗಿಯೇ ಉಳಿದಿವೆ. 'ಸೂತ್ರಧಾರ'-ಎಂಬ ಪದ ಸೂತ್ರದ ಮುಖೇನ ಕುಣಿಸುವ ಗೊಂಬೆಯಾಟ ಕುರಿತದ್ದಾಗಿರುವುದು. ಈ ವಿಶ್ವವನ್ನು

ಪರಮಾತ್ಮನು ರಾಜಸ, ಸಾತ್ವಿಕ ಮತ್ತು ತಾಮಸ-ಮೂರು ಗುಣಗಳ ಸೂತ್ರದನ್ವಯ ಆಡಿಸುವನು. ಶ್ರೀಕೃಷ್ಣ-ಸೂತ್ರಧಾರಿ, ಜಗನ್ನಿಯಂತ್ರಕ ಇತ್ಯಾದಿ ಶ್ರೀಮದ್ ಭಾಗವತ ಪುರಾಣದಲ್ಲಿ ಸೂಚಿತವಾಗಿದೆ.

ಕರ್ನಾಟಕದಲ್ಲಿ ಗೊಂಬೆಯಾಟಕ್ಕೆ ತನ್ನದೇ ಆದ ಇತಿಹಾಸವಿದೆ. ಸಕಲ ಪುರಾತನರ ವಚನ ಗಳಲ್ಲಿ **ಸೂತ್ರದ ಗೊಂಬೆಗೆ ಪ್ರಾಣವುಂಟೇ** ಎಂಬ ಉಲ್ಲೇಖವಿದೆ.[1] (ಸು. 12-ನೇ ಶತಮಾನ)

ಶ್ರೀಮತಿ ಯಶೋದಾ ಅವರು ಕ್ರಿ.ಶ. 1435ರಲ್ಲಿ ಗೊಂಬೆಯಾಟಕ್ಕಾಗಿಯೇ ಬರೆದಿರುವ 'ಗಂಗೆ-ಗೌರಿ ಸಂವಾದ' ಎಂಬ ಪ್ರಸಂಗವನ್ನು ಬಳಸುತ್ತಿದ್ದುದಾಗಿ ಮತ್ತು ಪ್ರಸಂಗದ ಪತ್ಯವನ್ನು ಸಂಗ್ರಹಿಸಿರುವುದಾಗಿ ತಿಳಿಸಿರುವರು.[2]

ಸಂಸ್ಕೃತದಲ್ಲಿ ಗೊಂಬೆಯಾಟಕ್ಕೆ 'ಪುತ್ಥಲಿ ಕ್ರೀಡೆ' ಎಂಬುದಾಗಿ ಕರೆಯಲಾಗಿದೆ. 'ಪುತ್ಥಲಿಕ ಅಥವಾ ಪುತ್ಥಿಕ' ಎಂದರೆ 'ಜೀವ ಇರುವ ಬಾಲಕ'-ಎಂಬುದಾಗಿ ಡಾ. ಕಮಲಾದೇವಿ ಚಟ್ಟೋಪಾಧ್ಯಾಯ ತಿಳಿಸಿರುವರು. ಅವರೇ ಸೂಚಿಸುವಂತೆ ಸೂತ್ರದ ಗೊಂಬೆಯಾಟದ ಪ್ರಾಚೀನತೆ ಭರತನ ನಾಟ್ಯಶಾಸ್ತ್ರದ ಕಾಲದಷ್ಟು ಪುರಾತನವಾದುದು (ಸು. ಕ್ರಿ.ಪೂ. 2ನೇ ಶತಮಾನದಿಂದ ಕ್ರಿ.ಶ. 4ನೇ ಶತಮಾನ)[3]

ವಿಜಯನಗರದ ಕಾಲದಲ್ಲಿ (16-ನೇ ಶತಮಾನ) ಕರ್ನಾಟಕದ ಗೊಂಬೆಯಾಟ ತಂಡಗಳ ಪ್ರದರ್ಶನ ನೀಡಿದ್ದುದರ ಬಗ್ಗೆ ಆಧಾರಗಳಿವೆ. ಉದಾ :-ಕರ್ನಾಟಕ ಚಿತ್ರಕಲಾ ಪರಿಷತ್-ಬೆಂಗಳೂರು, ಜಾನಪದ ಸಂಗ್ರಹಾಲಯದಲ್ಲಿ ಒಂದು ಹೆಣ್ಣುಗೊಂಬೆ (ಪುತ್ಥಲಿ) ಇರುವುದು. ಈ ಹೆಣ್ಣುಗೊಂಬೆಯ ವೈಶಿಷ್ಟ್ಯವೇನೆಂದರೆ ಸೂತ್ರದ ಸಹಾಯದಿಂದ ಕಣ್ಣುಗಳು ಚಾಲನೆ ಮಾಡುವಂತಹ ತಂತ್ರ (ಟೆಕ್ನಿಕ್) ಬಳಸಿರುವುದನ್ನು ಗಮನಿಬಹುದಾಗಿದೆ. ಚಿತ್ರಕಲಾ ಪರಿಷತ್ ಕಾರ್ಯದರ್ಶಿ ಶ್ರೀ ಎಂ.ಎಸ್. ನಂಜುಂಡರಾವ್ ಅವರು ತಿಳಿಸಿರುವಂತೆ 'ಹೆಣ್ಣುಗೊಂಬೆ ವಿಜಯನಗರ ಕಾಲದಲ್ಲಿ ಪ್ರದರ್ಶಿತಗೊಂಡಿರುವುದಾಗಿ, ತದನಂತರ ಅದರ ಸಂರಕ್ಷಣೆ ಮಾಡಿಕೊಳ್ಳಲಾಗದೆ ಓರ್ವ ವಿಶ್ವಕರ್ಮಿ ಸಂಗ್ರಹಾಲಯದಲ್ಲಿರಲೆಂದು ನೀಡಿರುವರು.[4] ಚರಿತ್ರೆಗಳಲ್ಲಿ, ಶಾಸನಗಳಲ್ಲಿಯೂ ಗೊಂಬೆಯಾಟದ ಪ್ರಸ್ತಾವನೆಗಳಿವೆ[5] (ಹೆಚ್ಚಿನ ವಿವರಗಳಿಗೆ ನೋಡಿ).

ಕರಾವಳಿ ಕರ್ನಾಟಕದಲ್ಲಿನ ಗೊಂಬೆಯಾಟದ ಚರಿತ್ರೆ ಕುರಿತು ಶ್ರೀ ಕೊಗ್ಗ ಕಾಮತ್ ಅವರು ತಿಳಿಸುವಂತೆ ಸುಮಾರು 1930ರ ಸಾಲಿನಲ್ಲಿ ಬಸ್ರೂರು, ಬಾರಕೂರು, ಕೊಕ್ಕರ್ಣೆ ಮತ್ತು ಮೂಡಬಿದ್ರೆ ಹೀಗೆ ಹಲವಾರು ಕಡೆ ಮೂವತ್ತಕ್ಕೂ ಹೆಚ್ಚು ತಂಡಗಳಿದ್ದವಂತೆ. ಕಾಲಕ್ರಮೇಣ ಪ್ರೋತ್ಸಾಹವಿಲ್ಲದೆ ನಶಿಸಿಹೋಗಿರಬಹುದೆಂಬುದಾಗಿ ಅಭಿಪ್ರಾಯಿಸಿರುವರು. ಶ್ರೀ ಕೊಗ್ಗ ಕಾಮತ್-ಅವರ ಮನೆತನವೂ ಕೆಲವು ಕಾಲ ಅತ್ಯಂತ ಬಡತನ ಅನುಭವಿಸಿ, ಗೊಂಬೆಗಳನ್ನು ಸಂರಕ್ಷಿಸಿಕೊಳ್ಳಲಾಗದೆ ಸಂಬಂಧೀಕರಿಗೆ ಮಾರಿದರಂತೆ. ಕಾಮತ್ ಮನೆತನದವರು ಗೊಂಬೆಯಾಟ ಬಿಟ್ಟರೂ ಗೊಂಬೆಗಳು ಇವರನ್ನು ಬಿಡಲಿಲ್ಲ. ಒಟ್ಟಿನಲ್ಲಿ ಸೂತ್ರದ

ಗೊಂಬೆಯಾಟದ ನೇತಾರರಾದ ಕಾಮತ್ ಮನೆತನದ ಹಿನ್ನೆಲೆಯನ್ನು ಗಮನಿಸಿದಾಗ ಸುಮಾರು ನಾಲ್ಕು ತಲೆಮಾರಿನವರೆಗೆ ವಾಂಶಿಕ ಮಾಹಿತಿ ಅಲ್ಪಸ್ವಲ್ಪ ಲಭ್ಯವಾಗುವುದು.

**ಗೊಂಬೆಯಾಟದ ಕಾಮತ್ ಮನೆತನದವರ ವಂಶಾವಳಿ**

ಬಾಬು ಕಾಮತ್-ಬಹುಶ ಮೂಲಸ್ಥಾಪಕರು (ಕಾಲ ತಿಳಿದಿಲ್ಲ)

|

ಲಕ್ಷ್ಮಣ ಕಾಮತ್ (ಕಾಲ ತಿಳಿದಿಲ್ಲ)

| | |
|---|---|---|
| ವೆಂಕಟರಮಣ ಕಾಮತ್ (ಗೊಂಬೆಯಾಟ ತಿಳಿದಿರಲಿಲ್ಲ) | ನರಸಿಂಹ ಕಾಮತ್ | ಮಂಜಪ್ಪ ಕಾಮತ್ |

ಮಂಜಪ್ಪ ಕಾಮತ್

|

ಗಣಪಯ್ಯ ಕಾಮತ್ (ಕಾಲ ತಿಳಿದಿಲ್ಲ)

|

ದೇವಣ್ಣ ಕಾಮತ್ (1889-1971)

|

ಕೊಗ್ಗ ಕಾಮತ್ (28 ನವೆಂಬರ್ 1921-ಜನನ)

ಸುಮಾರು ಮುನ್ನೂರು-ಮುನ್ನೂರ ಐವತ್ತು ವರ್ಷಗಳ ಹಿಂದೆ ಒಂದೇ ಮನೆತನದ ಅಣ್ಣ-ತಮ್ಮಂದಿರಾದ ಲಕ್ಷ್ಮಣ್ ಕಾಮತ್, ನರಸಿಂಹ ಕಾಮತ್, ಮಂಜಪ್ಪ ಕಾಮತ್, ರಂಗಯ್ಯ ಕಾಮತ್-ಇವರುಗಳು ತಿಳಿಸಿದ ಅಭಿಪ್ರಾಯಗಳು ಗೊಂಬೆಯಾಟದ (ದ.ಕ. ಜಿಲ್ಲೆಯ) ನಿರ್ಮಾಣಕ್ಕೆ ಗಮನಾರ್ಹವಾಗಿವೆ.

"ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ ಅಣ್ಣ-ತಮ್ಮಂದಿರು ಪ್ರಾರಂಭದ ದಿನದಲ್ಲಿ ಬೇಸಾಯವನ್ನೇ ಅವಲಂಭಿಸಿದ್ದರು. ನಿರಕ್ಷರಕುಕ್ಷಿಗಳಾದ ಇವರು ಗದ್ದೆಯಕೆಲಸ ಮುಗಿದ ತರುವಾಯ ಮನರಂಜನೆಗಾಗಿ ಗೊಂಬೆಯಾಟ ನಿರ್ಮಿಸುವ ಪ್ರದರ್ಶಿಸುವ ಸ್ವಂತ ತಂಡ ಮಾಡಿಕೊಂಡರು. (ಆಚಾರಿ-ವರ್ಗದಲ್ಲಿ ಕರಗತವಾಗಿದ್ದ ಈ ಗೊಂಬೆಯಾಟ ಕಲೆಯನ್ನು ಕಾಮತ್ ಮನೆತನದವರು ಕಲಿತಿದ್ದಿರಬಹುದೆಂದು ಅಭಿಪ್ರಾಯಿಸಲಾಗಿದೆ[6])

ಹಿರಿಯರಾದ ಶ್ರೀ ಲಕ್ಷ್ಮಣ ಕಾಮತ್ ಅವರು ಉಳಿದ ಮೂವರು ತಮ್ಮಂದಿರಿಗೆ ಮಾರ್ಗ ದರ್ಶಿಯಾಗಿ ಮುಂದೆ ನಿಂತು ಒಂದು ಅರೆಕಾಲಿಕ ಉದ್ಯೋಗವನ್ನಾಗಿ ಮಾಡಿಕೊಂಡರು. ಶ್ರೀ ಲಕ್ಷ್ಮಣ ಕಾಮತ್ ಅವರು ಗೊಂಬೆ ಕುಣಿಸುವುದು, ನಿರ್ಮಾಣ ಮಾಡುವುದರಲ್ಲಿ ನಿಪುಣರಿದ್ದರಂತೆ. ಉಳಿದವರು ಮದ್ದಳೆ, ಚಂಡೆ, ಭಾಗವತಿಕೆ ಮತ್ತು ಗೊಂಬೆಗಳನ್ನು ಕುಣಿಸುವಿಕೆ ನಡೆಸಿಕೊಡುತ್ತಿದ್ದರು. ಅಣ್ಣ-ತಮ್ಮದಿರೆಲ್ಲರೂ ಕೂಡಿ ಗೊಂಬೆಯಾಟದಲ್ಲಿ

ಹೆಸರು ಗಳಿಸಿದ್ದುದರಿಂದ ಕಾಮತ್-ಅವರ ಮನೆಗೆ 'ಭಾಗವತರ ಮನೆತನ' ಎಂಬ ಖ್ಯಾತಿಯೂ ಬಂದಿತು.[7]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಗೊಂಬೆಯಾಟದ ಪ್ರತಿಮೆಗಳಿಗೂ ಮತ್ತು ದೇವಸ್ಥಾನಗಳಲ್ಲಿ ಕಾಣಸಿಗುವ ಮರದಿಂದ ಮಾಡಲ್ಪಟ್ಟ ಭೂತದ ಉರುಗಳು (ಮೆಕ್ಕೆಕಟ್ಟೆ ದೇವಸ್ಥಾನ) ಅಥವಾ ದೈವಗಣದ ಶಿಲ್ಪಗಳಲ್ಲಿಯೂ ಕೆಲವು ಸಾಮ್ಯತೆ ಇರುವುದನ್ನು ಗಮನಿಸಬಹುದಾಗಿದೆ.

**ಮೆಕ್ಕೆಕಟ್ಟೆ :** ಇದು (ಉಡುಪಿ ತಾ.) ಮರದ ಶಿಲ್ಪಗಳಿರುವ ಉರುಗಳಿಗೆ (ದೈವ ಗಣಗಳು) ಖ್ಯಾತಿ ಪಡೆದ ಸ್ಥಳ. ದೈವಗಣಗಳ ಒಟ್ಟು ಸುಮಾರು 150 ಪ್ರತಿಮೆ ಮರದಲ್ಲಿ ಕೆತ್ತಲ್ಪಟ್ಟಿವೆ. ಪ್ರತಿಮೆಗಳ ಆಕಾರದಲ್ಲಿ ಭಿನ್ನತೆ ಇದ್ದರೂ ಮುಖಭಾಗದ ಪ್ರಮಾಣ ಹಾಗೂ ಕಪೋಲಗಳ ಕೆಳಭಾಗದಲ್ಲಿ ತಿದ್ದಲ್ಪಟ್ಟ ರೂಪ ಸಾಮ್ಯತೆಯನ್ನು ಗೊಂಬೆಯಾಟದಲ್ಲಿನ ಗೊಂಬೆಗಳಲ್ಲಿ ಗುರುತಿಸಬಹುದಾಗಿದೆ. ದೈವಗಣದ ವರ್ಗದಲ್ಲಿ ಅತಿದೊಡ್ಡ ಮರದ ಶಿಲ್ಪ (ಸು. 22 ಅಡಿ ಎತ್ತರ) ರಾಹುತಮಲ್ಲ ಮತ್ತು ಕೇಚ(ರ)ಮಲ್ಲ ದೈವ. ಈ ಶಿಲ್ಪದ ಕಿರೀಟವು ಯಕ್ಷಗಾನದ ರಾಜ ಕಿರೀಟದ ಪ್ರತಿಮೆಯನ್ನು ಪ್ರತಿಬಿಂಬಿಸುವುದರಲ್ಲಿ ಸಂಶಯವಿಲ್ಲ. ಇಂದು ಮೆಕ್ಕೆಕಟ್ಟೆಯಲ್ಲಿ ಕಾಣಸಿಗುವ ಅನೇಕ ಉರುಗಳು ಪೂಜಾರ್ಹವಾಗಿ ಬಲಿ-ಉತ್ಸವ ಇತ್ಯಾದಿ ಭಕ್ತಾದಿಗಳಿಂದ ಸೇವೆ ಪಡೆಯುವ ದೈವಗಳಾಗಿ ಸ್ಥಾಪಿತಗೊಂಡಿವೆ. ಇಲ್ಲಿರುವ ಪ್ರತಿಮಾಶಿಲ್ಪದ ಶೈಲಿ ಹಾಗೂ ಇತರೆಡೆ ದೊರೆಯುವ ಶಿಲ್ಪಗಳೊಡನೆ ತೌಲನಿಕ ಅಧ್ಯಯನ, ಸಂಶೋಧನೆ ನಡೆಯಬೇಕಾಗಿದೆ. ಮೆಕ್ಕೆಕಟ್ಟೆ ಸ್ಥಳದಲ್ಲಿ ಸ್ಥಾಪಿಸಲ್ಪಟ್ಟ ದೈವಗಣಗಳನ್ನು ನಿರ್ಮಿಸಿದವರು. (ಪ್ರತಿಮೆ ಕೆತ್ತಿದ ಶಿಲ್ಪಿಗಳು) ಗುಡಿಗಾರರು ಮತ್ತು ಆಚಾರಿಗಳು. ಇದೇ ವಂಶದವರಿಂದ ಕಾಮತ್-ಅವರ ಮನೆತನದವರೂ ಗೊಂಬೆಗಳನ್ನು ಮಾಡಿಸಿಕೊಂಡಿರುವುದಾಗಿ ತಿಳಿದು ಬಂದಿದೆ.

ಸುಮಾರು 1921ಕ್ಕೂ ಪೂರ್ವದಲ್ಲಿನ ಗೊಂಬೆಗಳು ಸೂತ್ರಬದ್ಧವಾಗಿದ್ದರೂ ಇಂದಿನ ದಿನದಲ್ಲಿ ಅಭಿವೃದ್ಧಿ ಹೊಂದಿದ ಮಾದರಿಯಲ್ಲಿ ಗೊಂಬೆಗಳು ರೂಪಿತಗೊಂಡಿರಲಿಲ್ಲ.

ದ.ಕ ಜಿಲ್ಲೆಯಲ್ಲಿ ಗೊಂಬೆಗಳ ಶೈಲಿ ವೈವಿಧ್ಯಪೂರ್ಣವಾಗಿ ಕೈ-ಕಾಲು ಸಂಪೂರ್ಣ ಚಾಲನೆಗೆ ಒಳಗಾಗುವ ಸ್ಥಿತಿಯಲ್ಲಿರುವಂತೆ, ಗೊಂಬೆಯಾಟಕಾರರೇ ತಿಳಿಸುವಂತೆ ಗೊಂಬೆಗಳ ಪ್ರಮಾಣ 2ರಿಂದ 3 ಅಡಿ ಹೊಂದಿದ್ದು ಕೈ-ಕಾಲುಗಳು ನೇರವಾಗಿರುವಂತೆ ಅಳವಡಿಸಲಾಗುತ್ತಿತ್ತು. ಭುಜದ ಬಳಿ ಮತ್ತು ಸೊಂಟದ ಬಳಿ ಕೀಲುಗಳು ಹೊಂದಿರುತ್ತಿದ್ದವು. ಕುತ್ತಿಗೆ ಭಾಗದಲ್ಲಿ ರುಂಡವನ್ನು ಬಿಗಿಯಾಗಿಸಲು ಬಿಗಿಯಾದ ದಾರ, ಕಡೆದ ದೇಹದ ಒಳಮುಖದಲ್ಲಿ ಹಾಯಿಸಿ ಬಿಗಿಯಲ್ಪಡುತ್ತಿತ್ತು. ಹೀಗಾಗಿ ಕುತ್ತಿಗೆಯ ಚಾಲನೆಗೆ ಅವಕಾಶ ಕಡಿಮೆ ಇತ್ತೆಂದೇ ಊಹಿಸಬಹುದು". ಇತ್ತೀಚಿನ ದಿನಗಳಲ್ಲಿ ಸಹಜವಾಗಿ ಮನುಷ್ಯನ ದೇಹದ ಭಾಗದ ಸಂದುಗಳಿಗೆ ಹೊಂದಿಕೆಯಾಗುವ ಮಾದರಿಯಲ್ಲಿ ಕೀಲುಗಳನ್ನು ನಿರ್ಮಿಸಿ ಗೊಂಬೆಯನ್ನು ತಯಾರಿಸಿಕೊಳ್ಳುತ್ತಿರುವರು. ಹೀಗೆ ಅಭಿವೃದ್ಧಿ ಪಡಿಸಲು ಹೊರಟವರಲ್ಲಿ

ಶ್ರೀ ದೇವಣ್ಣ ಕಾಮತ್ ಮೊದಲಿಗರು.

**ಗೊಂಬೆಗಳ ತಯಾರಿಕೆ ಸಾಮಾಗ್ರಿ :** ಗೊಂಬೆಗಳನ್ನು ತಯಾರಿಸಲು ಬೇಕಾದ ಮುಖ್ಯ ವಸ್ತು ಮರ-ಕಟ್ಟಿಗೆ. ಹಗುರವಾಗಿರುವ ಹಾಗೂ ಗಟ್ಟಿಮುಟ್ಟಾಗಿ ಬಾಳಿಕೆ ಬರಬಲ್ಲ ಮರದ ತುಂಡನ್ನು ಆಯ್ದುಕೊಳ್ಳುವುದಿದೆ. ಉದಾ :-ಕರಾವಳಿ ಕರ್ನಾಟಕದಲ್ಲಿ ಉಪ ಯೋಗಿಸುವ ಮರ ಬಿಳಿಆಲೆ, ಬೆಳ್ಳಂದಿ ಮತ್ತು ಕರಿಯಾಲೆ ಅತಿ ದೊಡ್ಡ ಪ್ರಮಾಣದ ಗೊಂಬೆಗಳೆಂದರೆ ರಾವಣ ಹಾಗೂ ರಾಕ್ಷಸ ಪಾತ್ರಗಳು ಉದಾ :-3 ಅಡಿ ಎತ್ತರ ಸಾಮಾನ್ಯ ಪ್ರಮಾಣದಲ್ಲಿ ಸ್ತ್ರೀ ಪಾತ್ರದ ಗೊಂಬೆಗಳನ್ನು ನಿರ್ಮಿಸುವರು. ಉದಾ :-ಒಂದೂವರೆ ಅಡಿ ಯಿಂದ 2 ಅಡಿ ಎತ್ತರ, ಕನಿಷ್ಟ ಪ್ರಮಾಣದಲ್ಲಿನ ಗೊಂಬೆಗಳ ತಯಾರಿಕೆಯಲ್ಲಿ ಸಣ್ಣಪುಟ್ಟ ಪ್ರಾಣಿಗಳನ್ನು ಗಮನಿಸಬಹುದು. ಉದಾ :-ಇಲಿ, ಹಾವು ಮತ್ತು ಗರುಡ.

ಗೊಂಬೆಗಳ ತಯಾರಿಕೆಯಲ್ಲಿ ಸಣ್ಣಪುಟ್ಟ ಕುಸುರಿ ಕೆಲಸಗಳು ಹೆಚ್ಚು ಶೋಭೆಯನ್ನು ತರ ಬಲ್ಲುದು. ಕಟ್ಟಿಗೆ ತುಂಡಿನಿಂದ ಮುಖ, ಕೈ, ಕಾಲು-ಆಭರಣದ ಆಕಾರ ಇತ್ಯಾದಿ ಭಾಗ ಗಳನ್ನಷ್ಟೇ ಕಲಾತ್ಮಕವಾಗಿ ಪ್ರತಿಮೆಗೆ ಹೊಂದುವಂತೆ ರೂಪಿಸಿಕೊಳ್ಳುವರು. ಗೊಂಬೆ ಯಾಟಕಾರರು ಕೆಲವೊಮ್ಮೆ ಸ್ವತಹ ಪ್ರತಿಮೆಗೆ ಹೊಂದುವಂತೆ ರೂಪಿಸಿಕೊಳ್ಳುವರು. ಗೊಂಬೆಯಾಟಕಾರರು ಕೆಲವೊಮ್ಮೆ ಸ್ವತಹ ಗೊಂಬೆಗಳನ್ನು ತಯಾರಿಸಿಕೊಳ್ಳುವರು ಅಥವಾ ನಿಪುಣ ಕಲಾವಿದನಿಂದ ಮಾಡಿಸಿಕೊಳ್ಳುವುದಿದೆ. ಅಷ್ಟಾಂಶ ಪದ್ಧತಿ ಪ್ರಕಾರ-ಮುಖದ ಭಾಗ ಮಾಡುವಾಗ ಮೂರು ಪ್ರಮಾಣದ ಲೆಖ್ಖವನ್ನು ಸೂತ್ರಬದ್ಧವಾಗಿಟ್ಟುಕೊಳ್ಳು ವುದು ರೂಢಿ. ಉದಾ :-ಒಂದು ಪ್ರತಿಮೆಯ ಬಿಂಬ ಅಥವಾ ಮುಖದ ಭಾಗ ತಯಾರಿಕೆ ಯಲ್ಲಿ ಹಣೆ, ಮೂಗು ಮತ್ತು ಗದ್ದ-ಇದರ ಮೂರೂ ಪ್ರಮಾಣಗಳು ಸರಿಸಮನಾದ ಅಳತೆಯಲ್ಲಿಟ್ಟುಕೊಂಡು ಗೊಂಬೆ ತಯಾರಿಸುವರು. ಅಂತೆಯೇ ಮುಖದ ಪೂರ್ಣ ಪ್ರಮಾಣದ ಎರಡರಷ್ಟು ಸೊಂಟದವರೆಗೆ ಹಾಗೂ ಒಂದು ಅಥವಾ ಒಂದೂವರೆ ಭಾಗ ಕಾಲುಗಳ ರಚನೆಗೆ ಇಟ್ಟುಕೊಳ್ಳುವರು. ತಲೆಯ ಕಿರೀಟ ಅಥವಾ ಮುಂಡಾಸು ಕಿರೀಟ ಮತ್ತು ರಾಜಕಿರೀಟ ಇವುಗಳ ಪ್ರಮಾಣವು ಗೊಂಬೆಯ ಮುಖದ ಪ್ರಮಾಣದ ಅರ್ಧ ಭಾಗ ಇರುವಂತೆ ಪ್ರತಿಮೆ ಸಿದ್ಧಗೊಳಿಸುವರು. ರಾಕ್ಷಸ ಪಾತ್ರಗಳಿಗೆ ಗಾತ್ರ ಹಾಗೂ ಪ್ರಮಾಣದಲ್ಲಿ ವ್ಯತ್ಯಾಸ ಹೊಂದಿರುತ್ತವೆ.

**ಗೊಂಬೆಗಳ ಬಣ್ಣಲೇಪನ ಮತ್ತು ತಯಾರಿಕೆ :** ಕರ್ನಾಟಕದ ಯಾವುದೇ ಭಾಗದಲ್ಲಿ ರುವ ಗೊಂಬೆಯಾಟದ ಕಲಾಕಾರರು ಪ್ರಸ್ತುತ ಸ್ಥಿತಿಯಲ್ಲಿ ಉಪಯೋಗಿಸುವ ಬಣ್ಣ ಎಂದರೆ ಅಂಗಡಿಯಲ್ಲಿ ದೊರಕುವ ರಾಸಾಯನಿಕ ಬಣ್ಣಗಳು.

ಸಹಜವಾಗಿ ಪರಂಪರೆಯ ಕೈ-ಬಣ್ಣ ಅಥವಾ ದೇಶೀ ಮಾದರಿಯ ಬಣ್ಣ ಲೇಪನ, ತಯಾ ರಿಕೆ ಮತ್ತು ಸಂಸ್ಕರಣ ವಿಧಾನಗಳನ್ನು ಕಲಾವಿದ ಅನುಭವದಿಂದ ನೋಡಿ-ಮಾಡಿ ತಿಳಿದುಕೊಂಡ ವಿದ್ಯೆ ಹೊರತು ಯಾವುದೇ ಬರಹದ ಶಾಸ್ತ್ರ-ಸೂತ್ರ ವಿಧಾನಗಳನ್ನು ಅನುಸರಿಸಿಲ್ಲ.

ಕರಾವಳಿ ಕರ್ನಾಟಕದ ಗೊಂಬೆಗಳ ಮೂಲ ಬಣ್ಣ ಹೇಗಿತ್ತೆಂದು ಕಾಣಬೇಕಾದರೆ ಹಳೆಯ ದೇವಸ್ಥಾನ, ಗರಡಿಗಳಲ್ಲಿ ಅವಶೇಷವಾಗಿ ಉಳಿದಿರಬಹುದಾದ ಮರದ ಶಿಲ್ಪದ ಕೆತ್ತನೆಯನ್ನು (ಉರುಗಳನ್ನು) ಹೆಚ್ಚಾಗಿ ಕುಂದಾಪುರದ ತಾಲ್ಲೂಕಿನ ಕೆಲವು ಪಳ್ಳಿಗಳಲ್ಲಿ ಇಂದಿಗೂ ಕಾಣ ಬಹುದಾಗಿದೆ. ಇಂದಿನ ಗೊಂಬೆಯ ಬಣ್ಣಗಳಿಗೂ, ಪರಂಪರೆಯ ಗೊಂಬೆಗಳ ಬಣ್ಣಗಳಿಗೂ ಬಹಳಷ್ಟು ಸಾಮ್ಯತೆ ಇದೆ. ಹಳೆಯ ಗೊಂಬೆಯ ಬಣ್ಣದ ಕಲಾತ್ಮಕತೆಯನ್ನು ಪ್ರತ್ಯಕ್ಷವಾಗಿ ನೋಡುವುದಾದಲ್ಲಿ ಕೊಳ್ಕೆಬೈಲು **ಬೈದಕ್ಕಳ ಗರಡಿ** (ಉಡುಪಿ ತಾಲೂಕು ಸಾಯಬರ ಕಟ್ಟೆ ಗ್ರಾಮ) ಯಲ್ಲಿನ ಕೆಲವು ಮರದ ಶಿಲ್ಪ. ವರ್ಣ ವಿನ್ಯಾಸ ಗಮನಿಸಬಹುದು. ಹೀಗಾಗಿ ದೇವಸ್ಥಾನ, ಗರಡಿಗಳಲ್ಲಿ ಉಳಿದಿರಬಹುದಾದ ಕೈ-ಬಣ್ಣದ ವಿನ್ಯಾಸಗಳು ಗೊಂಬೆಯಾಟದ ಗೊಂಬೆಗಳಲ್ಲಿಯೂ ಇತ್ತೆಂಬುದು, ಗುಡಿಕಾರರ ಅಭಿಪ್ರಾಯ.

ಕಲಾವಿದರು ತಿಳಿಸುವಂತೆ ಪರಂಪರೆಯಲ್ಲಿ ಬಿಳಿಬಣ್ಣಕ್ಕೆ ಸಮಾನವಾಗಿ 'ಸೇಡಿ' (ಬಿಳಿ ಜೇಡಿಮಣ್ಣು) ಬಳಸುತ್ತಿದ್ದರು. ಇದೇ ಬಣ್ಣದ ತಯಾರಿಕೆಗೆ ಉತ್ತರ ಕರ್ನಾಟಕದ (ಗೋಕಾಕ್) ಜಿನಗಾರರು 'ಹಳ್ಳದಕಲ್ಲು' ಅಥವಾ 'ಶಂಕದ ಕಲ್ಲು' (ಬಿಳಿ ಬಣ್ಣಕ್ಕಾಗಿ) ಅರೆದು ಉಪಯೋಗಿಸುತ್ತಿದ್ದರು.[8]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೊಂಬೆಯಾಟ ಕಲಾವಿದರು ಕೈ-ಬಣ್ಣ ತಯಾರಿಕೆಗೆ ಪರಂಪರೆ ಯಲ್ಲಿ ಕೆಲವು ಖನಿಜ ವಸ್ತುಗಳನ್ನು ಬಳಸುತ್ತಿದ್ದರೆಂದು ತಿಳಿದು ಬಂದಿದೆ.

ಉದಾ : ಹಳದಿ ಬಣ್ಣ-ತಯಾರಿಕೆಗೆ ಅರದಾಳ ಕಲ್ಲನ್ನೂ ಕೆಂಪು ಬಣ್ಣ ತಯಾರಿಗಾಗಿ ಇಂಗ ಲೀಕ ಮತ್ತು ಕಪ್ಪುಬಣ್ಣ ತಯಾರಿಕೆಯನ್ನು ಎಣ್ಣೆದೀಪದ ಕರಿ ಅಥವಾ ತೆಂಗಿನ ಚಿಪ್ಪನ್ನು ಸುಟ್ಟು ಅದರ ಮಸಿಯನ್ನು ನೀರಿನೊಂದಿಗೆ ಅರೆದು ಧೂಪದ ಮರದ ಅಂಟಿನೊಂದಿಗೆ ಬೆರೆಸಿ ಕೊಳೆಸಿ (ಸಂಸ್ಕರಿಸಿ) ಇಟ್ಟುಕೊಳ್ಳುತ್ತಿದ್ದರು.[9]

ಇಂದಿನ ದಿನದಲ್ಲಿ ಈ ಕೈ ಬಣ್ಣದ ಸಂಸ್ಕರಣ ರೀತಿ, ಪ್ರಯೋಗ ವಾಸ್ತವವಾಗಿ ಬಳಕೆಯಿಂದ ದೂರ ಸರಿದಿದೆ. ಶ್ರಮ ಇಲ್ಲದೆ ದೊರಕುವ ರಾಸಾಯನಿಕ ಬಣ್ಣ ಕೈಗೆ ಎಟಕುವಾಗ ಪರಂ ಪರೆಯ ಶ್ರಮ, ಶ್ರದ್ಧೆ-ಶಿಸ್ತು ಹೊರತಾಗಿ ತಮ್ಮ ಪೂರ್ವಜರಿಗೆ ತಿಳಿದಿರಬಹುದಾದ ಜ್ಞಾನ ಸಹಜವಾಗಿ ನಮ್ಮಿಂದ ಕಣ್ಮರೆಯಾಗುವುದು. ಹೀಗಾಗಿ ವರ್ಣ ವಿನ್ಯಾಸ, ಸಂಸ್ಕರಣ ಕುರಿತು ಆಸಕ್ತರಿಂದ ಸಂಶೋಧನೆ ನಡೆಯಬೇಕಾಗಿದೆ.

**ಬಣ್ಣಲೇಪನ :** ಮರದಿಂದ ತಯಾರಿಸಿದ ಗೊಂಬೆಗಳಿಗೆ ಬಣ್ಣ ಲೇಪನ ಮಾಡುವ ಮುನ್ನ ಒಂದು ಬಾರಿ ಹಳದಿ ಬಣ್ಣದ ಲಿಪ್ಪ (ಕೋಟಿಂಗ್) ತೆಳುವಾಗಿ ಹಚ್ಚುವುದು ಸಾಂಪ್ರ ದಾಯಿಕ ನಿಯಮ. ಈ ಹಿಂದೆ ತಿಳಿಸಿದ ಬಣ್ಣಕ್ಕೆ ಸಂಬಂಧಿಸಿದ ವಸ್ತುವನ್ನು ಚೆನ್ನಾಗಿ ನೀರಿನ ಜೊತೆಯಲ್ಲಿ ಮಿಶ್ರಯಿಸಿ ಅರೆದು, ಸೋಸಿ ಹದ ಮಾಡಿಟ್ಟುಕೊಳ್ಳುವರು. ಅಂತೆಯೇ ಪ್ರಾಥಮಿಕವಾಗಿ ಹಳದಿ ಬಣ್ಣದ ಲೇಪನವನ್ನು ತೆಳುವಾಗಿ ಹಚ್ಚಿ (ಮರದ ಗೊಂಬೆಯ ಹೊರ ಮೈ ಭಾಗಗಳಿಗೆ) ನೆರಳಿನಲ್ಲಿ ಒಣಗಲು ಬಿಡಬೇಕು. ತದನಂತರ ಆಯಾಯ ಗೊಂಬೆಗಳಿಗೆ ಮೂಲ ಬಣ್ಣವನ್ನು ಹಚ್ಚಿ ಒಣಗಿದ ನಂತರ, ಧೂಪದ ಮರದ ನೀರನ್ನು

(ತೆಳುವಾದ ಅಂಟು) ಗಟ್ಟಿಗೊಳ್ಳುವ ಮುನ್ನ ಗೊಂಬೆಯ ಬಣ್ಣದ ಲೇಪನದ ಮೇಲ್ಭಾಗಕ್ಕೆ ಸೂರ್ಯೋದಯವಾಗುವ ಮುನ್ನ ಹಚ್ಚಬೇಕು. ಇದರಿಂದ ಗೊಂಬೆಗಳ ಮೂಲಬಣ್ಣ ಕೈಗೆ ಅಂಟುವುದಿಲ್ಲ ಹಾಗೂ ಮುಖದ ಬಣ್ಣಗಳು ಎಣ್ಣೆಯ ದೀಪದ ಬೆಳಕಿನಲ್ಲಿ ಕಂಗೊಳಿಸುತ್ತವೆ. (ವಿದ್ಯುತ್-ದೀಪ ಬಳಸುವ ಮುನ್ನ ಗೊಂಬೆಯಾಟದವರು ಹಿಲಾಲು ದೀಪ-ಎಣ್ಣೆ ದೀಪ_ಗೊಂಬೆಗಳ ಪ್ರದರ್ಶನದಲ್ಲಿ ಬಳಸುತ್ತಿದ್ದರು)

ಶ್ರೀ ರಾಮಚಂದ್ರ ಗುಡಿಗಾರ (ಉಪ್ಪುಂದ-ಕುಂದಾಪುರ ತಾಲೂಕು) ತಿಳಿಸುವಂತೆ ಧೂಪದ ಮರದ ನೀರನ್ನು ಸಂಗ್ರಹಿಸುವ[9] ವಿಧಾನ ಇಂದು ರೂಢಿಯಲಿಲ್ಲ. ಧೂಪದ ಮರಕ್ಕೆ T ಆಕಾರದಲ್ಲಿ ಕಚ್ಚುಗೊಳಿಸಿ ತ್ರಿಕೋನ ಮಾದರಿಯಲ್ಲಿ ಮರದ ಬುಡದ ಬಳಿ ರಂಧ್ರ ಮಾಡಿಕೊಳ್ಳಬೇಕು. ತರುವಾಯ ಸಣ್ಣ ಒಂದು ಕುಡಿಕೆಯಲ್ಲಿ ಮರದ ಕಚ್ಚಿನಿಂದ ನೀರು ಸಂಗ್ರಹಿತವಾಗುವುದು. ಹೀಗೆ ಕುಡಿಕೆಯಲ್ಲಿ ಸಂಗ್ರಹಿತ ನೀರನ್ನು ಬಣ್ಣದ ಜೊತೆ ಕೊಳೆಯಿಸಿ ನಂತರ ಬಣ್ಣ ಹಚ್ಚುತ್ತಿದ್ದರಂತೆ.[10]

ಬಣ್ಣಗಳ ಲೇಪನವಾದನಂತರ ಗೊಂಬೆಗಳಿಗೆ ಬೇಕಾದ ಬೇಗಡೆ ಅಲಂಕಾರ ಹಾಗೂ ಗಾಜು, ಕಾಡುದುಂಬಿ (ಜೀರುಂಡೆ-ಬೀಟಲ್) ರೆಕ್ಕೆ ಅಥವಾ ಗಾಜಿನ ಕೊಳವೆಗಳು-ಇತ್ಯಾದಿ ಕಲಾತ್ಮಕವಾಗಿ ಜೇನು ಮೇಣ ಮತ್ತು ಹಲಸಿನ ಮೇಣ ಇವೆರಡರ ಸಮಪಾಲು ಮಿಶ್ರಣದಲ್ಲಿ ಅಂಟಿಸುತ್ತಿದ್ದರು.

**ಸೂತ್ರ ತಯಾರಿ ಮತ್ತು ರಚನೆ :** ಮರದ ಬೊಂಬೆಗಳಿಗೆ ಸೂತ್ರವಾಗಿ 5-6 ದಶಕಗಳ ಹಿಂದೆ ಸೆಣಬಿನ ನಾರು ಅಥವಾ ಭೂತಪರಂಗಿ ಗಿಡ ಅಥವಾ ಬೆಂಡೆಗಿಡ-ದ ನಾರು-ಇವುಗಳನ್ನು ಬಳಸುತ್ತಿದ್ದರು. ಭೂತಪರಂಗಿ ಗಿಡ ಅಥವಾ ಬೆಂಡೆಗಿಡವನ್ನು ನೀರಿನಲ್ಲಿ ಚೆನ್ನಾಗಿ ಕೊಳೆಯಿಸಿ ಸೂತ್ರ (ದಾರ) ತಯಾರಿಸಿಕೊಳ್ಳುತ್ತಿದ್ದರು. ಇಂದು ಮಾರುಕಟ್ಟೆಯಲ್ಲಿ ದೊರಕುವ ದಾರಗಳನ್ನು ಹೆಚ್ಚಾಗಿ ಬಳಸುತ್ತಾರೆ. ಸೆಣಬಿನ ನಾರು ಅಥವಾ ಪರಂಗಿ ಗಿಡದ ನಾರನ್ನು ಗೊಂಬೆಯ ಚಾರಿಗಳಿಗೆ (ಕೂದಲು) ಹಾಗೂ ಗಡ್ಡ-ಮೀಸೆ ತಯಾರಿಕೆಗೆ ಜೋಡಣೆಯಾಗುವಂತೆ ಅಂಟಿಸುತ್ತಿದ್ದರು. ಇಂದಿಗೂ ಒಂದೆರಡು ಋಷಿ ಪಾತ್ರದ ಗೊಂಬೆಗಳಲ್ಲಿ ಸೆಣಬಿನ ನಾರು ಅಥವಾ ಪರಂಗಿಗಿಡದ ನಾರಿನ ಹೊಂದಾಣಿಕೆಯನ್ನು ಗಮನಿಸಬಹುದಾಗಿದೆ.

**ಸೂತ್ರ ಹಾಯಿಸುವಿಕೆ ;** ನಾರಿನಿಂದ ತಯಾರಿಸಿದ ಸೂತ್ರವನ್ನು ಗೊಂಬೆಗಳ ಮೊಣಕಾಲಿನ ಮೇಲ್ಭಾಗದಲ್ಲಿ (ಎಡ-ಬಲ) ಸಮವಾಗಿ ಜೋಡಿಸಿ ಕುಣಿಸಲು ಯೋಗ್ಯವಾದ ಪ್ರಮಾಣದಲ್ಲಿ ಸೂತ್ರದ ಎರಡು ತುದಿಗಳನ್ನು ಅರ್ಧ ಅಡಿ ಕೋಲಿಗೆ ಸಿಕ್ಕಿಸುವರು. ಅದರಂತೆಯೇ ಎಡ-ಬಲ ಕೈಗಳ ಮುಂಭಾಗ ಹಾಗೂ ಎಡ-ಬಲದ ಕಿವಿಭಾಗಗಳಲ್ಲಿ ಸೂತ್ರ ಬಿಗಿದು-ಕ್ರಮವಾಗಿ ತುದಿಗಳೆರಡನ್ನು ಅರ್ಧಅಡಿ ಕೋಲಿಗೆ ಹೊಂದಿಸುವರು.[11]-ಹೀಗೆ ಒಂದು ಗೊಂಬೆಯಲ್ಲಿ ಆರು ಸೂತ್ರಗಳು ಅಡಕವಾಗಿದ್ದು, ಸೂತ್ರ-ನಿಯಂತ್ರಣಕ್ಕೆಂದೇ ಬಿಗಿದ ಅರ್ಧ ಅಡಿಯ ಮೂರು ಕೋಲುಗಳನ್ನು ಕುಣಿಸುವಾತ ಹಿಡಿದು ಆಟವಾಡಿಸುವುದು

ವಾಡಿಕೆ. ಒಟ್ಟಿನಲ್ಲಿ ಕಲಾಕಾರನ ಕೈ-ಚಳಕ ಮತ್ತು ಸಂಭಾಷಣೆ, ಹಿಮ್ಮೇಳ ಧ್ವನಿ ಮುಖೇನ ಆಟ ಕಳೆಗೊಳ್ಳುವುದು. ಕೆಲವೊಮ್ಮೆ ರಾಕ್ಷಸ (ದೈತ್ಯ) ಪಾತ್ರಗಳಿಗೆ ಒಂದು ಅಥವಾ ಎರಡು ಸೂತ್ರ ಹೆಚ್ಚಾಗಿ ಬಳಸುವುದೂ ರೂಢಿಯಲ್ಲಿದೆ.

**ಗೊಂಬೆಗಳ ವೇಷಭೂಷಣ:** ಕರಾವಳಿ ಕರ್ನಾಟಕದ ಬಡಗು-ತೆಂಕು ತಿಟ್ಟುಗಳಲ್ಲಿ ವೇಷ ಭೂಷಣಗಳು ವ್ಯತ್ಯಾಸಗಳಿರುವಂತೆ, ಗೊಂಬೆಗಳ ವೇಷಭೂಷಣ ಕೂಡ 'ಯಕ್ಷಗಾನ ಬಯಲಾಟ'-ದ ಕ್ರಮದಂತೆ ಚಾಲ್ತಿಯಲ್ಲಿದೆ. ಕೊಗ್ಗ ಕಾಮತ್-ಅವರು ತಿಳಿಸುವಂತೆ ಇಂದು ಸುಧಾರಿತ ವೇಷಭೂಷಣಗಳು ಪ್ರವೇಶಿಕೆ ಶೈಲಿ ಪಡೆದುಕೊಂಡಿರುವುದು, ಮುಖ್ಯವಾಗಿ ಇಂದಿನ 'ಯಕ್ಷಗಾನ ಬಯಲಾಟ'ದ ಪ್ರಭಾವ ಎಂದೇ ಹೇಳಬಹುದು. 1921-ರ ಪೂರ್ವ ದಲ್ಲಿ ಪ್ರತಿಗೊಂಬೆಯೂ ಎದೆ ವಸ್ತ್ರ ಅಥವಾ ಎದೆಕಟ್ಟನ್ನು ಗಾಜಿನ ಮಣಿ, ಹೊಳಪಿನ ಮಣಿ, ಗಾಜಿನ ಕೊಳವೆ ಇತ್ಯಾದಿ ಅಲಂಕರಣದ ವಸ್ತುಗಳಿಂದ ಕಸೂತಿಗೊಳಿಸಿದ X ಮಾದರಿಯಲ್ಲಿ ಬಟ್ಟೆಯ ಹೊದಿಕೆ ಗೊಂಬೆಗಳಿಗೆ ಜೋಡಿಸುತ್ತಿದ್ದರು. ಇಂದು ಮರದಲ್ಲಿ ಕುಸುರಿ ಕೆಲಸ ಮಾಡಲ್ಪಟ್ಟ ಎದೆಕಟ್ಟು, ವೃತ್ತಾಕಾರವಾಗಿ ತಯಾರಿಸಲ್ಪಟ್ಟ ಹಾಗೂ X ಮಾದರಿಯ ಪಟ್ಟಿಗಳು ಬಳಕೆಯಲ್ಲಿವೆ. ಇವುಗಳಲ್ಲಿ ಬೇಗಡೆಯ ಅಲಂಕಾರ ವಿನ್ಯಾಸ ಲಕ್ಷಣಗಳನ್ನು ಗಮನಿಸಬಹುದು.

ವೇಷಭೂಷಣಗಳಲ್ಲಿ ಪ್ರಮುಖವಾಗಿರುವ ಸಾಧನಗಳೆಂದರೆ ಕೈಕಟ್ಟು, ಮುಂಡಾಸು, ಕೇದಿಗೆ ಮುಂಡಾಸು, ವೀರಗಾಸೆ, ಭುಜಕೀರ್ತಿ....ಗೆಜ್ಜೆ, ಕರ್ಣಪತ್ರ, ಸೊಂಟಪಟ್ಟಿ ಮತ್ತು ಶೋಭೆಗಾಗಿ ಕಪ್ಪು ಬಣ್ಣದ ಉಣ್ಣೆಯ ದುಂಡನೆಯ ಚೆಂಡುಗಳು.

ಇಂದಿನ ಗೊಂಬೆಯಾಟದಲ್ಲಿ ಕಾಣುವ ಭುಜಕೀರ್ತಿಗೂ ಪರಂಪರೆಯಲ್ಲಿ ಬಳಸುತ್ತಿದ್ದ ಸಾಧನಗಳಿಗೂ ವಸ್ತುಗಳಲ್ಲೆ ವ್ಯತ್ಯಾಸವಿದೆ. ಇಂದು ಬುಗುರಿಯಾಕಾರದ ತ್ರಿಕೋನ ಮಾದರಿಯಲ್ಲಿ ಜೋಡಿಸಿರುವ ಮರದ ವಿನ್ಯಾಸ ಹೆಚ್ಚು ಪ್ರಚಲಿತ. ಬಹಳ ಹಿಂದೆ ಬುಗುರಿಯಾಕಾರದ ವಿನ್ಯಾಸ ಹೊಂದಿರುವ 'ಜುಮ್ಮನ ಮುಳ್ಳು' ಹೊಂದಿಸಿ ಗೊಂಬೆಗಳ ತೋಳು ಭುಜಗಳನ್ನು ಅಲಂಕರಣಗೊಳಿಸುತ್ತಿದ್ದರು. ಸರ, ಕೈಕಟ್ಟು, ವೀರಗಾಸೆ ಮುಂತಾದ ಆಭರಣಗಳ ನಿರ್ಮಾಣಕ್ಕೆ ಗುಂಡನೆಯ ಆಕಾರದ ರೀಟಾಬೀಜಕ್ಕೆ (ಅಂಟು ವಾಳದ ಬೀಜ) ಬಣ್ಣ ಹಾಕಿ ಗೊಂಬೆಗಳ ಪ್ರಮಾಣಕ್ಕೆ ತಕ್ಕುದಾಗಿ ತಯಾರಿಸಿಕೊಳ್ಳು ತ್ತಿದ್ದರು. ಇಂದು ಮರದಲ್ಲಿ ಮಾಡಿದ ಸಣ್ಣಪುಟ್ಟ ವಿನ್ಯಾಸಗಳ ಜೋಡಣೆ ಅಥವಾ ಯಕ್ಷ ಗಾನದ ಮಾದರಿಯಲ್ಲಿ ಬೇಗಡೆ ಹಚ್ಚಿದ ಆಭರಣ ಕಾಣಬಹುದಾಗಿದೆ. ವೀರಗಾಸೆ-ಸೊಂಟದ ಕೆಳಗೆ ಧರಿಸುವ ಆಭರಣ ನಿರ್ಮಾಣಕ್ಕೆ ರೀಟಾ ಬೀಜದ ಸರ ಹಾಗೂ ಗಾಳಿ ಮರದ ಕಾಯಿಗಳನ್ನು (Casurina)[12] ಕೂಡ ಉಪಯೋಗಿಸುತ್ತಿದ್ದರು. ಇಂದು ಇವು ಗಳ ಸ್ಥಾನವನ್ನು ಮರದಲ್ಲಿ ನಿರ್ಮಿಸಿದ ವಿನ್ಯಾಸಗಳು, ಆಧುನಿಕ ವಿಧಾನದ ಮಣಿಸರಗಳು ಹೆಚ್ಚಾಗಿ ಪ್ರವೇಶಿಕೆ ಪಡೆದಿದೆ. ಗೊಂಬೆಗಳ ಕಿರೀಟ, ಕೇದಿಗೆ-ವಿನ್ಯಾಸಗಳನ್ನು ಮರದಲ್ಲಿಯೇ ತಯಾರಿಸಿ ಬೇಕಾದ ಬಣ್ಣಗಳನ್ನು ಹಚ್ಚುತ್ತಿದ್ದರು.

ಗೊಂಬೆಗಳಿಗೆ ಧರಿಸುತ್ತಿದ್ದ ಬಟ್ಟೆಗಳಲ್ಲಿ ಹೆಚ್ಚಾಗಿ ಚೌಕಳಿ ಕೆಂಪು ಬಣ್ಣದ ವಸ್ತ್ರವನ್ನು, ಕೆಂಪು, ಹಸಿರು ಮೇಲಂಗಿಯನ್ನು ಧರಿಸುತ್ತಿದ್ದರು. ಸಾಮಾನ್ಯವಾಗಿ ಹರಕೆ ಆಟದಲ್ಲಿ ಕೆಲವೊಮ್ಮೆ ದೊರಕಿದ ಬಟ್ಟೆಗಳನ್ನು ಗೊಂಬೆಗಳ ಅಲಂಕರಣಕ್ಕೆ ಉಪಯೋಗಿಸುತ್ತಿದ್ದರು.13 ಬಟ್ಟೆಯನ್ನು ಪಡೆಯಲೋಸ್ಕರವಾಗಿಯೇ ಒಂದು ವಿಶೇಷ ಚಮತ್ಕಾರದ ಪ್ರದರ್ಶನ ಕಾಮತ್ ಅವರ ತಂಡದಲ್ಲಿ ರೂಢಿಸಿಕೊಂಡಿದ್ದರಂತೆ-ಇದನ್ನು 'ಗರುಡನ ಆಟ' ಎಂದೇ ಕರೆಯುತ್ತಿದ್ದರು. ಇಂದು ಈ ಚಮತ್ಕಾರದ ಒಳಗುಟ್ಟಿನ ಪೂರ್ಣ ತಂತ್ರ ಪ್ರಯೋಗಿಸುವುದಿಲ್ಲ-ಕಾರಣ ಮೂಲ ಚಮತ್ಕಾರದ ಒಳಗುಟ್ಟಿನ ಪೂರ್ಣ ತಂತ್ರ ಪ್ರಯೋಗ ಅಲ್ಪ ಸ್ವಲ್ಪ ತಿಳಿದಿರುವುದರಿಂದ ಎಲ್ಲಿಯೂ 'ಗರುಡನ ಆಟ' ಪ್ರದರ್ಶಿಸಿಲ್ಲವೆನ್ನುತ್ತಾರೆ.

**ಗರುಡನ ಆಟ :** ಗೊಂಬೆಯಾಟದ ಪರದೆಯ ಹಿಂದೆ ಒಂದು ಮರದ ಗೂಟವನ್ನು ನೆಟ್ಟು-ಪ್ರೇಕ್ಷಕರ ಮಧ್ಯೆ ಒಂದು ಕಂಬವನ್ನು (ಪ್ರೇಕ್ಷಕ ಕುಳಿತು ನೋಡುವ ಮಟ್ಟಕ್ಕೆ) ಹುಗಿದಿರುತ್ತಿದ್ದರು. ಪರದೆಯ ಭಾಗದಿಂದ ಎರಡು ಕಪ್ಪುದಾರಗಳು ಪ್ರೇಕ್ಷಕರ ಬಳಿ ಇರುವ ಕಂಬಕ್ಕೆ ಜೋಡಣೆಯಾಗಿರುತ್ತಿದ್ದುವು. ದೊಡ್ಡ ಮುಂಡಾಸಿನ ಜನ ಶ್ರೀಮಂತರು ಅಥವಾ ಎಲೆವಸ್ತ್ರದ ಮುಂಡಾಸಿನವರನ್ನು ಕಂಬದ ಬಳಿ ಸರಿಯಾಗಿ ಕೂರಿಸಿ-ತಲೆಯ ರುಮಾಲನ್ನು ಗರುಡ ಬಂದು ಕೊಂಡೊಯ್ಯುವಂತ ಚಮತ್ಕಾರ-ಚಕಿತಗೊಳಿಸುವ ತಂತ್ರ ಪ್ರದರ್ಶಿಸುತ್ತಿದ್ದರು. ಈ ಆಟವನ್ನು 'ಗರುಡನ ಆಟ'-ಎಂದೇ ಪ್ರತ್ಯೇಕವಾಗಿ ಕರೆಯಲಾಗುತ್ತಿತ್ತು. ಗರುಡನ ಆಟದಲ್ಲಿ ಮುಖ್ಯವಾಗಿ ಪರದೆಯ ಭಾಗದಿಂದ ಗರುಡನನ್ನು (ಗೊಂಬೆ) ಸೂತ್ರ ನಿಯಂತ್ರಣ ಸಹಾಯದಿಂದ ಪ್ರೇಕ್ಷಕರ ಮಧ್ಯೆ ಹಾರಿಸಿ, ತಲೆಯ ರುಮಾಲನ್ನು ಪಡೆಯಲೋಸ್ಕರವಾಗಿ ಗರುಡನ ಕಾಲಿಗೆ ಕಬ್ಬಿಣದ ಕೊಕ್ಕೆಯನ್ನು ಅಳವಡಿಸಲಾಗುತ್ತಿತ್ತು. ವಸ್ತ್ರ ತರುವಂತಹ ಚಮತ್ಕಾರಗಳಿಗೆ ಪೂರ್ವಯೋಜಿತ ಒಪ್ಪಿಗೆ ಪಡೆದು ವಸ್ತ್ರವನ್ನು ಗರುಡನಿಂದ ತರಿಸುವ ತಂತ್ರ ತೋರಿಸುತ್ತಿದ್ದರು. ಹೀಗೆ ಗರುಡ ವಸ್ತ್ರ ಪಡೆದರೆ ವಸ್ತ್ರಧಾನ ಮಾಡಿದವರಿಗೆ ಒಳ್ಳೆಯದಾಗುವುದೆಂಬ ಬಲವಾದ ನಂಬಿಕೆಯೂ ಇದ್ದಿತಂತೆ. ಇಂದು 'ಗರುಡನ ಆಟ'-ದ ಪ್ರಯೋಗ ಕಾಮತ್ ಅವರ ತಂಡದಲ್ಲಿ ಚಾಲ್ತಿಯಲ್ಲಿಲ್ಲ,

**ಹನುಮಂತನ ಗೊಂಬೆ ತಯಾರಿಕೆ :** ಅತ್ಯಂತ ಕುತೂಹಲಕಾರಿಯಾದ ಗೊಂಬೆಗಳಲ್ಲಿ ಹನುಮಂತ, ಸುಗ್ರೀವ, ವಾಲಿ ಇತ್ಯಾದಿ. ಹನುಮಂತನ ಗೊಂಬೆಯನ್ನು ತಯಾರಿಸಲು ಹೆಚ್ಚು ಪರಿಣತಿ ಅಗತ್ಯ. ಅಂತೆಯೇ ಕುಣಿಸಲೂ ಕೂಡ ತಲೆಭಾಗ, ದೇಹ ಮತ್ತು ಕೈಕಾಲುಗಳನ್ನು (ಮುಂಗೈ ಮತ್ತು ಪಾದ) ಮರದಿಂದ ಮೊದಲು ತಯಾರಿಸಿಕೊಳ್ಳುವರು. ತಲೆಭಾಗದ ಕೆತ್ತನೆಯಲ್ಲಿ ಮುಖದ ಆಕಾರ ಮಾಡುವಾಗ ಕಪೋಲ-ಬಾಯಿ ಭಾಗವನ್ನು ಉಬ್ಬಿರುವಂತೆ ಮಾಡುವರು. ಹಸಿರು, ಕೆಂಪು ಬಣ್ಣಗಳನ್ನು ಅತ್ಯಂತ ಜಾಣ್ಮೆಯಿಂದ ಚುಕ್ಕಿಗಳನ್ನು ನಿರ್ಮಿಸಿ ಮುಖವರ್ಣಿಕೆ ಮಾಡುವುದಿದೆ. ದೇಹದ ಭಾಗದ ಎಡ-ಬಲ ಭುಜಗಳ ಸಂದಿಯಿಂದ ಕಿರುಬೆರಳು ಗಾತ್ರದ ಹಗ್ಗ ಜೋಡಿಸಿ, ಹಗ್ಗದ ಎರಡೂ ತುದಿಗೆ

ಮೊದಲೆ ಮಾಡಿಟ್ಟುಕೊಂಡ ಮರದ ಅಂಗೈ ವಿನ್ಯಾಸ ಜೋಡಿಸುವರು. ಇದರಂತೆಯೇ ಸೊಂಟದ ಕೆಳಭಾಗಕ್ಕೆ (ಎಡ-ಬಲ) ಎರಡು ಕಿರುಬೆರಳು ಗಾತ್ರದ ಹಗ್ಗವನ್ನು ಕಾಲಿನ ಪ್ರಮಾಣಕ್ಕೆ ಸರಿಹೊಂದುವಂತೆ ಜೋಡಿಸುವರು. ಇವೆರಡರ ತುದಿಗೆ ಮರದಿಂದ ಮಾಡಲ್ಪಟ್ಟ ಪಾದ-ದ ವಿನ್ಯಾಸ ಜೋಡಿಸಿ, ದಾರ ಇಳಿಬಿಟ್ಟ ಜಾಗ ಹಾಗೂ ದೇಹ ಪೂರ್ಣ ಗೋಣಿ ಚೀಲದ ಎಳೆಗಳನ್ನು ಕೈ, ಕಾಲುಗಳಿಗೆ ಹಚ್ಚುವರು. ತದನಂತರ ಹಸಿರು ಬಣ್ಣ ಬಳಿದು ಸಂಪೂರ್ಣ ಆಕಾರಕ್ಕೆ ತಂದಾಗ ನಿಜವಾಗಿಯೂ ರೋಮವುಳ್ಳ ಹನುಮಂತನಂತೆ ಆಕೃತಿ ಸಿದ್ಧವಾಗುವುದು. ಹನುಮಂತನ ಬಾಲವನ್ನು ಹಸಿರು ಬಣ್ಣ ಹಚ್ಚಿದ ಗೋಣಿ ಚೀಲದ ದಾರದ ಸಹಾಯದಿಂದ ನಿರ್ಮಿಸಿ ಹನುಮಂತನ ಕೆಂಪು ಚಡ್ಡಿಯ ಒಳಭಾಗದಲ್ಲಿ ಹಿಂಬದಿಯ ಸೊಂಟಕ್ಕೆ ಸಿಕ್ಕಿಸುವರು. (ತೆಂಕು ತಿಟ್ಟಿನಲ್ಲಿಯೂ ಇದೇ ಮಾದರಿಯನ್ನು ಗಮನಿಸಬಹುದು) ಯಥಾ ಪ್ರಕಾರ ಬಾಲದಲ್ಲಿ ಒಂದು, ಕಪೋಲಗಳ ಬಳಿ ಎರಡು ಸೂತ್ರ, ಎಡ-ಬಲ ಮುಂಗೈಗಳಿಗೆ ಎರಡು ಸೂತ್ರ ಮತ್ತು ಎಡ-ಬಲ ಮೊಣಕಾಲ ಮೇಲ್ಭಾಗಕ್ಕೆ ಎರಡು ಸೂತ್ರ ಹಚ್ಚಲಾಗುವುದು. ಈ ತಂತ್ರದಿಂದ ಹನುಮಂತನ ಗೊಂಬೆಯ ಮೂಲಕ ಸುಲಲಿತವಾಗಿ ಬಾಗಿ ಬಳುಕುವ, ಲಾಗ ಹಾಕಿಸುವ, ಇತ್ಯಾದಿ ಚೇಷ್ಟೆ ಮಾಡಿಸಲೋಸ್ಕರವಾಗಿ ಕೈ-ಕಾಲುಗಳ ಜಾಗದಲ್ಲಿ ಹಗ್ಗ-ಜೋಡಿಸಿರುತ್ತಾರೆ. ಹೀಗಾಗಿ ಕೈ-ಕಾಲುಗಳು ಸುಲಭವಾಗಿ ಕುಣಿಸುವಾತನ ಕೈ ಚಳಕದಿಂದ ಜೋಲಾಡುವುದನ್ನು ಗಮನಿಸಬಹುದು.

**ರಂಗಸಜ್ಜಿಕೆ:** ಗೊಂಬೆಯಾಟದ ಪ್ರಾಚೀನ ರಂಗಭೂಮಿಗೂ ಇಂದಿನ ಆಧುನಿಕತೆಯ ಅಚ್ಚುಕಟ್ಟಾದ ಗೊಂಬೆಯಾಟದ ವೇದಿಕೆಗೂ ವ್ಯತ್ಯಾಸವಿದೆ. ಉತ್ತರ ಕರ್ನಾಟಕದಲ್ಲಿ (ಜೀವನಗೌಡ. ವಿ.ಎಚ್. ಅಂತರವಳ್ಳಿ-ಧಾರವಾಡ) ಗೊಂಬೆಯಾಟದ ವೇದಿಕೆಯ ಹೊರಬದಿಯಲ್ಲಿ ಮದ್ದಳೆಕಾರ ಕುಳಿತು ಕುಣಿಸುವವರೊಡನೆ ಮತ್ತು ಗೊಂಬೆಯಾಟದಲ್ಲಿ ಬರುವ ಹಾಸ್ಯ ಪಾತ್ರದೊಡನೆ ಸಂಭಾಷಣೆ ನಡೆಸುತ್ತಾನೆ. ಇಂತಹ ತಂತ್ರದಿಂದ ದ.ಕ. ಜಿಲ್ಲೆ ಹೊರತಾಗಿದ್ದರೂ 'ಗರುಡನ ಆಟ'ದ ತಂತ್ರ ಮುಖೇನ ವಿಶಿಷ್ಟತೆ ಸಂಪಾದಿಸಿರುವರು. 1921ರ ಪೂರ್ವದಲ್ಲಿನ ರಂಗಸ್ಥಳದ ಪ್ರಮಾಣ ಸುಮಾರು 6 ಅಡಿ ಉದ್ದ, ಎರಡೂವರೆ ಅಡಿ ಎತ್ತರ-ಈ ಆಯಾಕಾರದ ವೇದಿಕೆಯಲ್ಲಿ ಗೊಂಬೆಗಳು ಪ್ರದರ್ಶನಗೊಳ್ಳುತ್ತಿದ್ದುವು. ಇಂದು ಉದ್ದ ಮತ್ತು ಎತ್ತರ ಪ್ರಮಾಣದಲ್ಲಿ ಒಂದರಿಂದ ಎರಡು ಅಡಿಗಳವರೆಗೆ ವಿಸ್ತೃತಗೊಂಡಿರುವುದು ಮತ್ತು ಗೊಂಬೆಗಳು ಕೂರಲು, ನೃತ್ಯಮಾಡಲು ಒಳಭಾಗದಲ್ಲಿ ಎರಡೂವರೆ ಅಡಿ ಅಗಲವಾದ ಸ್ಥಳ ನಿರ್ಮಿಸಿಕೊಳ್ಳುವಂತಹ ತಂತ್ರದಲ್ಲಿ ಅಟ್ಟ ರಚನೆ ಮಾಡಿಕೊಂಡಿರುವರು.

ಪ್ರೇಕ್ಷಕನ ಕಣ್ಣಿಗೆ ಸೂತ್ರಧಾರನ ಕೈಚಳಕ ಕಾಣಿಸದ ಹಾಗೆ ಒಂದು ಪರದೆಯನ್ನು ಕಟ್ಟುವರು. ಇದನ್ನು 'ತೋರುಭಾಗ' ಎಂತಲೂ ಗೊಂಬೆಗಳು ಕುಣಿಯುವ ಹಿಂಬದಿಗೆ ಜೋಡಿಸುವ ಪರದೆಯನ್ನು 'ಹೀಲಿಬೇಲಿ' ಪರದೆ ಎಂದು ಕರೆದಿರುವರು.

'ಹೀಲಿಬೇಲಿ'-ಎಂದು ಕರೆಯುವ ಮುಖ್ಯ ಉದ್ದೇಶ ಏನೆಂದರೆ 'ಹೀಲಿ ಮರದ' ಗೂಟ

ಗಳನ್ನು ಎಡ-ಬಲ ಭಾಗದಲ್ಲಿ ಸ್ಥಾಪಿಸಿ (ಹುಗಿದು) ನಂತರ ಕಪ್ಪು ಕಂಬಳಿಯನ್ನು (ಪರದೆ) ಕಟ್ಟುತ್ತಿದ್ದರು. ಹೀಲಿ ಮರದ ಕಂಬಗಳು ಹಗುರವಾಗಿದ್ದು, ಗಟ್ಟಿಯಾಗಿದ್ದುದರಿಂದ ಮತ್ತು ರವಾನೆಗೆ ಯೋಗ್ಯ ಎನಿಸಿದ್ದರಿಂದ ಹೀಲಿ ಮರದ ಕಂಬ-ಬಳಸಿಕೊಂಡು ಹೊಂದಿಸುವ ಈ ಪರದೆಯ ಕಾರ್ಯ ರಚನೆಯನ್ನು ಹೀಲಿಬೇಲಿ ಪರದೆ ಎಂದು ಕರೆದಿರುವರು. ಇಂದು 'ಹೀಲಿ ಬೇಲಿ ಪರದೆ' ಕೇವಲ ಹೇಳಿಕೆಯಾಗಿ ಮಾತ್ರ ಉಳಿದಿರುವುದು. ಕೈ-ಕಾಣುವಂತೆ ಕಟ್ಟುವ ಎದುರು ಪರದೆಗೂ ಕೂಡ ಕಪ್ಪು ಕಂಬಳಿಯನ್ನು ಉಪಯೋಗಿಸುತ್ತಿದ್ದರು. ಗೊಂಬೆಯಾಟ ಪ್ರದರ್ಶನ ಸಾಮಾನ್ಯವಾಗಿ ರಾತ್ರಿ ವೇಳೆಯಲ್ಲಿ ಜರಗುತ್ತಿತ್ತು. ಇಂದಿನ ದಿನದಂತೆ ವಿದ್ಯುತ್ ಬಳಕೆ 1921 ಕ್ಕೂ ಹಿಂದೆ ಇರಲಿಲ್ಲ. ಈಗಿನ 2-3 ದಶಕಗಳಲ್ಲಿಯೂ ಹಿಲಾಲು (ಎಣ್ಣೆ) ದೀಪ ಉರಿಸಿ ಪ್ರದರ್ಶನ ನೀಡುತ್ತಿದ್ದರು. ಇಂದು ಹಲವಾರು ವಿದ್ಯುತ್ ದೀಪಗಳನ್ನು (ಬಲ್ಬ್‌ಗಳು) ಹಾಕುವ ಸೂತ್ರಬದ್ಧವಾದ ಬೆಳಕಿನ ವ್ಯವಸ್ಥೆಯನ್ನು ಕೊಗ್ಗ ಕಾಮತ್ ಅವರ ಮೇಳದಲ್ಲಿ ಗಮನಿಸಬಹುದು.

**ಹಿಮ್ಮೇಳ :** ಗೊಂಬೆಯಾಟದಲ್ಲಿ ಬಳಸುವ ವಾದ್ಯಕಾರರು ಹಾಗೂ ಗೊಂಬೆಗಳನ್ನು ಕುಣಿಸುವ ಕಲಾವಿದರು ಅತಿಮುಖ್ಯ. ಹಿಮ್ಮೇಳದಲ್ಲಿ ಎಲ್ಲರೂ ಕೂಡಿ 7-8 ಮಂದಿ ಅಗತ್ಯ. ಬಡಗಿನ ಶೈಲಿಯ ಗೊಂಬೆಯಾಟದಲ್ಲಿ ಚೆಂಡೆ, ತಾಳ, ಮದ್ದಳೆ, ವಾದ್ಯ ಪರಿಕರಗಳು ಪ್ರಯೋಗದಲ್ಲಿರುವುದು-ಪೂಜೆ ಮತ್ತು ಯುದ್ಧ ಸಂದರ್ಭದಲ್ಲಿ ಜಾಗಟೆ-ಶಂಖ ಬಳಸುವರು. ತೆಂಕುತಿಟ್ಟಿನ ಶೈಲಿಯಲ್ಲಿಯೂ ಬಡಗು ಯಕ್ಷಗಾನದ ಗೊಂಬೆಯಾಟದ ಎಲ್ಲ ವಾದ್ಯಗಳು ಇದ್ದು ತಾಳದ ಬದಲಾಗಿ ತೆಂಕುತಿಟ್ಟಿನ ಯಕ್ಷಗಾನದ 'ಜಾಗಟೆ' 'ತಾಳ' ಹಾಗೂ ಕೇರಳದಲ್ಲಿ 'ಚಂಡೆ ಬಲಿ'-ಯಲ್ಲಿ ಉಪಯೋಗಿಸುವ 'ಚಕ್ರತಾಳ' ವಿಶೇಷವಾಗಿದೆ. ಬಡಗು ತಿಟ್ಟಿನ ಚೆಂಡೆಗೂ ತೆಂಕು ತಿಟ್ಟಿನ ಚೆಂಡೆಗೂ ಆಕಾರದಲ್ಲಿ ನಾದದಲ್ಲಿ ವ್ಯತ್ಯಾಸಗಳಿವೆ. ಸುಮಾರು 5-6 ದಶಕಗಳ ಹಿಂದೆ ಬಡಗಿನಲ್ಲಿ 'ಯಕ್ಷಗಾನ ಭಾಗವತಿಕೆ'-ಗೆ ಶೃತಿಯಾಗಿ 'ಸೋರೆ ಬುರುಡೆ' ಶೃತಿ ಬಳಸುತ್ತಿದ್ದರು. ಶ್ರೀ ದೇವಣ್ಣ ಕಾಮತ್ ಅವರ ತಂಡದಲ್ಲಿಯೂ 'ಸೋರೆ ಬುರುಡೆ' ಶೃತಿ ಅಥವಾ 'ಪುಂಗಿ ಶೃತಿ' ಚಾಲ್ತಿಯಲ್ಲಿದ್ದಿತು. ತರುವಾಯ ಹಾರ್ಮೋನಿಯಂ ಶೃತಿ ಬಳಕೆಗೆ ಬಂದು-ಸೋರೆಬುರುಡೆ ಶೃತಿ ಮೂಲೆಗುಂಪಾಯಿತು. ಇಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹುತೇಕ ಶ್ರೀಸಾಮಾನ್ಯನ ಕಲಾಪ್ರಕಾರಗಳಲ್ಲಿ ಉದಾ : ಭಜನೆ ಸೇರಿಗಾರರ ಮೌರಿ ವಾದನ, ಯಕ್ಷಗಾನ ಪ್ರಕಾರಗಳಲ್ಲಿ ಹಾರ್ಮೋನಿಯಂ ಶೃತಿ ಒಂದು ಪ್ರಮುಖ ಅಂಗವಾಗಿ ಸೇರಿಕೊಂಡಿವೆ.

ತೆಂಕು ತಿಟ್ಟಿನ ರಾಕ್ಷಸ ಪಾತ್ರದ ಗೊಂಬೆಗಳಿಗೂ ಬಡಗು ತಿಟ್ಟಿನ ರಾಕ್ಷಸ ಗೊಂಬೆಗಳಿಗೂ ಗಾತ್ರ, ಭಾರದಲ್ಲಿ ಮತ್ತು ಕುಣಿಸುವಲ್ಲಿ ವ್ಯತ್ಯಾಸಗಳಿವೆ. ತೆಂಕು ತಿಟ್ಟಿನ ಗೊಂಬೆಯು (ರಾಕ್ಷಸ) ಸುಮಾರು 8 ರಿಂದ 10 ಕೆ. ಜಿ. ಭಾರವಿರುವುದು. ಬಡಗು ತಿಟ್ಟಿನ ಗೊಂಬೆಗಳು ಸಾಮಾನ್ಯವಾಗಿ 5 ರಿಂದ 6 ಕೆ. ಜಿ. ಭಾರವಿರುವುದು–ಉದಾಹರಣೆ : ರಾವಣ ಗೊಂಬೆಯನ್ನು ಎರಡು ಜನ ಕಲಾವಿದರು ಪರದೆಯ ಹಿಂಬದಿಯಲ್ಲಿ ನಿಂತು ಆಡಿಸುವರು. ಮತ್ತು ಗೊಂಬೆಗಳ ನಿಯಂತ್ರಣಕ್ಕಾಗಿ ವಿಶೇಷ ಸೂತ್ರಗಳನ್ನು ಅಳವಡಿಸಿರುವುದನ್ನು ಗಮನಿಸಬಹುದಾಗಿದೆ.

ಶ್ರೀ ಕಾಮತ್-ಅವರ ತಂಡದಲ್ಲಿಯೂ ಕೆಲವು ಭಾರವುಳ್ಳ ಗೊಂಬೆಗಳ ನಿಯಂತ್ರಣಕ್ಕಾಗಿ ವಿಶೇಷ ಸೂತ್ರ ಬಳಸುವರು.

ತೆಂಕು ಹಾಗೂ ಬಡಗು ತಿಟ್ಟಿನ ಗೊಂಬೆಯಾಟಗಳಲ್ಲಿ ವಾದ್ಯ ಪರಿಕರಗಳ ಉಪಯೋಗ, ಸಂಭಾಷಣೆ ಹಾಡುಗಾರಿಕೆ ಆಯಾಯಾ ಭೌಗೋಳಿಕ ಶೈಲಿಯನ್ನು ಅನುಸರಿಸಿವೆ. ಉಪ್ಪುಂದ-ದಲ್ಲಿರುವ ಒಂದು ತಂಡದವರು ಇತ್ತೀಚೆಗೆ ಧ್ವನಿ ಮುದ್ರಿತ ಸುರುಳಿಗಳನ್ನು (ಕ್ಯಾಸೆಟ್) ಉಪಯೋಗಿಸಿ ಗೊಂಬೆಯಾಟ ಪ್ರದರ್ಶನ ಕೆಲವೊಮ್ಮೆ ನೀಡುವುದಿದೆ. ಇಲ್ಲಿ ಗೊಂಬೆಗಳು ಮತ್ತು ಕುಣಿಸುವವರು ಮಾತ್ರ ಪ್ರಧಾನವಾಗಿ ಉಳಿದು ಸಾಂದರ್ಭಿಕ ಹಿಮ್ಮೇಳವನ್ನು ದೂರಸರಿಸಿರುವುದು ಒಂದು ಕೊರತೆ. ಆದರೂ ಕ್ಯಾಸೆಟ್-ಸುರುಳಿಯ ಪ್ರಯೋಗದ ಪ್ರದರ್ಶನ ಒಂದು ಆಧುನಿಕ ಬದಲಾವಣೆ ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಸ್ತ್ರೀ ವೇಷದ ಗೊಂಬೆಗಳನ್ನು ಕುಣಿಸುವವರು ಗೌಳಶಾರೀರ (ಮಧುರ ಕಂಠ) ಹೊಂದಿದವರಾಗಿದ್ದರೆ ಪ್ರದರ್ಶನದ ಸಂದರ್ಭದಲ್ಲಿ ಸಂಭಾಷಣೆ, ಹಾಡಿನ ಮೂಲಕ ರಸ, ಅಭಿವ್ಯಕ್ತಿ ಪಡಿಸಲು ಸಾಹಾಯಕವಾಗುವುದು. ಒಟ್ಟಿನಲ್ಲಿ ಆಯಾಯಾ ಪಾತ್ರಗಳಿಗೆ ಒಪ್ಪುವ ಪ್ರಸಂಗಕ್ಕೆ ಅನುಗುಣವಾಗಿ ಸ್ಪಂದಿಸಬಲ್ಲ ಧ್ವನಿ, ಲಯಜ್ಞಾನ, ಹಾಡುಗಾರಿಕೆ ಮತ್ತು ಕುಣಿಸಬಲ್ಲ ತಂತ್ರ ಹಿಮ್ಮೇಳದವರಿಗೆ ಅತ್ಯಗತ್ಯ.

**ಶ್ರೀ ಕೊಗ್ಗ ಕಾಮತ್** ತಂಡದಲ್ಲಿ 'ಲಂಕಾದಹನ' ಪ್ರಸಂಗ ಸನ್ನಿವೇಶ ಮನ ಮುಟ್ಟುವಂತೆ ಗೊಂಬೆಗಳ ಮೂಲಕ ಚಿತ್ರಿಸುವ ಕೌಶಲ್ಯ ತಂಡದ ಕಲಾವಿದರುಗಳಲ್ಲಿದೆ. ಇದೇ ತಂಡದಲ್ಲಿ ಅಚ್ಚರಿ ತರುವಂತಹ ಹಿಮ್ಮೇಳದವರ ಗೊಂಬೆ ಕುಣಿಸುವವರ ದೃಶ್ಯ-ಲಂಕೆಗೆ ಹನುಮಂತ ತನ್ನ ಬಾಲದಿಂದ ಸುಡುವ ದೃಶ್ಯ ನಿರ್ಮಾಣ ಉಂಟುಮಾಡಲು ತಗಡಿನಿಂದ ಮಾಡಲ್ಪಟ್ಟ ಅರಮನೆಯ 'ಕಟ್ ಔಟ್' (Cut out) ಬಳಸಿರುವರು. ಈ ಕೃತಕ 'ಕಟ್ ಔಟ್' ಮೇಲ್ಭಾಗಕ್ಕೆ ಮೇಣ ಹಚ್ಚಿ ಬೇಗಡೆಯಿಂದ ಅಲಂಕರಿಸಿ ಗೊಂಬೆಯಾಟದ ಅಂತ್ಯ ದೃಶ್ಯವಾಗಿ ಮೂಡಿಸುವರು. ಪರಿಣಾಮಕಾರಿಯಾಗಿ ಸನ್ನಿವೇಶ ಸೃಷ್ಟಿಸುವ ಪ್ರತಿಯೊಬ್ಬ ಕಲಾವಿದನಿಗೂ ತಾಳ್ಮೆ-ಜಾಗರೂಕತೆ ಅವಶ್ಯ. ರಂಗಸಜ್ಜಿಕೆಯಲ್ಲಿ ಪರದೆ ಹಾಕುವಂತಹುದು ಹಾಗೂ ತೆರೆಯುವಂತ ನಿರ್ಮಾಣ ಕ್ರಿಯೆಯಲ್ಲಿ ಹಿಮ್ಮೇಳದವರ ಅಥವಾ ತೆರೆಮರೆಯಲ್ಲಿರುವವರ ಅಚ್ಚುಕಟ್ಟುತನ ಶ್ಲಾಘನೀಯ.

ತೆಂಕುತಿಟ್ಟಿನಲ್ಲಿ ಶ್ರೀ ಮುಂಡಪ್ಪ ಶೆಟ್ಟಿ ತಂಡದಲ್ಲಿಯೂ ಯಕ್ಷಗಾನದ ನೈಜ ಸ್ವರೂಪ ಚಿತ್ರಿಸುವ ಕಲೆಗಾರಿಕೆ ಗೊಂಬೆ ಕುಣಿಸುವ ಚಾಲಾಕಿತನ ತೀವ್ರ ತರಬೇತಿಯಿಂದ ಕೂಡಿದ್ದಾಗಿದೆ. ಇವರುಗಳು ಭಾರವನ್ನು ಕಡಿಮೆ ಮಾಡಿಕೊಳ್ಳಲೋಸ್ಕರವಾಗಿ ಹತ್ತಿಯಿಂದ ಮಾಡಿದ ಗೊಂಬೆಗಳನ್ನು ಪ್ರಯೋಗಿಸುತ್ತಿರುವುದು ಗಮನಾರ್ಹ.

ಕರಾವಳಿ ಕರ್ನಾಟಕದಲ್ಲಿ ಗೊಂಬೆಯಾಟ ಎಂದರೆ ಶ್ರೀ ದೇವಣ್ಣ ಕಾಮತ್ ಹಾಗೂ ಕೊಗ್ಗ ಕಾಮತ್ ಅವರ ಮನೆತನ, ಇತ್ತೀಚೆಗೆ ಕಾಸರಗೋಡು, ವಡಭಾಂಡೇಶ್ವರ ಭಾಗದಲ್ಲಿ ಹೊಸದಾಗಿ ತಂಡಗಳು ಹುಟ್ಟಿಕೊಳ್ಳುತ್ತಿವೆ.

ಕಾಮತ್ ಮನೆತನದವರು ದೇಶ ವಿದೇಶಗಳಲ್ಲಿ ಗೊಂಬೆಯಾಟದ ಮುಖೇನ ಕರ್ನಾಟಕದ ಯಕ್ಷಗಾನ ಸಂಸ್ಕೃತಿ ಹಾಗೂ ಪ್ರತಿಮಾಶಿಲ್ಪ ಸಂಸ್ಕೃತಿ ಪಸರಿಸಿ ಖ್ಯಾತಿಗಳಿಸುವರು. ತಂದೆ ಯಷ್ಟೇ ಸಮರ್ಥನಾಗಿ ದುಡಿಯುವ ಯುವ ಕಲಾವಿದ ಶ್ರೀ ಭಾಸ್ಕರ ಕಾಮತ್ ದೇಶ ವಿದೇಶ ಸುತ್ತಿ ಬಂದಿರುವರು. ಗೊಂಬೆಯಾಟದಲ್ಲಿಯೇ ತಾಂತ್ರಿಕ ಶಿಕ್ಷಣ ಪಡೆಯಬೇಕೆಂದು ಹೊಸ ಪ್ರಯೋಗಗಳನ್ನು ಹಮ್ಮಿಕೊಳ್ಳಬೇಕೆಂಬ ಆಸೆ ಇವರದು. ಕಲೆಯನ್ನು ಸರಕಾರ ಉಳಿಸಿ-ಬೆಳೆಸಬೇಕೆಂಬ ತೀವ್ರ ಕಳಕಳಿ ಇದ್ದರೆ ಇಂತಹ ಯುವಕರಿಗೆ ಎಲ್ಲ ರೀತಿಯ ಪ್ರೋತ್ಸಾಹ ನೀಡುವುದು ಅಗತ್ಯ.

**ಗಣಪತಿ ಗೊಂಬೆ ಮತ್ತು ಘಟನೆ :** ಶ್ರೀ ಕಾಮತ್ ಅವರ ಮನೆತನ ಭಾಗವತಿಕೆ, ಗೊಂಬೆಯಾಟಕ್ಕೆ ಚಿರಪರಿಚಿತಗೊಂಡ ಹೆಸರು. ಶ್ರೀ ದೇವಣ್ಣ ಕಾಮತ್-ಅವರ ಕಾಲದಲ್ಲಿ ಗೊಂಬೆಯಾಟವನ್ನೇ ಒಂದು ಅರೆಕಾಲ ವೃತ್ತಿಯನ್ನಾಗಿಸಿಕೊಂಡವರು. ಗೊಂಬೆಗಳನ್ನು, ಇತರೆ ಸಾಮಗ್ರಿಗಳನ್ನು ಬಟ್ಟೆಯಲ್ಲಿಯೇ ಗಂಟುಮೂಟೆ ಕಟ್ಟಿಕೊಂಡು ಕಾಲ್ನಡಿಗೆಯಲ್ಲಿ ಅಥವಾ ಎತ್ತಿನ ಬಂಡಿಯಲ್ಲಿ ಪ್ರಯಾಣಿಸಿ ಪ್ರದರ್ಶನ ನೀಡುತ್ತಿದ್ದ ಕಾಲದಲ್ಲಿ ಕಾಮತ್ ಮನೆಯ ಕೌಟುಂಬಿಕ ಸ್ಥಿತಿ-ಗತಿ ಏರುಪೇರಾಗಿ ಕಷ್ಟದ ದಿನಗಳು ಕಾಡತೊಡಗಿದವು. ಹೀಗಾಗಿ ಗೊಂಬೆಗಳನ್ನೆಲ್ಲ ಸಂಬಂಧಿಕರಿಗೆ ಮಾರಿಬಿಟ್ಟರು. ದಿನೇ ದಿನೇ ಕೌಟುಂಬಿಕ ಸಮಸ್ಯೆ, ಬಡತನ ಇತ್ಯಾದಿ ಶ್ರಿ ಕಾಮತ್ ಅವರನ್ನು ಬಹಳಷ್ಟು ಸಂಕಷ್ಟಕ್ಕೆ ಗುರಿಮಾಡಿತು. ಸಾಲ ಮಾಡಿ ಜೀವನ ತಳ್ಳುವ ಸ್ಥಿತಿಗೆ ಬಂದಾಗ-ಒಂದು ದಿನ ಜೋಯಿಸರಲ್ಲಿ ನಿಮಿತ್ತ (ಪ್ರಶ್ನೆ) ಕೇಳಿಸಿದರಂತೆ. ಆಗ ಜೋಯಿಸರು ಉತ್ತರವಾಗಿ "ನೀವು ಸಂಬಂಧಿಕರಿಗೆ ಮಾರಲ್ಪಟ್ಟ ಗೊಂಬೆಗಳನ್ನು ಅಟ್ಟಕ್ಕೆ ಸೇರಿಸಿರುವರು. ಆ ಗೊಂಬೆಗಳಲ್ಲಿ ಗಣಪತಿ ಗೊಂಬೆ ಬೋರಲಾಗಿ ಬಿದ್ದಿದೆ-ಸರಿಪಡಿಸಿ" ಎಂದರಂತೆ. ಕೂಡಲೇ ಕಾಮತ್ ಅವರು ಸಂಬಂಧಿಕರ ಮನೆಗೆ ಹೋಗಿ ನಡೆದ ಘಟನೆ ತಿಳಿಸಿದರು. ಅಟ್ಟ ಹತ್ತಿ ನೋಡಿದಾಗ ಜೋಯಿಸರು ಹೇಳಿದ್ದು ಸತ್ಯ ವಾಗಿತ್ತೆಂದೂ ಅಂದೇ ಎತ್ತಿನಗಾಡಿಯಲ್ಲಿ ಮೂಲೆಗೆ ಸೇರಿಸಿದ ಗೊಂಬೆಗಳನ್ನು ಸಂಬಂಧೀಕರು ಯಾವ ಖರ್ಚೂ ಕೊಳ್ಳದೆ ಶ್ರೀ ಕಾಮತ್ ಮನೆಗೆ ಕಳುಹಿಸಿಕೊಟ್ಟರಂತೆ. ಪುನಹ ಗೊಂಬೆ ಯಾಟವನ್ನು ಪುನಶ್ಚೇತನಗೊಳಿಸಿ ತಂಡ ಕಟ್ಟಿ ಜನರಂಜನೆಗಾಗಿ ಹಲವಾರು ಬದಲಾವಣೆ ಮಾಡಿದರು. ಇಂದಿಗೂ ಪರಂಪರೆಯಿಂದ ಬಂದ ಗಣಪತಿಯನ್ನು ದೇವರ ಕೋಣೆಯಲ್ಲಿ ಸೇರಿಸಿ ಪೂಜಿಸುತ್ತಾ ಬಂದಿರುವರು, ಶ್ರೀ ಭಾಸ್ಕರ ಕಾಮತ್ ತಿಳಿಸುವಂತೆ ಹಳೆಯದಾದ ಗೊಂಬೆಗಳೆಂದರೆ ಗಣಪತಿ ಗೊಂಬೆ. ಸುಮಾರು ಮುನ್ನೂರು ವರ್ಷಗಳಷ್ಟು ಹಳೆಯದೆಂದು ಅಭಿಪ್ರಾಯಿಸಿರುವರು.

ಕರಾವಳಿ ಕರ್ನಾಟಕದಲ್ಲಿ ಬಳಸುವ-ಜನರಂಜನೆ ಪಡೆದಿರುವ ಮುಖ್ಯ ಕಥಾ ಪ್ರಸಂಗಗಳು ಹೀಗಿವೆ. ಶ್ರೀ ಕಾಮತ್ ಅವರ ತಂಡದಲ್ಲಿ ಪ್ರಯೋಗಿಸುವ ಪ್ರಸಂಗಗಳು ಬಡಗು ಶೈಲಿ (1) ನರಕಾಸುರ ವಧೆ (2) ಚೂಡಾಮಣಿ ಪ್ರಸಂಗ (3) ಲಂಕಾದಹನ ಇತ್ಯಾದಿ.

ಶ್ರೀ ಮುಂಡಪ್ಪ ಶೆಟ್ಟಿ ಬೆಳ್ತಂಗಡಿ ತಂಡದ ಪ್ರಸಂಗಗಳು ತೆಂಕು ಶೈಲಿ (1) ಶಿವ ಪಂಚಾಕ್ಷರಿ

(2) ವೀರ ದಶಕಂಠ (3) ಚಂಡೀ ಮಹಾತ್ಮೆ ಇತ್ಯಾದಿ.

**ಉಪಸಂಹಾರ:** ಆಧುನಿಕ ರಂಗಭೂಮಿಯ ಹಲವು ಮಾಧ್ಯಮಗಳಲ್ಲಿ ಜನಪದ ಗೊಂಬೆ ಯಾಟ ಪ್ರಕಾರವನ್ನು ಪುನಶ್ಚೇತನಗೊಳಿಸುವ ಅವಶ್ಯವಿದೆ. ಶಾಲಾ-ಕಾಲೇಜುಗಳಲ್ಲಿ ಗೊಂಬೆಯಾಟದ ಕಲಾತ್ಮಕ ಪರಿಚಯ, ತಂತ್ರ ಹಾಗೂ ಚರಿತ್ರೆಯ ಪಠ್ಯಗಳನ್ನು ಗೊಂಬೆ ಯಾಟ ಮುಖೇನ ತೋರಿಸುವ ಪ್ರಯೋಗಗಳು ನಡೆಯಬೇಕಾಗಿದೆ. ಶಿಕ್ಷಣ ಮಾಧ್ಯಮ ದಲ್ಲಿ ಗೊಂಬೆಯಾಟದ ಪರಿಚಯ ಮಾಡಿಸುವುದರಿಂದ ಕಲಾಕಾರರಿಗೂ ನಿಜವಾದ ಆಸರೆ ಸಿಕ್ಕಂತಾಗುವುದು-ಗೊಂಬೆಯಾಟದ ಕಲಾಕಾರರಲ್ಲಿ ಮನೆತನದ ಕಲೆಯನ್ನು ಮುಂದುವರೆಸಿ ಕೊಂಡುಹೋಗಲು ಸಿದ್ಧರಿರುವರು. ಉದಾ: ಕೊಗ್ಗ ಕಾಮತ್ ಅವರ ಪುತ್ರ ಶ್ರೀ ಭಾಸ್ಕರ ಕಾಮತ್ 'ಗೊಂಬೆಯಾಟದ ಶಿಬಿರ' ಶಿಕ್ಷಣ, ಶಾಲೆ ಇತ್ಯಾದಿಗಳನ್ನು ಕ್ರಿಯಾತ್ಮಕವಾಗಿ ಮಾಡಬೇಕೆಂಬ ಹಂಬಲವಿದೆ" ಎನ್ನುತ್ತಾರೆ. ಇಂತಹ ಅನೇಕ ಉತ್ಸಾಹಿ ರಂಗಕರ್ಮಿಗಳು ಜನಪದರಂಗ ಪ್ರಕಾರದ ಮುಖೇನ ಹೊಸ ಆಯಾಮದಲ್ಲಿ ಬೆಳೆಯುವ ಉತ್ಸಾಹ ತೋರು ವುದನ್ನು ನಾವು ಕಾಣಬಹುದು. ಆದರೆ ನೆರವನ್ನು ಕೊಡಬಲ್ಲ ಆಸಕ್ತರು ಸಹೃದಯ, ಸರಕಾರ ಪ್ರೋತ್ಸಾಹ ಕೊಡಬಲ್ಲದೇ ಕಾದು ನೋಡಬೇಕು.

ಇಂದು ವಿದೇಶದಲ್ಲಿ ಗೊಂಬೆಯಾಟದ ಮುಖೇನ ಪ್ರತಿಮಾಶಿಲ್ಪ, ವರ್ಣ ವಿನ್ಯಾಸ, ಸಾಧನ ಸಾಮಗ್ರಿಗಳ ಕಂಪೋಸಿಷನ್ (composition) ಮತ್ತು ಆಧುನಿಕ ಸೌಲಭ್ಯದ ಪರಿಕರ ಗಳನ್ನು ಉಪಯೋಗಿಸಿ ನಡೆಯಬಲ್ಲ ತಾಂತ್ರಿಕ ಪ್ರಯೋಗ-ಹೀಗೆ ಹತ್ತು ಹಲವು ದೃಷ್ಟಿ ಕೋನದಿಂದ ಅಧ್ಯಯನ ನಡೆಸಿ ಯುವ ಮನಸ್ಸನ್ನು ಚಿಂತನಾಶೀಲರಾಗಿಸಿದೆ. ಈ ದೃಷ್ಟಿ ಕೋನ ಮತ್ತು ಕಲಾ ಜಾಗೃತಿ ಭಾರತೀಯ ಶಿಕ್ಷಣದಲ್ಲೂ ಅಗತ್ಯವಿದೆ.

ಇಂದಿನ ಸಾಮಾಜಿಕ ನೈತಿಕತೆಯ ಏರು ಬೀಳು ಪ್ರಮಾಣ ಗಮನಿಸಿದ್ದಲ್ಲಿ ಗೊಂಬೆಯಾಟ, ಜನಪದ ಕಲಾಪ್ರಕಾರಗಳ ಮುಖೇನ ಎಳೆಯ ಪ್ರಾಯದಲ್ಲಿ ಕಲಾತ್ಮಕ ಆಸಕ್ತಿ ಬೆಳೆಸಿ ಐಕ್ಯ ಭಾವನೆ-ವಿಶ್ವಾಸ ಭಾವದಲ್ಲಿರುವಂತೆ ಮಕ್ಕಳ ಮನಸ್ಸನ್ನು ರೂಪುಗೊಳಿಸಬಹುದು. ಶ್ರೇಷ್ಠ ಪ್ರಜೆಗಳನ್ನಾಗಿಸುವ-ಸ್ವಚಿಂತನೆ ಮೂಡಿಸಬಲ್ಲ ಶಕ್ತಿಯುತವಾದ ಮಾಧ್ಯಮ ಗೊಂಬೆ ಯಾಟ. ಹೀಗಾಗಿ ಶಿಕ್ಷಣ ಸಮಿತಿ, ಅಕಾಡೆಮಿ, ಸರಕಾರಗಳು ಜನ ಸ್ಪಂದಿಸಬಲ್ಲ ಕಲಾ ಪ್ರಕಾರವನ್ನು, ಕಲಾವಿದರನ್ನು ಅರ್ಥ ಮಾಡಿಕೊಂಡು ಪ್ರೋತ್ಸಾಹಿಸುವುದರ ತುರ್ತು ಅಗತ್ಯವಿದೆ.

**ಟಿಪ್ಪಣಿಗಳು**

1. ಸಂ: ಆರ್.ಸಿ. ಹಿರೇಮಠ, **ಸಕಲಪುರಾತನರ ವಚನಗಳು** ಸಂಪುಟ-1, 1972, ಕರ್ನಾಟಕ ವಿಶ್ವವಿದ್ಯಾನಿಲಯ-ಪು: 306.

2. **ಸಂದರ್ಶನ ಮಾಹಿತಿ:** ಕೃಷ್ಣಯ್ಯ ಎಸ್. ಎ., 1984, ಮೈಸೂರು.

3. ಕಮಲಾ ದೇವಿ ಚಟ್ಟೋಪಾಧ್ಯಾಯ-ಇಂಡಿಯನ್ **ಮಿತ್ ಅಬೌಟ್ ಪಪೆಟ್ಸ್,** Indian Myths about puppets ಎ ಸ್ಪೆಷಲ್ ಪೇಪರ್ ಪ್ರೆಸೆಂಟೆಡ್ ಇನ್

ನ್ಯೂ ಡೆಲ್ಲಿ. ಆನ್ ದಿ ಒಕೇಷನ್ ಆಫ್ ಹೇಂಡಿ ಕ್ರಾಫ್ಟ್ಸ್ ಆಫ್ ಇಂಡಿಯ ಫೆಸ್ಟಿವಲ್-ಪು. 3

4. ಸಂದರ್ಶನ ಮಾಹಿತಿ ಆಧಾರ : ಕೃಷ್ಣಯ್ಯ ಎಸ್.ಎ. 1988

5. ಸಾಲೆತೊರೆ ಬಿ. ಎ. ಸೋಶಿಯೆಲ್ ಎಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ ಎಂಪೈರ್ ವಾಲ್ಯೂಮ್-2. ಪು. 15.

6. ಕೃಷ್ಣಯ್ಯ ಎಸ್.ಎ., ಗೊಂಬೆಯಾಟಗಳು-ಅಪ್ರಕಟಿತ. ಉಲ್ಲೇಖ :

7. ಶ್ರೀ ಭಾಸ್ಕರ ಕಾಮತ್ ಅವರ ಕೈಬರಹ ಲೇಖನ ಹಾಗೂ ಸಂದರ್ಶನ ಮುಖೇನ ಸಂಗ್ರಹಿತ ಅಭಿಪ್ರಾಯಗಳು. ಸಂದರ್ಶನ 24 ಏಪ್ರಿಲ್ 1988-ಕೃಷ್ಣಯ್ಯ ಎಸ್.ಎ. ಸ್ಥಳ : ಉಪ್ಪಿನಕುದ್ರು (ಕುಂದಾಪುರ ತಾಲೂಕು, ದ.ಕ.)

8. ಸಂದರ್ಶನ ಮಾಹಿತಿ : ಜಿನಗಾರರ ಓಣಿ-ಕೃಷ್ಣಪ್ಪ, ಗೋಕಾಕ (ಬೆಳಗಾಂ ಜಿಲ್ಲೆ) ಸಂ : ಕೃಷ್ಣಯ್ಯ ಎಸ್.ಎ., ದಿನಾಂಕ : 27 ಫೆಬ್ರವರಿ, 1984.

9. (ಅ) ಸಂದರ್ಶನಮಾಹಿತಿ ಒದಗಿಸಿದವರು : ಶ್ರೀ ಭಾಸ್ಕರ ಕಾಮತ್, ದಿನಾಂಕ : -24-4-1988.

(ಆ) ದಿನಾಂಕ : 23, ಜುಲೈ, 1986, ಸಂ : ಕೃಷ್ಣಯ್ಯ ಎಸ್.ಎ.

10. ಸಂದರ್ಶನ ಮಾಹಿತಿ-ಸಂಗ್ರಹ-ರಾಮಚಂದ್ರ ಗುಡಿಗಾರ-ಉಪ್ಪುಂದ, ಕುಂದಾಪುರ, ಕೃಷ್ಣಯ್ಯ ಎಸ್.ಎ,, ದಿನಾಂಕ : 23 ಜುಲೈ 1986

11. ಮಂಡ್ಯ ಜಿಲ್ಲೆಯ ಗೊಂಬೆಯಾಟದಲ್ಲಿ ಸೂತ್ರಗಳನ್ನು ಅಡಕಗೊಳಿಸುವ ಕೈ-ಹಿಡಿತ ಕೋಲಿಗೆ ಕೋಲಾಂಬು ಎಂದು ಕರೆಯುವರು.

12. ಸಂದರ್ಶನ ಮಾಹಿತಿ. casurina : ಗಾಳಿಮರ, ಸರವೀ ಕೇಸರಿಕೆ, ಕವಾಯು ವೃಕ್ಷ.

13. ಸಂದರ್ಶನ ಮಾಹಿತಿ : ಶ್ರೀ ಭಾಸ್ಕರ ಕಾಮತ್ (ಉಪ್ಪಿನಕುದ್ರು-ಕುಂದಾಪುರ ತಾಲೂಕು) ಯಕ್ಷಗಾನದಲ್ಲಿ ಹರಕೆ ಆಟ ಇದ್ದಂತೆ ಗೊಂಬೆಯಾಟವನ್ನು ಭಕ್ತಾದಿಗಳು ಆಡಿಸುವುದಾಗಿ ಹರಕೆ ಹೊತ್ತು ಆಟ ನಡೆಸುತ್ತಿದ್ದರಂತೆ. ಸಂ : ಕೃಷ್ಣಯ್ಯ ಎಸ್.ಎ.

# ದಕ್ಷಿಣ ಕನ್ನಡ ಜಿಲ್ಲೆಯ ಭಿತ್ತಿಚಿತ್ರಗಳು

–ಅ.ಲ. ನರಸಿಂಹನ್

**ಭಾ**ರತದ ದಕ್ಷಿಣ ಕರಾವಳಿಯಲ್ಲಿ ಭಿತ್ತಿಚಿತ್ರಗಳು ಹಲವಾರು ಕಾರಣಗಳಿಂದ ಕಡಿಮೆಯೆ. ಇತಿಹಾಸ ಪೂರ್ವದ ಆದಿಯ ಕಲೆಯಂತೂ ಇಲ್ಲವೇ ಇಲ್ಲವೆನ್ನುವಷ್ಟು ಅಲ್ಪಸಂಖ್ಯೆಯಲ್ಲಿವೆ. ಆದರೆ ಆದಿಮಾನವನ ನೆಲೆಗಳಿಗೆ ಕೊರತೆಯಿಲ್ಲ. ದಕ್ಷಿಣ ಭಾರತದ ಪಶ್ಚಿಮ ಕರಾವಳಿಯಲ್ಲಿ ಇಂದಿಗೂ ಕಂಡುಬರುವ ಭೂತ ಇತ್ಯಾದಿ ದೈವತಾ ಆರಾಧನೆಯಲ್ಲಿ, ವಿಧಿಕ್ರಿಯೆಗಳಲ್ಲಿ ಚಿತ್ರ ಹಾಗೂ ಶಿಲ್ಪಗಳ ಪಾತ್ರ ಹಿರಿದಾದುದು. (ಅವುಗಳಲ್ಲಿಯ ಕಲೆಯ ಅಂಶವನ್ನು ಕುರಿತು ಬೇರೆ ಲೇಖನಗಳಲ್ಲಿ ವಿವರಗಳನ್ನು ಕಾಣಬಹುದು). ಈ ಬಗೆಯ ಜನಪದ ಆಚರಣೆಯಲ್ಲಿ ವಿಸರ್ಜಿತವಾಗುವ ಕಲಾ ಪ್ರಕಾರಗಳು ಕಂಡುಬಂದದ್ದರಿಂದ ಭಿತ್ತಿಗಳಲ್ಲಿ ಚಿತ್ರ ರಚನೆ ಕಾಣದೇ ಹೋಗಿರಬಹುದು. ಇನ್ನೊಂದು ಕಾರಣವೆಂದರೆ ಹೆಚ್ಚಿನ ಪ್ರಮಾಣದ ಮಳೆಯಿಂದಾಗಿ ತೀರಾ ಇಳಿಜಾರು ಮಾಡಿನ ದೇವಾಲಯಗಳಲ್ಲಿ ಚಿತ್ರಗಳಿಗೆ ಸೂಕ್ತ ಎಡೆ ದೊರೆಯದೇ ಹೋಗಿದ್ದು ಹಾಗೂ ತೇವಾಂಶಕ್ಕೆ ಬೂಷ್ಟು ಹಿಡಿದು ಹಾಳಾಗುವ ಸಾಧ್ಯತೆ ಹೆಚ್ಚಾಗಿರುವುದು ಹೌದು. ಇತಿಹಾಸ ಕಾಲದ ಮಧ್ಯಯುಗದಲ್ಲಿ ದಕ್ಷಿಣ ಕರಾವಳಿಯ ಸಮೀಪದ ಗೇರಸೊಪ್ಪೆ, ಕೆಳದಿ-ಇಕ್ಕೇರಿಗಳ ಅರಮನೆಗಳಲ್ಲಿ ಚಿತ್ರಕಲೆ ಇದ್ದಿರಬಹುದಾದರೂ ಘಟ್ಟದ ಕೆಳಗಿನ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ಆ ಬಗೆಯ ಅರಮನೆಗಳು (ರಾಜಧಾನಿಗಳು) ಇದ್ದಂತಿಲ್ಲ. (ಕೇರಳದ ಕರಾವಳಿಯಲ್ಲಿ ಇದೇ ಕಾಲದ ಅರಮನೆಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಭಿತ್ತಿಚಿತ್ರಗಳು ಉಳಿದುಬಂದಿರುವುದನ್ನು ಇಂದಿಗೂ ಕಾಣಬಹುದು.)

ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಚಿನ ಎಂದರೆ ಸುಮಾರು ನೂರು-ನೂರೈವತ್ತು ವರ್ಷಗಳಷ್ಟು ಹಳೆಯ ಭಿತ್ತಿಚಿತ್ರಗಳನ್ನು ಗುರುತಿಸಬಹುದು. ಇವುಗಳಲ್ಲಿ ಶಿಷ್ಟ ಸಮಾಜವಾದ ಜೈನರದು ಒಂದಾದರೆ ಇನ್ನೊಂದು ವಿದೇಶೀ ಪ್ರಭಾವದ ಕ್ರೈಸ್ತರದು. ಇಲ್ಲಿ ಆಳಿದ ಅರಸು ಮನೆತನಗಳು ಬಹುತೇಕ ಜೈನ ಮತಾವಲಂಬಿಗಳಾಗಿದ್ದು ಅವರ ಧರ್ಮದೊಂದಿಗೆ ಶಿಲ್ಪ-ಚಿತ್ರಗಳಿಗೂ ಪ್ರೋತ್ಸಾಹ ನೀಡಿದರು. ಅದರ ಫಲವಾಗಿ ಕಾರ್ಕಳ, ಮೂಡಬಿದರೆ, ವೇಣೂರು ಮೊದಲಾದ ಜೈನಕೇಂದ್ರಗಳು ಈ ಜಿಲ್ಲೆಯಲ್ಲಿ ಮೂಡಿಬಂದವು. ಕಾರ್ಕಳದ ಜೈನ ಮಠದಲ್ಲಿ ಕೆಲವು ಹಳೆಯ ಭಿತ್ತಿಚಿತ್ರಗಳಿದ್ದು, ಇಡೀ ಮಠವನ್ನು ಹೊಸದಾಗಿ ರೂಪಿಸಿದ್ದರೂ ಈ ಚಿತ್ರಗಳಿರುವ ಗೋಡೆಯ ಭಾಗವನ್ನು ಹಾಗೆಯೇ ಉಳಿಸಿದ್ದಾರೆ. ಆದರೆ ಚಿತ್ರಗಳು ಬಹುಪಾಲು ನಾಶವಾಗಿ ಚಿತ್ರಿತ ಸಂದರ್ಭಗಳೂ ಸರಿಯಾಗಿ ತಿಳಿಯದೇ ಹೋಗಿವೆ. ಮೂಡಬಿದರೆ, ಚಿತ್ರಿತ ಧವಳ ಗ್ರಂಥಗಳಿಗೆ ಪ್ರಸಿದ್ಧವಿದ್ದು ಅಲ್ಲಿಯ ಮಠದಲ್ಲಿಯೂ ಹಲವು ಚಿತ್ರಗಳು ಉಳಿದು ಬಂದಿವೆ. ಇವುಗಳು ಸುರಕ್ಷಿತವಾಗಿದ್ದು ಆಕರ್ಷಕವಾಗಿವೆ. ಕಾರ್ಕಳದ ಸಮೀಪದ **ಬಜಗೋಳಿ**ಯಲ್ಲಿ ಇರುವ ಭಿತ್ತಿ ಚಿತ್ರ ಈಚಿನದಾದರೂ ಶೈಲಿಯ ದೃಷ್ಟಿಯಿಂದ **ನೈಜವಾದ**ಕ್ಕೆ ಪರಿವರ್ತಿತವಾಗುತ್ತಿದ್ದ ಸಾಂಪ್ರದಾಯಿಕ ಚಿತ್ರಗಳ

ಸ್ವರೂಪಕ್ಕೆ ಒಂದು ಉದಾಹರಣೆಯಾಗುತ್ತದೆ. ಉಳಿದಂತೆ ಕೂಗಾರ ಘಟ್ಟದಲ್ಲಿಯ ಜೈನ ಬಸ್ತಿ, ಉಗ್ಗಲ್ ಬೆಟ್ಟುವಿನ ಉಪ್ಪೂರು ಗರಡಿಗಳಲ್ಲಿ ಭಿತ್ತಿಚಿತ್ರಗಳಿವೆ. ಕಾರ್ಕಳದ ವೆಂಕಟೇಶ್ವರ ದೇವಾಲಯದಲ್ಲಿ ಈಚಿಗೆ, ಆದರೆ ಹಳೆಯ ಶೈಲಿಯಲ್ಲಿ ಬರೆದ ಚಿತ್ರಗಳಿವೆ.

ಕಾರ್ಕಳದ ಚತುರ್ಮುಖ ಬಸದಿಯ ಬಳಿ ಇರುವ ಜೈನ ಮಠದಲ್ಲಿ ಇರುವ ತೊಟ್ಟಿಯ ಬಲ ಭಾಗದ ಕೋಣೆಯ ಎದುರಿನ ಗೋಡೆಯಲ್ಲಿ ಚಿತ್ರಗಳಿವೆ. ಉದ್ದನೆಯ ಕೋಣೆಯ ಗೋಡೆಯನ್ನು ಸುಮಾರು ಎಂಟು ಅಡಿ ಉದ್ದ, ಐದು ಅಡಿ ಎತ್ತರಕ್ಕೆ ಮೂರು ಅಂಕಣಗಳಾಗಿ ವಿಭಾಗಿಸಿ ಚಿತ್ರಿಸಿದ್ದಾರೆ. ತೀರ ಬಲಭಾಗದ ಅಂಕಣದಲ್ಲಿ ಚಿತ್ರಿಸಿರುವ ವಿಷಯ ಏನೆಂದು ತಿಳಿಯಲಾಗದು. ಮಧ್ಯದ ಅಂಕಣದಲ್ಲಿ ಆಸನದಲ್ಲಿ ಕುಳಿತಿರುವ ಯತಿಗೆ ಒಬ್ಬಾಕೆ ಚರಿಗೆ (ಭಿಕ್ಷೆ)ಯನ್ನು ಸೌಟಿನಲ್ಲಿ ನೀಡುತ್ತಿರುವಂತಿದೆ. ಉಳಿದ ವಿವರಗಳು ನಷ್ಟವಾಗಿವೆ. ಎಡ ಕೊನೆಯ ಅಂಕಣದಲ್ಲಿ ಕೈಲಿ ವೀಣೆ ಹಿಡಿದ ಸರಸ್ವತಿಯದು. ಇವುಗಳು ಎದುರು ಗೋಡೆಯಲ್ಲಿದ್ದರೆ ಎಡಪಕ್ಕದ ಗೋಡೆಯಲ್ಲಿ ಕೆಲವು ಜೈನ ಯತಿಗಳನ್ನು ಚಿತ್ರಿಸಿದ್ದಾರೆ. ಚಿತ್ರದ ಮುಂದೆ ಇರುವ ಕಟ್ಟೆಯಲ್ಲಿ ಅಘ್ಘವಣೆ ಇತ್ಯಾದಿ ಇರಿಸಿರುವುದರಿಂದ ಮರೆಯಾಗಿದೆ. ಎದುರು ಗೋಡೆಯ ಅಂಕಣದಲ್ಲಿ ಪ್ರತಿ ಅಂಕಣಕ್ಕೆ ಎಂಟರಂತೆ ಮೂರು ಅಂಕಣಗಳಿಂದ ಇಪ್ಪತ್ತನಾಲ್ಕು ತೀರ್ಥಂಕರರನ್ನು ಬಿಡಿಸಿದೆ. ಮುಖ್ಯ ಚಿತ್ರದ ಮೇಲೆ ಪ್ರತಿಯೊಬ್ಬರಿಗೂ ಒಂದೊಂದು ಅಂಕಣವನ್ನು ಮಾಡಿದೆ. ಎಲ್ಲರೂ ಪದ್ಮಾಸನದಲ್ಲಿ ಕುಳಿತು ನಾಭಿಯ ಬಳಿ ಕೈಮೇಲೆ ಕೈ ಇರಿಸಿ ಧ್ಯಾನ ಭಂಗಿಯಲ್ಲಿದ್ದಾರೆ. ಜೈನಾಗಮಕ್ಕೆ ಅನುಗುಣವಾಗಿ ಬಣ್ಣಗಳಲ್ಲಿಯೂ ವ್ಯತ್ಯಾಸ ತೋರಿಸಿದ್ದಾರೆ. ಕಡುನೀಲಿ, ನೀಲಿ, ನಸುಗೆಂಪು, ಕೆಂಪು, ಕೇಸರಿ, ಹಸಿರು ಇತ್ಯಾದಿ ಬಣ್ಣಗಳನ್ನು ಇಡೀ ಶರೀರಕ್ಕೆ ಹಾಕಿ ಪ್ರತ್ಯೇಕವಾಗಿ ಗುರುತಿಸುವಂತೆ ಮಾಡಿದ್ದಾರೆ. ಮೂಲದ **ಯೆಲ್ಲೋ ಆಕರ್** ಕಿತ್ತುಬಂಡೆಯಲ್ಲಿ ನಿಂಬೆಹಳದಿ ಬಣ್ಣ ಅಲ್ಲಲ್ಲಿ ಉಳಿದಿದೆ. ಇವು ವಿಜಯನಗರದ ಅಂತ್ಯದ ಅಥವಾ ಮುಂಚಿನ ಮೈಸೂರು ಶೈಲಿಯನ್ನು ಹೋಲುತ್ತವೆ.

ಮೂಡಬಿದರಿಯ ಜೈನ ಮಠದ ಬಸ್ತಿಯಲ್ಲಿ ಕೆಲವು ಭಿತ್ತಿಚಿತ್ರಗಳು ಉಳಿದಿವೆ. ಇಲ್ಲಿಯೂ ಇಡೀ ಮಠವನ್ನು ಪುನರುದ್ಧಾರಮಾಡಿದ್ದರೂ, ಚಿತ್ರವಿರುವ ಭಾಗವನ್ನು ಹಾಗೆಯೇ ಉಳಿಸಿರುವುದು ಶ್ಲಾಘನೀಯ. ಒಳಗಿನ ಗರ್ಭಗುಡಿಯ ಮುಂದಿನ ಅಂಕಣದ ಮೂರು ಗೋಡೆಗಳಲ್ಲಿ ಮೇಲ್ಗಡೆ ಉದ್ದಕ್ಕೂ ಕುಳಿತಿರುವ ಭಂಗಿಯಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರನ್ನು ಚಿತ್ರಿಸಿದೆ. ಇಲ್ಲಿಯೂ ವಿವಿಧ ವರ್ಣಗಳಿಂದ ಗುರುತಿಸುವಂತೆ ಬೇರ್ಪಡಿಸಿದೆ. ಗರ್ಭಗುಡಿಯ ದ್ವಾರದ ಎರಡೂ ಪಕ್ಕದಲ್ಲಿ ಎಂದರೆ ಮೇಲೆ ಹೇಳಿದ ಚಿತ್ರಗಳ ಕೆಳಗೆ ದ್ವಾರಪಾಲಕರಿದ್ದು ಅದು ಅದೇ ಕಾಲದ ರಚನೆಯಂತಿದೆ. ಮಠದ ದ್ವಾರದ ಎರಡು ಪಕ್ಕದಲ್ಲಿ ಎರಡು ಕೊಠಡಿಗಳು ಒಳಮುಖನಾಗಿದ್ದು, ಅವುಗಳಲ್ಲಿಯೂ ಕೆಲವು ದೊಡ್ಡ ಪ್ರಮಾಣದಲ್ಲಿ ಸಂಯೋಜಿಸಿದ ಚಿತ್ರಗಳವೆ. ಉಳಿದ ಗೋಡೆಗಳಲ್ಲೂ ಇದ್ದಿರಬಹುದಾದರೂ ಈಗ ನಾಶವಾಗಿವೆ. ಪ್ರವೇಶದ ಬಲ ಕೋಣೆಯಲ್ಲಿ ದೇಶೀಯ ಅರಸನೊಬ್ಬ ಇನ್ನೊಬ್ಬ ಅರಸ

ನೊಂದಿಗೆ ಯುದ್ಧಕ್ಕೆ ಮುಖಾಮುಖಿಯಾಗಿರುವ ದೃಶ್ಯವಿದೆ. ಅಲಂಕೃತ ಆನೆ-ಕುದುರೆಗಳು, ಎರಡೂ ತಂಡದಲ್ಲಿರುವ ರಾಜರ, ಯೋಧರ ನಿಲವು, ಕಸೆಅಂಗಿಗಳು, ರುಮಾಲುಗಳಲ್ಲಿ ವೈವಿಧ್ಯ, ಬಣ್ಣಗಾರಿಕೆ, ಒಟ್ಟು ಸಂಯೋಜನೆ ಚಿಕಣಿ ಚಿತ್ರವನ್ನು ನೆನಪಿಗೆ ತರುತ್ತದೆ. ಇತ್ತಂಡದಲ್ಲಿಯೂ ಯೋಧರಿಬ್ಬರು ದುರ್ಬೀನು ಹಿಡಿದು ನೋಡುತ್ತಿದ್ದಾರೆ. ಇನ್ನೊಂದು ಚಿತ್ರದಲ್ಲಿ ಪ್ರಾಯಶ ದ್ರೌಪದಿಯೊಂದಿಗೆ ಇರುವ ಪಂಚಪಾಂಡವರು, ರೆಕ್ಕೆಯುಳ್ಳ ಇಬ್ಬರು ಗಂಧರ್ವ ಸ್ತ್ರೀಯರು ಹೂಮಳೆ ಕರೆಯುತ್ತಿದ್ದಾರೆ. ಇನ್ನೊಂದು ಕೋಣೆಯಲ್ಲಿ ಪಟ್ಟಾಭಿಷಕ್ತರಾದ ರಾಮ-ಸೀತೆಯರು, ಅನುಜರು, ಹನುಮಂತನಿಂದೊಡಗೂಡಿರುವ ದೃಶ್ಯವಿದೆ.

ಈ ಚಿತ್ರಗಳು ಬಹಳಷ್ಟು ಜನರ ಕಣ್ಣಿಗೆ ಬಿದ್ದಿರಬಹುದಾದರೂ ಕಾರ್ಕಳಕ್ಕೆ ಹತ್ತು ಕಿ.ಮಿ. ದೂರದ ಬಜಗೋಳಿಯ ಚಿತ್ರಗಳು ಇನ್ನೂ ಅಪ್ರಕಟಿತವಾಗಿಯೇ ಇವೆ. ಮೂಡಾರು ಹಳ್ಳಿಯ ಒಂದು ಭಾಗ ಬಜಗೋಳಿ. ಅಲ್ಲಿಯ ದಿ: ಸುಬ್ಬಯ್ಯ ಶಾಸ್ತ್ರಿಗಳ ಮನೆಯ ಆವರಣದಲ್ಲಿ ಭೂತಸ್ಥಾನದ ಮುಂದಿನ ಹಜಾರದಲ್ಲಿ ಚಿತ್ರಗಳಿವೆ. (ಈ ವಿಷಯ ನನ್ನ ಗಮನಕ್ಕೆ ತಂದವರು ಶ್ರವಣಬೆಳಗೊಳದ ದಿ. ಶ್ರೀ ಪಂಡಿತ ಪದ್ಮಣ್ಣ ಅವರು) ಗೋಡೆಯ ಮೂರು ಪಾರ್ಶ್ವಗಳಲ್ಲಿಯೂ, ಸುಮಾರು ಎಂಟು ಅಡಿ ಎತ್ತರದಲ್ಲಿ ಉದ್ದಕ್ಕೂ ಚಿಕ್ಕ ಚಿಕ್ಕದಾಗಿ ಎಪ್ಪತ್ತಏಳು ಮಂದಿ ಜೈನ ಮುನಿಗಳನ್ನು ಬಿಡಿಸಿದ್ದಾರೆ. ಇವರಲ್ಲಿ ಇಪ್ಪತ್ತ ಎರಡು ಮಂದಿ ತೀರ್ಥಂಕರರೂ ಐದು ಮಂದಿ ಪರಮೇಷ್ಠಿಗಳೂ ಸೇರಿದ್ದಾರೆ. ಪರಮೇಷ್ಠಿಗಳ ವಿನಹ ಎಲ್ಲರೂ ನಗ್ನರಾಗಿ ಖಡ್ಗಾಸನದಲ್ಲಿ ನಿಂತಿದ್ದಾರೆ. ತೀರ್ಥಂಕರರಿಗೆ ಅವರ ಕೆಳಗೆ ಹೆಸರು ಬರೆದಿದ್ದಾರೆ. ಪ್ರತಿಯೊಬ್ಬರನ್ನು ಕಂಬಗಳಿಂದ ಬೇರ್ಪಡಿಸಿದ್ದು ಕೆಳಗೆ ಉದ್ದನೆಯ ಬಿಳಿಯ ಸಾಲಿನ ಪಟ್ಟಿಯನ್ನು ಬಿಡಿಸಿದೆ. ಎದುರು ಗೋಡೆಯ ಮಧ್ಯದಲ್ಲಿ ಮೂರು ದೊಡ್ಡ ಅಂಕಣಗಳಲ್ಲಿ ಚಿತ್ರಗಳಿವೆ. ಎಡಗಡೆಯಲ್ಲಿ ವೀಣಾಪಾಣಿ ಸರಸ್ವತಿ ಚಿತ್ರವಿದೆ. ಬಲದ ಅಂಕಣದಲ್ಲಿ ಜಿನದತ್ತರಾಯ ಕುದರೆಯನ್ನು ಕಟ್ಟಿ ಮರದ ಕೆಳಗೆ ಮಲಗಿರುವಂತೆಯೂ ಇನ್ನೊಂದು ಕೊಂಬೆಗೆ ಚೀಲವೊಂದನ್ನು ಕಟ್ಟಿರುವಂತೆಯೂ ಸಂಯೋಜಿಸಲಾಗಿದೆ. ಚೀಲದಲ್ಲಿ ಮಾಯಾರೂಪಿನಲ್ಲಿ ಯಕ್ಷಿ ಇದ್ದಾಳೆ. ಮಧ್ಯದ ಅಂಕಣದಲ್ಲಿ ರಾಜನೊಬ್ಬ ನಗ್ನ ಜೈನ ಮುನಿಗೆ ಭಿಕ್ಷೆ ನೀಡುತ್ತಿದ್ದಾನೆ. ಹಿಂದೆ ರಾಣಿಯೂ ಸಣ್ಣ ಹುಡುಗನೊಬ್ಬನೂ ಇದ್ದಾನೆ. ಆಚೆ ಬದಿಗೆ ಹುಲಿ ಹಾಗೂ ಹಸುಗಳು ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಿವೆ. ಯತಿಯ ಕಮಂಡಲ ಮತ್ತು ಮೂರು ಕಾಲಿನ ಪೀಠಗಳನ್ನು ಚಿತ್ರಿಸಲಾಗಿದೆ. ಚಿತ್ರಿತ ವ್ಯಕ್ತಿಗಳು ಇಂತಹವರೇ ಎಂದು ಹೇಳಲಾಗದಿದ್ದರೂ, ಕಾರ್ಕಳದ ಗೊಮ್ಮಟನನ್ನು ಸ್ಥಾಪಿಸಿದ ಪಾಂಡ್ಯ ರಾಜನ ವಂಶಜ ಭೈರವರಾಯ ಹಾಗೂ ಆತನ ಕುಲಗುರು ಲಲಿತಕೀರ್ತಾಚಾರ್ಯರು ಇರಬಹುದೆಂದೂ ಊಹಿಸಬಹುದು. ಇವರ ಕಾಲದಲ್ಲಿ ಮತ್ತೆ ಕಾರ್ಕಳ ಪ್ರವರ್ಧಮಾನಕ್ಕೆ ಬಂದು ಮಸ್ತಕಾಭಿಷೇಕವೂ ನಡೆಯಿತು. (ಮದನಾರಿ ಗೊಮ್ಮಟಸ್ವಾಮಿಯ ಚರಿತೆ, ಸಂ: ಜಿ.ಪಿ. ರಾಜರತ್ನಂ) ಇದನ್ನೇ ಹೋಲುವ ಸಂಯೋಜನೆ ಕಾರ್ಕಳದ ಬಸ್ತಿಯಲ್ಲೂ ಇದ್ದು, ಬಜಗೋಳಿಯ ಚಿತ್ರಕಾರ ಅದರಿಂದ ಪ್ರಭಾವಿತನಾಗಿರುವಂತಿದೆ.

ಎಲ್ಲವೂ ಸಪೂರವಾಗಿ ನೀಳವಾಗಿರುವ ಆಕೃತಿಗಳು ತೈಲವರ್ಣದಲ್ಲಿ ನೆರಳು ಬೆಳಕು ತೋರು ವಂತೆ ಆಧುನಿಕ ರೀತಿಯಲ್ಲಿ ರವಿವರ್ಮ ಚಿತ್ರಗಳನ್ನು ನೆನಪಿಸುವಂತೆ ಚಿತ್ರಿಸಲಾಗಿದೆ. ಮುನಿ ಗಳ ಚಿತ್ರಣ ಇನ್ನೂ ಮೈಸೂರು ಸಂಪ್ರದಾಯದಲ್ಲಿಯೇ ಇದೆ. ಜೈನಶಾಸ್ತ್ರದ ರೀತ್ಯಾ ವಿವಿಧ ಬಣ್ಣಗಳನ್ನು ಹಾಕಿದೆ. ಹೊರಬಾಗಿಲ ಎರಡೂ ಬದಿಯಲ್ಲಿ ಅರಸನೊಬ್ಬ ಆಸನದ ಮೇಲೆ ಕುಳಿತಂತೆಯೂ ಅಚೆಈಚೆಗೆ ಇಬ್ಬರು ನಿಂತಿರುವಂತೆಯೂ ಚಿತ್ರವೊಂದರಲ್ಲಿ ಗುರುತಿಸ ಬಹುದು, ತಲಾ ಮೂರು ಅಂಕಣಗಳನ್ನು ಚಿತ್ರಿಸಿದ್ದು ಅವು ಪೂರ ನಾಶವಾಗಿವೆ. ದ್ವಾರ ಪಾಲಕ ಅಥವಾ ರಾಜರುಗಳ ಸೇವಕರಿರಬಹುದು. ಈ ಚಿತ್ರಗಳನ್ನು ಸ್ಥಳೀಯ ಕಲಾವಿದ ರಾದ ಬಣ್ಣದ ಪಾಚು ಹಾಗೂ ಬಣ್ಣಗಾರ ಶೆಟ್ಟಿ ಎಂಬುವವರು ನೂರು ವರ್ಷಗಳ ಹಿಂದೆ ರಚಿಸಿದರೆಂದು ಹೇಳಿಕೆಯಿದೆ. ಉಳಿದವು ಜಂಬಿಟ್ಟಿಗೆಯ ಗೋಡೆಯ ಮೇಲೆ ಗೆರೆಹಾಕಿ ಚಿತ್ರಿಸಿದ್ದರೆ ಇಲ್ಲಿ ಮಣ್ಣಿನ ಗೋಡೆಯ ಮೇಲೆ ಚಿತ್ರಿಸಲಾಗಿದೆ.

ಈ ಎಲ್ಲ ಕಡೆಯ ಚಿತ್ರಗಳೂ ಸಂಪ್ರದಾಯದ ಅಲಂಕಾರಯುತ ಶೈಲಿಯಲ್ಲಿ (ಡೆಕೋ ರೇಟೀವ್) ಇದ್ದು ಚಪ್ಪಟೆಯಾಗಿ ಬಣ್ಣ ತುಂಬಲಾಗಿದೆ. ದೃಢವಾದ ಕಪ್ಪು ಬಣ್ಣದ ಹೊರ ರೇಖೆಯನ್ನು ಹಾಕಿದೆ. ದುಂಡುತನ ತೋರಲು ಅವುಗಳ ಒಂದು ಪಕ್ಕದಲ್ಲಿ ತೆಳುವಾದ ನೆರಳಿನ ರಚನೆಯಿದೆ. ನಗ್ನ ಯತಿಗಳನ್ನು ಖಡ್ಗಾಸನದಲ್ಲಿ ನಿಂತಂತೆ ಅಥವಾ ಧ್ಯಾನಮುದ್ರೆ ಯಲ್ಲಿ ಕುಳಿತಂತೆ ಎರಡೂ ಬಗೆಯಲ್ಲಿ ಚಿತ್ರಿಸಲಾಗಿದೆ. ಪ್ರಾಯಶ ನಿಂತ ಮುನಿಗಳ ನಗ್ನತೆ ಯನ್ನು ಕುಳಿತ ಭಂಗಿಯಲ್ಲಿ ಮರೆಮಾಡಬಹುದೆಂಬ ಕಾರಣವಿರಬಹುದು ಅಥವಾ ನಿಲ್ಲುವ ಭಂಗಿಯ ಚಿತ್ರಣಕ್ಕಿಂತ ಹಿಂದಿನ ಒಂದು ಶೈಲಿಯಾಗಿರಬಹುದು.

ಉಳಿದಂತೆ ಕೂಗಾರು ಘಟ್ಟಕ್ಕೆ ಹೋಗುವ ಹಾದಿಯಲ್ಲಿ ಒಂದು ಜೈನ ಬಸದಿ ಇರುವು ದಾಗಿಯೂ, ಅದರಲ್ಲಿ ಯಕ್ಷಗಾನದ ಭಿತ್ತಿಚಿತ್ರಗಳು ಇರುವುದೆಂದೂ ತಿಳಿದು ಹೋದು ದಾಗಿಯೂ ಆದರೆ ಬಸ್ತಿ ನೂರು ವರ್ಷ ಹಾಗೂ ಮಾಸಿದ ಚಿತ್ರಗಳು ಐವತ್ತು ವರ್ಷ ಹಳೆಯವೆಂದೂ, ಚಿತ್ರಗಳೂ ಯಕ್ಷಗಾನದಲ್ಲಿನವೆಂದೂ ಡಾ॥ ಶಿವರಾಮ ಕಾರಂತರು ತಿಳಿಸು ತ್ತಾರೆ. (ಕರ್ನಾಟಕದಲ್ಲಿ ಚಿತ್ರಕಲೆ, ಪು. 80) ಉಡುಪಿ ತಾಲೂಕಿನ ಉಪ್ಪೂರು ಬಳಿಯ ಉಗ್ಗಲ್ ಬೆಟ್ಟುವಿನ **ಬ್ರಹ್ಮ ಬೈದರ್ಕಳ** ಗರಡಿಯಲ್ಲಿ ನೂರೈವತ್ತು ವರ್ಷ ಹಳೆಯ ಯಕ್ಷ ಗಾನ ಭಿತ್ತಿಚಿತ್ರಗಳು ಇರುವುದಾಗಿ ಒಂದು ಲೇಖನ ತಿಳಿಸುತ್ತದೆ. (ಪ್ರಜಾವಾಣಿ 24-1-82) ಆದರೆ ಅವು ಅಷ್ಟು ಹಳೆಯವಲ್ಲವೆಂದು ತಜ್ಞರ ಅಭಿಪ್ರಾಯ. ಇಲ್ಲಿ ಚಿತ್ರಿಸಿರುವ ಕೃಷ್ಣ ನಿಗೆ ಮೀಸೆ ಇರುವುದು ಕುತೂಹಲಕಾರಿ ವಿಷಯ (ಸಂವಾದ, ಮುಂಗಾರು ದಿನಪತ್ರಿಕೆ, 16-7-85) ಬ್ರಹ್ಮಾವರದ ಪಾಂಡುರಂಗ ದೇವಾಲಯದಲ್ಲಿ ಕಳೆದ ಶತಮಾನದ ಕೆಲವು ಭಿತ್ತಿ ಚಿತ್ರಗಳು ಇವೆಯೆಂದು ತಿಳಿದುಬರುತ್ತದೆ (ಕರ್ನಾಟಕ ಸ್ಟೇಟ್ ಗೆಜೆಟಿಯರ್, ಸೌತ್ ಕೆನರಾ-ನ್ಯೂ-ಸೀರಿಸ್ ಪು. 79) ಮಂಗಳೂರಿನ ಕಾರ್ಣಿಕ (ಮುಖ್ಯಪ್ರಾಣ) ದೇವಾಲಯ ದಲ್ಲೂ ಕಳೆದ ಶತಕದ ಅಂತ್ಯಭಾಗದ, ಆದರೆ ಮಾಸಿಹೋಗಿರುವ ಚಿತ್ರಗಳಿದ್ದವು (ಅದೇ.) ಆದರೆ ಅವುಗಳನ್ನು ತೆಗೆಸಿ ಮತ್ತೆ ಹೊಸದಾಗಿ ನಾಲ್ಕೈದು ವರ್ಷಗಳ ಕೆಳಗೆ ಆಧುನಿಕ ರೀತಿ

ಯಲ್ಲಿ ಬರೆಸಲಾಗಿದೆ. ಮಂಗಳೂರಿಗೆ ತೀರ ಸಮೀಪದಲ್ಲಿರುವ ಕಾಸರಗೋಡಿನ ಉತ್ತರಕ್ಕೆ 12 ಮೈಲಿಯಲ್ಲಿರುವ(ಕುಂಬಳೆ ಬಳಿ) ಅನಂತಪುರದ ಅನಂತಪದ್ಮನಾಭಸ್ವಾಮಿ ದೇವಾಲಯದಲ್ಲಿ ಒಳಹೊರಗೆ ದೊಡ್ಡ ಪ್ರಮಾಣದ ಚಿತ್ರಗಳಿವೆ. ಶಿವ ಹಾಗೂ ವಿಷ್ಣುವಿಗೆ ಸಂಬಂಧಿಸಿದ ಹಾಗೂ ಸೂರ್ಯನ ಚಿತ್ರಗಳಿವೆ. ಗರ್ಭಗೃಹದಲ್ಲಿಯೂ ಕೆಲವು ಚಿತ್ರಗಳು ಮಸುಕಾಗಿ ಕಂಡುಬರುತ್ತವೆ. ಚಿತ್ರಗಳನ್ನು ಎರಡು ಪದರಗಳಲ್ಲಿ ಚಿತ್ರಿಸಿದಂತೆ ತೋರುತ್ತದೆ. (ಇಂಡಿಯನ್ ಆರ್ಕ್ಯಾಲಜಿ, ಎ ರಿವ್ಯೂ, 1970-71, ಪುಟ-83) ಕದ್ರಿಯ ದೇವಾಲಯದ ಮುಂದಿರುವ ಮಂಟಪದ ಕಂಬಗಳ ಮೇಲೆ ರವಿವರ್ಮನ ಕೆಲವು ಚಿತ್ರಗಳನ್ನು ನಕಲು ಮಾಡಿದ್ದಾರೆ. ಮತ್ತೆ ಮತ್ತೆ ಸ್ಥಳೀಯ ಕಲಾವಿದರಿಂದ ಅವುಗಳನ್ನು ಪುನರ್‌ಲೇಖಿಸಿರುವಂತೆ ಕಂಡುಬರುತ್ತದೆ. ರವಿವರ್ಮನಿಗಿರುವ ಜನಪ್ರಿಯತೆಯನ್ನು ಇದು ತೋರಿಸುತ್ತದೆಯಷ್ಟೆ.

ಭಿತ್ತಿ ಚಿತ್ರಗಳ ಒಂದು ಪ್ರಕಾರವಾದ **ಕಾವಿಕಲೆಯ** ಬಗ್ಗೆಯೂ ಹಲವು ಉದಾಹರಣೆಗಳನ್ನು ಇಲ್ಲಿ ಕಾಣಬಹುದು. ಉತ್ತರ ಕರ್ನಾಟಕದಲ್ಲಿ ವಿಪುಲವಾಗಿ ದೊರೆಯುವ ಕಾವಿ ಮಣ್ಣನ್ನು (ಕಲ್ಲಿನ ಪುಡಿ) ಗೋಡೆಗೆ ಬಳಿದು ಮೊನೆಯುಳ್ಳ ಮೊಳೆಯಿಂದ ಗೀರಿ ರೇಖಾ ಚಿತ್ರದಂತೆ ರಚಿಸುವ ಈ ಬಗೆಯ ಕಲೆಯನ್ನು ಉತ್ತರ ಕನ್ನಡ ಜಿಲ್ಲೆ ಹಾಗೂ ಗೋವಾಗಳಲ್ಲಿ ವಿಪುಲವಾಗಿ ಕಾಣುತ್ತೇವೆ. ಭಟ್ಕಳದಿಂದ ಕೆಳಗೆ ಅವುಗಳು ಕಡಿಮೆ; ಕೊಲ್ಲೂರು ಮೂಕಾಂಬಿಕಾ ದೇವಾಲಯದಲ್ಲಿ ಕೆಲವು ಚಿತ್ರಗಳಿದ್ದು ನಂತರ ಅವನ್ನು ಆಧುನಿಕ ಬಣ್ಣಗಳಿಂದ ರೇಖಿಸಿದ್ದಾರೆ. ಮಂಗಳೂರು ಪೇಟೆಯಲ್ಲಿಯೇ ಇರುವ 'ಗೋಕರ್ಣ ಮಠದ' ಹೊರಗೋಡೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಾವಿಕಲೆಯನ್ನು ಕಾಣಬಹುದು. ದೇವತೆಗಳು, ಮನುಷ್ಯರ ಆಕೃತಿಗಳಲ್ಲದೆ ಪಕ್ಷಿಗಳು, ಹೂ ಬಳ್ಳಿಗಳನ್ನು ಸಹ ಸುಂದರವಾಗಿ ಬಿಡಿಸಿದ್ದಾರೆ. ಇವುಗಳಲ್ಲಿ **ದಶಾವತಾರದ** ಚಿತ್ರಣವೂ ಕಂಡುಬರುತ್ತದೆ.

ಭಿತ್ತಿ ಚಿತ್ರಗಳ ಬಗ್ಗೆ ಹೇಳುವಾಗ ಬಿಡಿ ಚಿತ್ರಗಳ ಬಗ್ಗೆಯೂ ಕೆಲವು ಮಾತುಗಳನ್ನು ಹೇಳಬಹುದು. ಧವಳ ಗ್ರಂಥಗಳ ಚಿತ್ರಗಳ ಬಗ್ಗೆ ಡಾ. ಶಿವರಾಮ ಕಾರಂತರು (ಕರ್ನಾಟಕದಲ್ಲಿ ಚಿತ್ರಕಲೆ ಮತ್ತು ಧವಳ ಗ್ರಂಥಗಳಲ್ಲಿ ಚಿತ್ರಕಲೆ. **ಬಿಡಿಬರಹಗಳು**, 1972) ಹಾಗೂ ಶಿವರಾಮ ಮೂರ್ತಿ (ಸೌತ್ ಇಂಡಿಯನ್ ಪೇಂಟಿಂಗ್ಸ್) ಗಳಲ್ಲಿ ವಿವರವಾಗಿ ಬರೆದಿದ್ದಾರೆ. ಬನ್ನಿಕೆರೆಯ ಚೈತ್ಯಾಲಯದ ಆಚಾರ್ಯ ಶುಭಚಂದ್ರರಿಗೆ ಸು. 1120ರ ವೇಳೆಯಲ್ಲಿ ದಾನ ಮಾಡಿದ ಗ್ರಂಥವಿದೆಂದು ಹೇಳುತ್ತಾರೆ. ಲಿಪಿ ಹಾಗೂ ಚಿತ್ರಗಳ ವಿನ್ಯಾಸದಿಂದ ಹೊಯ್ಸಳ ವಿಷ್ಣುವರ್ಧನ ಕಾಲದಲ್ಲಿ (1113-20) ರಚಿಸಿರಬೇಕೆಂದು ಡಾ. ಎಚ್.ಆರ್. ರಘುನಾಥ ಭಟ್ಟರು ತಿಳಿಸುತ್ತಾರೆ. (**ಕರ್ನಾಟಕ ಶಾಸನ, ಕಲೆ** 1977, ಪು. 183) ತಲೆಯ ಭಾಗ ಮುರಿದುಹೋಗಿರುವ ಗರಿಯೊಂದರಲ್ಲಿ ಕುಳಿತಿರುವ ರಾಜದಂಪತಿಗಳು ವಿಷ್ಣುವರ್ಧನ-ಶಾಂತಲೆಯರೆಂಬುದು ಶಿವರಾಮಮೂರ್ತಿ ಅವರ ಅಭಿಪ್ರಾಯ. ಚಾವುಂಡರಾಯನು ನೇಮಿಚಂದ್ರ ಸಿದ್ಧಾಂತಿಗಳಿಗಾಗಿ ಶ್ರವಣಬೆಳಗೊಳದಲ್ಲಿ **ಸಿದ್ಧಾಂತ ಬಸ್ತಿ** ಮಾಡಿಸಿ ಈ ಪುಸ್ತಕ (**ಧವಳತ್ರಯ**) ಗಳನ್ನು ಅಲ್ಲಿರಿಸಿದ್ದನೆಂದೂ ನಂತರ ಮೂಡಬಿದರೆಗೆ ಸಾಗಿಸಿದ

ರೆಂದು ಡಾ. ಶಿರೂರರು ಬರೆಯುತ್ತಾರೆ. (ಶ್ರವಣಬೆಳಗೊಳ (ಥೀಸೀಸ್) ಪು. 336-7) ಆದರೆ ಇವು ಚಾವುಂಡರಾಯನ ನಂತರದ್ದೆಂದು ಸ್ಪಷ್ಟವಿದೆ. 9ನೇ ಶತಮಾನದಲ್ಲಿ ಕರ್ಹಾಡಿನ ಇಂದ್ರನಂದಿಯ ಕಾಲದಲ್ಲಿ ಧವಲ ಗ್ರಂಥಗಳು ರಚಿತವಾಗಿ ಕೊಲ್ಲಾಪುರದಲ್ಲಿ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯರ ಸಂರಕ್ಷಣೆಯಲ್ಲಿ ಮಂಗಳವಾರ ಪೇಟೆಯ ಸಿದ್ಧಾಂತ ಬಸ್ತಿಯಲ್ಲಿದ್ದು ನಂತರ ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ದಾಳಿಯಿಂದ ರಕ್ಷಿಸಲು ಮೂಡಬಿದರೆಗೆ ತರಲಾಯಿತೆಂದು ಅಲ್ಲಿ (ಕೊಲ್ಲಾಪುರ) ಐತಿಹ್ಯವಿದೆಯಂತೆ. (ಪ್ರಾಚೀನ ವೈವಿಧ್ಯ ಮತ್ತು ಲಕ್ಷಣಗಳು, ಪ್ರೊ. ಪಿ.ಕೆ. ಭಾಗೋಜಿ, 1970) ಇವೆಲ್ಲಕ್ಕಿಂತ ಮೂಡಬಿದರಿಯ ಸ್ಥಳ ಪರಿಚಯ ಮಾಡಿಕೊಡುವ ಕೈಪಿಡಿಯಲ್ಲಿ "ಧಾರವಾಡ ಜಿಲ್ಲೆಯ ಬಂಕಾಪುರದಿಂದ ದೇವತೆಗಳು ವೈಭವದಿಂದ ಈ ಗ್ರಂಥಗಳನ್ನು ತಂದು ಪಾರ್ಶ್ವನಾಥ ಸ್ವಾಮಿಯ ಸನ್ನಿಧಿಯಲ್ಲಿ ನೆಲೆಗೊಳಿಸಿದರೆಂದು" ಅಲ್ಲಿಯ ಹಿರಿಯ ಶ್ರಾವಕರು ತಿಳಿಸುತ್ತಾರೆ. (ಮೂಡಬಿದ್ರಿ, 1986). ನೃಪತುಂಗನಿಗೆ **ಅತಿಶಯ ಧವಳ** ಎಂಬ ಬಿರುದಿತ್ತು. ಪ್ರಾಯಶ ಆ ಕಾಲದಲ್ಲಿಯೇ ಧವಳ ಗ್ರಂಥಗಳು ಕನ್ನಡಕ್ಕೆ ಲಿಪ್ಯಂತರವಾಗಿ ಅದೇ ಪೀಳಿಗೆಗೆ ಸೇರಿದ ಪ್ರಸ್ತುತ ಗ್ರಂಥ ರಚಿತಗಿವಾದ್ದು, ಹೊರಗಡೆಯಿಂದ ಮುಖ್ಯವಾಗಿ ಉತ್ತರ ಕರ್ನಾಟಕದಿಂದ ಈ ಗ್ರಂಥಗಳು ಮೂಡಬಿದರಿಗೆ ಬಂದಿರಬೇಕು. ಏಕೈಕ ಉದಾಹರಣೆಯಾಗಿರುವ ಈ ಚಿತ್ರಗಳನ್ನು ಮುಂದಿನ 'ಜೈನ ಚಿಕಣಿ'ಯ ಚಿತ್ರಕಾರರೂ ಅನುಸರಿಸಿಲ್ಲ.

ಮಂಗಳೂರಿನ ವೆಂಕಟರಮಣ ಸ್ವಾಮಿ ದೇವಾಲಯದಲ್ಲಿ ಶಿವ ಹಾಗೂ ಕೃಷ್ಣರಿಗೆ ಸಂಬಂಧಿಸಿದ ಎರಡು ಮೈಸೂರು ಸಾಂಪ್ರದಾಯಿಕ ಶೈಲಿಯ ಚಿತ್ರಗಳಿವೆ. ಧರ್ಮಸ್ಥಳ ಇತ್ಯಾದಿ ಕಡೆಗಳಲ್ಲಿ ಖಾಸಗಿ ಸಂಗ್ರಹಾಲಯಗಳಲ್ಲೂ ಬಿಡಿ-ಚಿತ್ರಗಳಿವೆ. ಧರ್ಮಸ್ಥಳದ ದಿ: ಮಂಜಯ್ಯ ಹೆಗ್ಗಡೆಯವರು ಸ್ವತಹ ಕಲಾವಿದರೂ ಆಗಿದ್ದರು. ಅವರು ರಚಿಸಿದ ನಾಡೋಜ ಪಂಪನ ಚಿತ್ರವನ್ನು ಮುಳಿಯ ತಿಮ್ಮಪ್ಪಯ್ಯ-ಅವರು ತಮ್ಮ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ಉಳಿದ ಹಲವಾರು ಚಿತ್ರಗಳು ಶ್ರವಣಬೆಳಗೊಳದ ಮಠದಲ್ಲಿ ಪ್ರದರ್ಶಿತವಾಗಿವೆ. ದಿ. ರಂಜಾಳ ಗೋಪಾಲಕೃಷ್ಣ ಶೆಣೈ ಅವರು ಚಿತ್ರಕಲಾವಿದರೂ ಆಗಿದ್ದರು. ಕಾರ್ಕಳದ ವೆಂಕಟರಮಣ ಸ್ವಾಮಿ ದೇವಾಲಯದಲ್ಲಿಯ ಭಿತ್ತಿಚಿತ್ರಗಳು ಅವರು ರಚಿಸಿದ್ದೆಂಬ ಹೇಳಿಕೆಯಿದೆ.

ಹದಿನೈದನೇ ಶತಮಾನದಲ್ಲಿ ಯುರೋಪಿನಿಂದ ಭಾರತದ ಪಶ್ಚಿಮ ಕರಾವಳಿಗೆ ಜಲಮಾರ್ಗ ಕಂಡುಹಿಡಿದ ಮೇಲೆ ವ್ಯಾಪಾರಿಗಳೊಂದಿಗೆ ಪ್ರವಾಸಿಗಳೂ ಧರ್ಮ ಪ್ರಚಾರಕರೂ ಬಂದರು ಮೊದಲಿಗೆ ಬಂದ ವಾಸ್ಕೊ-ದ-ಗಾಮನೇ ಕ್ಯಾಲಿಕಟ್‌ಗೆ ಬಂದಾಗ ಚರ್ಚ್‌ವೊಂದಕ್ಕೆ ಹೋದುದಾಗಿಯೂ, ಗುಡಿಯಲ್ಲಿ ಮಾತೆಯ ಸಣ್ಣ ವಿಗ್ರಹ ಇದ್ದುದಾಗಿಯೂ ಗೋಡೆಗಳ ಮೇಲೆ ಕಿರೀಟಧರಿಸಿದ ಸಂತರ ಚಿತ್ರಗಳನ್ನು ವಿಧವಿಧವಾಗಿ ಚಿತ್ರಿಸಿದ್ದಾಗಿಯೂ ಹೇಳುತ್ತಾನೆ. (ಲ್ಯಾಂಡ್ಸ್ ಆಫ್ ಸ್ಪೈಸ್ ಅಂಡ್ ಟ್ರೆಜರ್, ವಿಲಿಯಂ ನಾಪರ್, 1971, ಪುಟ-44) ಆದರೆ ಅನುವಾದಕರು ಅದು ಚರ್ಚ್ ಅಲ್ಲ ಹಿಂದೂ ದೇವಾಲಯ ಎಂದು ಅಭಿಪ್ರಾಯ ಪಡುತ್ತಾರೆ. (ಎಚ್.ಎಲ್. ನಾಗೇಗೌಡ, ಪ್ರ.ಕಂ. ಇಂಡಿಯಾ, 2, ಪು-210) ಆದರೂ

ಪಶ್ಚಿಮ ಕರಾವಳಿಯಲ್ಲಿ ಆಗ ಪ್ರಸಿದ್ಧವಿದ್ದ ವಿಜಯನಗರಕ್ಕೆ (ಹಂಪೆ) ಹೋಗುವ ಪ್ರವಾಸಿಗಳು ದಕ್ಷಿಣ ಕನ್ನಡ ಜಿಲ್ಲೆಯನ್ನು ಹಾದು ಹೋಗಿದ್ದಾರಲ್ಲದೆ ಈ ಪ್ರದೇಶದ (ಹಿಂದು) ದೇವಾಲಯ, ಶಿಲ್ಪ ಚಿತ್ರಗಳ ಬಗ್ಗೆಯೂ ಹೇಳುತ್ತಾರೆ. ಮುಂದೆ ಪಾದ್ರಿಗಳು ನೆಲೆನಿಂತ ಮೇಲೆ ಚರ್ಚುಗಳನ್ನು ಕಟ್ಟಿದಾಗ ಅದರಲ್ಲಿ ಚಿತ್ರಗಳನ್ನು ಬಿಡಿಸಿರಬೇಕು. ಪ್ರಸ್ತುತ ಮಂಗಳೂರಿನ ಸೆಂಟ್ ಅಲಾಯಸಿಸ್ ಚರ್ಚಿನಲ್ಲಿ ಈ ಶತಮಾನದ ಆರಂಭದಲ್ಲಿ ರಚಿಸಿದ ಚಿತ್ರಗಳಿವೆ. 1899ರಲ್ಲಿ ಯೂರೋಪಿನಿಂದ ಮಂಗಳೂರಿಗೆ ಬಂದ ಪೂಜ್ಯ ಸಹೋದರ ಆ್ಯಂಟೋನಿ ಮೋಶ್ಚಿನಿ (Antony Moscheni)

1902-04ರ ಅವಧಿಯಲ್ಲಿ ಈ ಚರ್ಚಿನಲ್ಲಿ ನೂರಾರು ಚಿತ್ರಗಳನ್ನು ರಚಿಸಿದ್ದಾನೆ. ಚರ್ಚ್ 1885ರಲ್ಲಿ ರೆ. ಫಾದರ್ ಜೋಸೆಫ್ ವಿಲ್ಲಿ ಎಂಬಾತ ರೋಮಿನ ಸಂತ ಫಿಲಿಪ್ ನೇರಿಯ ಮಾದರಿಯಲ್ಲಿ ಕಟ್ಟಿಸಿದ್ದ, ನಯವಾದ ಗಾರೆಹಚ್ಚಿದ ಗೋಡೆಗಳ ಮೇಲೆಯೂ ಮೇಲ್ಛಾವಣಿಯಲ್ಲಿ ಕ್ಯಾನ್‌ವಾಸ್‌ಮೇಲೆ ರಚಿಸಿ ಹಚ್ಚಿಸಿರುವುದನ್ನು ಕಾಣಬಹುದು. ಅಲ್ಲದೆ ಬಿಡಿಯಾಗಿಯೂ ಸಾಕಷ್ಟು ಸಂಖ್ಯೆಯಲ್ಲಿ ಚಿತ್ರಗಳಿವೆ. ಪ್ರಾರ್ಥನಾ ಮಂದಿರವಲ್ಲದೆ ಅದಕ್ಕೆ ಹೊಂದಿಕೊಂಡಿರುವ ಭೋಜನ ಶಾಲೆಯ ಗೋಡೆಗಳಲ್ಲೂ ಚಿತ್ರಗಳಿವೆ. ಇವುಗಳಲ್ಲಿ ಕೆಲವು ಯೂರೋಪಿನ ಸ್ಥಳಗಳಲ್ಲಿನ ನಿವಾಸಗಳನ್ನೂ (ಈ ಪಾದ್ರಿಗಳ 'ನೇಟಿವಿಟಿ'ಗೆ ಸಂಬಂಧಿಸಿದುವನ್ನು ಕಾಣಬಹುದಾಗಿದೆ.

ಕೆಲವು ಸಂತರ, ಗುರುಗಳ ಚಿತ್ರ-ಶಿಲ್ಪಗಳನ್ನು ಪ್ರಾರ್ಥನಾ ವೇದಿಕೆಯಲ್ಲಿ ಇರಿಸಲಾಗಿದೆ. ಮೊದಲಿಗೆ ಏಸುವು ಮಕ್ಕಳೊಂದಿಗೆ ಇರುವ ಚಿತ್ರದಿಂದ ಆರಂಭವಾಗುತ್ತದೆ. ಇದು ಆ್ಯಂಟೋನಿಯ ಅತ್ಯುತ್ತಮ ಚಿತ್ರವೆಂದು ಭಾವಿಸಲಾಗಿದೆ. ಮೇಲ್ಛಾವಣಿಯ ಮಧ್ಯ ಭಾಗದಲ್ಲಿರುವ ಈ ಚಿತ್ರಗಳ ನಂತರ ಸಂತ ಅಲಾಯಿಸಿಸ್‌ಗೆ ಸಂಬಂಧಿಸಿದ ನಾಲ್ಕು ಚಿತ್ರಗಳಿವೆ. ನಂತರದ್ದು ಏಸುವು ಬಡವರಿಗೆ, ದುಃಖಿತರಿಗೆ ಸಾಂತ್ವನ ನೀಡುವ ದೃಶ್ಯವಾಗಿದೆ. ಇವುಗಳ ಇಕ್ಕೆಲದಲ್ಲಿ ಪೀಟರ್, ಪಾಲ್, ಆ್ಯಂಡ್ರ್ಯೂ, ಜೇಮ್ಸ್, ಜೋನ್ ಇತ್ಯಾದಿ ಹನ್ನೆರಡು ಮಂದಿ ಧರ್ಮ ಪ್ರಚಾರಕರ (Apostles') ಚಿತ್ರಣವಿದೆ. ಇವುಗಳ ಆಚೆ ಬದಿಗೆ ಬೇರೆ ಬೇರೆ ಸಂತರುಗಳನ್ನು ಕಾಣಬಹುದು. ಇವುಗಳನ್ನು ನಲ್ವತ್ತಕ್ಕೂ ಹೆಚ್ಚಿನ ಅಂಕಣಗಳಲ್ಲಿ ಚಿತ್ರಿಸಲಾಗಿದೆ. ಚರ್ಚಿನ ಒಂದು ಭಾಗವನ್ನು ಕಂಬಗಳಿಂದ ಪ್ರತ್ಯೇಕಿಸಿದ್ದು ಅದು ಉದ್ದನೆಯ ಹಜಾರದಂತೆ ಕಂಡುಬರುತ್ತದೆ. ಅಲ್ಲಿಯ ಮೇಲ್ಛಾವಣಿ ಹಾಗೂ ಇಕ್ಕೆಲಗಳಲ್ಲಿ ಏಸುವಿನ ಜೀವನಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಏಸುವಿನ ಜನನ, ದೇವಾಲಯದಲ್ಲಿ ತಂದೆ ತಾಯಿಯರೊಡನೆ ಇರುವುದು, ಪವಾಡಗಳನ್ನು ಮೆರೆದುದು, ಆರ್ತರಿಗೆ ದುಃಖ ಶಮನ ಮಾಡಿದ್ದು, ಉಪದೇಶ ನೀಡಿದ್ದು. ಕೊನೆಯ ಭೋಜನ, ಅಂತಿಮ ವಿಚಾರಣೆ, ಶಿಲುಬೆಗೆ ಹಾಕಿದ್ದು. ಕೆಲದಿನಗಳ ನಂತರ ಆತ ಪುಣ್ಯಪುರುಷನಾಗಿ ಮತ್ತೆ ಕಾಣಿಸಿಕೊಂಡಿದ್ದು ಇತ್ಯಾದಿ ಇಲ್ಲಿ ಚಿತ್ರಗಳಿವೆ. ಪ್ರಾರ್ಥನಾ ಮಂದಿರದ ಮಾಳಿಗೆಯ ಕೈಸಾಲೆಯಲ್ಲಿ ಏಸು-ಮೇರಿಯರಿಗೆ ಸಂಬಂಧಿಸಿದ ಹಲವಾರು ಬಿಡಿ ಚಿತ್ರಗಳು-ಏಸುವಿನ ಅಂತ್ಯದಿನದ ಹದಿನಾಲ್ಕು ಘಟ್ಟಗಳೂ

ಕ್ಯಾನ್‌ವಾಸ್ ಮೇಲೆ ಬಿಡಿಯಾಗಿ ಚಿತ್ರಿಸಲಾಗಿದೆ. ಕೆಲವನ್ನು ಗೋಡೆಗೆ ಹದ್ದಿಸಿದೆ. ಭೋಜನ ಗೃಹದಲ್ಲಿ ವಿಶಾಲವಾದ ಗೋಡೆಯ ಮೇಲೆ 'ಅಂತಿಮ ಭೋಜನವನ್ನು ಚಿತ್ರಿಸಿದೆ. ಇಡೀ ಸಂಯೋಜನೆ ಲಿಯನಾರ್ಡೋವಿನ ಸುಪ್ರಸಿದ್ಧ ಚಿತ್ರವನ್ನೇ ಹೋಲುತ್ತದೆ. ಅಲ್ಲದೆ ಬೇರೆ ಬೇರೆ ದೇಶಗಳ ಭೂ ಚಿತ್ರಗಳೂ, ಹೂ ಹಣ್ಣು ಇತ್ಯಾದಿಗಳನ್ನು ಚಿತ್ರಿಸಲಾಗಿದೆ. ಇವಲ್ಲದೆ ಸ್ವತಹ ಕಲಾವಿದನದೂ ಸೇರಿದಂತೆ ಅನೇಕ ಭಾವಚಿತ್ರಗಳೂ, ಧಾರ್ಮಿಕ ಚಿತ್ರಗಳೂ ಚರ್ಚಿನ ವಿವಿಧ ಭಾಗಗಳಲ್ಲಿವೆ. ಸ್ವತಹ ಸಂತನೂ ಆದ ಆ್ಯಂಟೋನಿಯೊ ಒಬ್ಬನೆ ಇಲ್ಲಿರುವ ಹಲವಾರು ಅಂಕಣಗಳಲ್ಲಿ ನೂರಾರು ವ್ಯಕ್ತಿಗಳ ಚಿತ್ರಗಳನ್ನು ಅವುಗಳಿಗೆ ಪೂರಕವಾಗಿ ಹಿನ್ನೆಲೆ, ಸಂಕೇತಗಳನ್ನು ಬಳಸಿ ರಚಿಸಿರುವುದು ಆತನ ಕಲಾ ನೈಪುಣ್ಯತೆಗೆ ಸಾಕ್ಷೀಭೂತವಾಗಿದೆ, ಇವು ಶೈಲಿಯಲ್ಲಿ ಯೂರೋಪಿನ ಆಧುನಿಕ ನೈಜಶೈಲಿಯಲ್ಲಿ ನೆರಳು-ಬೆಳಕುಗಳ ವ್ಯತ್ಯಾಸದೊಂದಿಗೆ, ಅಷ್ಟು ಪ್ರಖರವಲ್ಲದ ಹಿತಮಿತ ಬಣ್ಣಗಳೊಂದಿಗೆ ಚಿತ್ರಿತವಾಗಿವೆ. ತೀರ ಹತ್ತಿರದಿಂದ ಕಂಡಾಗ ಕೆಲವೆಡೆ ರಚನೆಯಲ್ಲಿ ಒರಟುತನ ಕಂಡುಬರುತ್ತದೆ. ಪ್ರಾಯಶ ಕಾಲದ ಪ್ರಭಾವದಿಂದಾಗಿ ಸೂಕ್ಷ್ಮತೆಯನ್ನು ಕಳೆದುಕೊಂಡಿರಬೇಕು. ಉಳಿದಂತೆ ಒಟ್ಟು ಸಂಯೋಜಿತ ಪ್ರಬಂಧದಲ್ಲಿ, ಮುಖ್ಯ ವಿಷಯಗಳತ್ತ ಗಮನಸೆಳೆಯುವಲ್ಲಿ, ಒಂದು ದೃಶ್ಯದಿಂದ ಮುಂದಿನದಕ್ಕೆ ನೋಡುಗನನ್ನು ಪ್ರೇರೇಪಿಸುವಲ್ಲಿ ಇಡೀ ಘಟನೆಯ ಯಾವುದೋ ಒಂದು ಸಂದರ್ಭದಿಂದ ಇಡೀ ಪ್ರಸಂಗ ನೆನಪಿಸುವಂತೆ ವಸ್ತುವಿನ ಆಯ್ಕೆಯಲ್ಲಿ ಒಳ್ಳೆಯ ಕಲಾವಿದನ ಜಾಣ್ಮೆಯನ್ನು ಗುರುತಿಸಬಹುದು. ಈತನೆ ಸುಳ್ಯದ ಬಳಿಯ ಚರ್ಚ್‌ವೊಂದಕ್ಕೆ ಏಸು ಹಾಗೂ ಮೇರಿಯರ ಪ್ರತಿಮೆಯನ್ನು ರಚಿಸಿಕೊಟ್ಟನೆಂಬ ಹೇಳಿಕೆಯಿದೆ. ಅಲ್ಲದೆ ಕೊಚ್ಚಿನ್ ಮತ್ತು ಮುಂಬೈಗಳಲ್ಲಿಯೂ ಈತ ಚಿತ್ರ ರಚಿಸಿದನೆಂದು ತಿಳಿದುಬರುತ್ತದೆ. ಈತ 1905 ನವಂಬರಲ್ಲಿ ತನ್ನ ಇಹವ್ಯಾಪಾರವನ್ನು ತ್ಯಜಿಸಿದ. ಈತನ ಚಿತ್ರಗಳು ಮುಂದಿನ ವರ್ಷ ಕಿಲಿಕೋಡ ರವಿವರ್ಮನ ಚಿತ್ರಗಳಿಗೆ ಸರಿಸಮನಾಗಿ ನೈಜ್ಯ ಶೈಲಿಯ ಬೆಳವಣಿಗೆಗೆ ನಾಂದಿಯಾಯಿತೆಂದು ಹೇಳಬಹುದು.

ಈ ಎಲ್ಲಾ ಚಿತ್ರಗಳಿಗೆ ಹಸಿರೂ ಸೇರಿದಂತೆ ಮೂರು ಮೂಲಬಣ್ಣಗಳನ್ನು ಬಳಸಿರುವಂತಿದೆ ಬಿಳಿಯನ್ನು ಹೆಚ್ಚು ಬಳಸಿದಂತಿಲ್ಲ. ಕಪ್ಪಿಗೆ, ಗಾಢವಾದ ನೀಲಿಗೆ ಹಸಿರು ಮಿಶ್ರಣ ಮಾಡಿದಂತಿದೆ. ಆದರೆ ಇವುಗಳೆಲ್ಲಾ ಕೈಯಿಂದ ತಯಾರಿಸಿದ ಜಲವರ್ಣದ ಚಿತ್ರಗಳು. ಕಾರ್ಕಳ ಹಾಗೂ ಬಜಗೋಳಿಯ ಚಿತ್ರಗಳ ರಚನೆಯ ನಂತರ ಅವುಗಳ ಮೇಲೆ ವಾರ್ನಿಶ್ ಇತ್ಯಾದಿ ಹಾಕಿಲ್ಲ. ಆದುದರಿಂದ ಅವು ಬೆಳಕಿಗೆ ಮಿಂಚುವುದಿಲ್ಲ. ಬಜಗೋಳಿಯ ಚಿತ್ರಗಳು ಮಣ್ಣು ಗೋಡೆಯ ಮೇಲೆ ಇರುವುದರಿಂದ ನೀರು ಬಣ್ಣದ ಒಳಗೆ ಇಳಿದು ಚಿತ್ರ ಮಸುಕಾಗಿ ಕಾಣುತ್ತದೆ. ಹೊರಗೋಡೆಯ ಹಾಗೂ ಕೆಳಗಿನ ಮೂರು ಅಂಕಣಗಳ ಚಿತ್ರಗಳು ತೈಲವರ್ಣದ ರೀತಿಯಲ್ಲಿ ಬರೆದಿರುವುದು ಉಳಿದವಕ್ಕಿಂತ ಸ್ವಲ್ಪ ಮುಂದಿನ ಕಾಲದ್ದು ಇರಬಹುದೆಂಬ ಅನುಮಾನಕ್ಕೆ ಕಾರಣವಾಗುತ್ತದೆ. ಕೆಲವು ಭಾಗವನ್ನು ಈಚೆಗೆ ಯಾರೋ ತಿದ್ದಲು ಪ್ರಯತ್ನಿಸಿದಂತಿದೆ. ಕತ್ತಲಲ್ಲಿ ಇರುವ ಮೂಡಬಿದ್ರೆಯ ಮಠದ ಚಿತ್ರಗಳು ನಸು ಬೆಳಕಿಗೂ ಹೊಳೆಯುದಿರುವುದರಿಂದ ವೀಕ್ಷಣೆಗೆ, ಛಾಯಾಚಿತ್ರಕ್ಕೆ ಅನುಕೂಲವಾಗಿಲ್ಲ. ಕಾರಣ ಅವುಗಳಿಗೆ

ಆಧುನಿಕ ರೀತಿಯಲ್ಲಿ ವಾರ್ನಿಶ್ ಹಾಕಿರುವುದೇ ಆಗಿದೆ. ಚರ್ಚ್‌ನಲ್ಲಿರುವ ಚಿತ್ರಗಳು-ಶೈಲಿ, ಸಂಯೋಜನೆ, ಚಿತ್ರಿತವಸ್ತುಗಳೊಂದಿಗೆ ಅಲ್ಲಿಂದಲೇ ಆಮದಾದ ತೈಲವರ್ಣದಲ್ಲಿ ರಚಿತವಾಗಿವೆ. ಈ ಸುಮಾರು ತೊಂಬತ್ತು ವರ್ಷಗಳಲ್ಲಿ ತೈಲದ ಮೇಲಿನ ಪಸೆ ಆರಿಹೋಗಿದ್ದು ಬೆಳಕಿಗೆ ಅಷ್ಟಾಗಿ ಹೊಳೆಯುವುದಿಲ್ಲ. ಚಿತ್ರವೂ ಮಸುಕಾದಂತೆ ಕಂಡುಬರುತ್ತದೆಯಾದರೂ ವಿದೇಶದ ಉತ್ತಮ ಗುಣಮಟ್ಟದ ವರ್ಣವಾಗಿದ್ದು ಉತ್ತಮ ಸ್ಥಿತಿಯಲ್ಲಿವೆ. ಚರ್ಚ್ ಮೇಲ್ಛಾವಣಿ ಚಿತ್ರರಚನೆಗಾಗಿ ಕಟ್ಟಿದ್ದಲ್ಲವಾದ್ದರಿಂದ ಕ್ಯಾನ್‌ವಾಸ್ ಮೇಲೆ ರಚಿಸಿ ಛಾವಣಿಗೆ ಹಚ್ಚಿಸಿದ್ದಾರೆ. ಭೋಜನಾಲಯದಲ್ಲಿ ಹೀಗೆ ಮಾಡದೆ ಗೋಡೆಯಲ್ಲಿ ಚಿತ್ರಿಸಲಾಗಿದೆ. ಎಲ್ಲಾ ಚಿತ್ರಗಳೂ ಯಾವುದೇ **ವಿಧಿ ಕ್ರಿಯೆ**ಗಳಿಗೆ ಸೇರದೇಹೋದರೂ ಧರ್ಮ ಪ್ರಚಾರಕ್ಕೆ, ಚಿತ್ರಗಳ ಮೂಲಕ ಒಂದು ತತ್ವ, ಕಥೆ ಇತ್ಯಾದಿಗಳನ್ನು ಹೇಳುವುದಕ್ಕೆ ಬಳಸಿಕೊಳ್ಳಲಾಗಿದೆ. ಕೆಲವು ವರ್ಷಗಳ ಹಿಂದೆ ವಿಶೇಷ ಪೂಜೆಯೊಂದರ ಸಂದರ್ಭದಲ್ಲಿ **ಧವಳ ಗ್ರಂಥ**ವನ್ನು ಪ್ರದರ್ಶಿಸುವ ಮೂಲಕ **ಆಚರಣೆ** ಒಂದಕ್ಕೆ ಚಿತ್ರಕಲೆಯನ್ನೂ ಸಂಬಂಧಿಸುವ ಏರ್ಪಾಡು ಇತ್ತು. ಈಗ ಈ ಗ್ರಂಥಗಳ ವೀಕ್ಷಣೆಯೂ ದುರ್ಲಭವಾಗಿದೆ. ಕಾರ್ಕಳದ ಮಠದ ಚಿತ್ರಗಳು ಎಷ್ಟೇ ನಾಶವಾಗಿದ್ದರೂ ಉಳಿಸಿಕೊಂಡು ಬಂದಿರುವುದು ಮೆಚ್ಚಬೇಕಾದ ವಿಚಾರ. ಅಲಾಯಸಿಸ್ ಚರ್ಚ್ ಚಿತ್ರಗಳ ಬಗ್ಗೆಯೇ ಒಂದು ಸಣ್ಣ ಕೈಪಿಡಿ ತಂದಿದ್ದು ಅವುಗಳಲ್ಲಿ ಚಿತ್ರಿತ ಸಂತರುಗಳ **ಪುಣ್ಯ-ಜಯಂತಿಯ** ದಿವಸಗಳನ್ನು ಉಲ್ಲೇಖಿಸಿದೆ. ಅಂದು ಆ ಸಂಯೋಜನೆಯನ್ನು ವಿಶೇಷವಾಗಿ ಗಮನಿಸುವ ಅಥವಾ ಚಿತ್ರಿತ ವ್ಯಕ್ತಿಯನ್ನು ಧ್ಯಾನಿಸುವ ಉದ್ದೇಶವಿರಬಹುದು. ಗರಡಿಗಳಲ್ಲಿ ಇರುವ ಚಿತ್ರಗಳು, ಯಕ್ಷಗಾನದವು, ಈಚಿನದಾದರೂ ಅವುಗಳು ಒಂದು ಸಾಂಸ್ಕೃತಿಕ ಪರಂಪರೆಯ ಮಧ್ಯದಲ್ಲಿರುವುದರಿಂದ ಅವುಗಳನ್ನು ಗುರುತಿಸಿ ಉಳಿಸಬೇಕಾದ, ವಿವರವಾಗಿ ಪ್ರಕಟಿಸಬೇಕಾದ ಅವಶ್ಯಕತೆಯಿದೆ.

# ಒಂದು ಆರಾಧನಾ ವಿಶೇಷ : ವಿಷ್ಣುಮೂರ್ತಿ ದೈವ

-ಕೆ.ಎಂ. ರಾಘವ ನಂಬಿಯಾರ್

ವಿಷ್ಣುಮೂರ್ತಿ ಮಲಬಾರಿನಲ್ಲೂ, ತುಳುನಾಡಿನಲ್ಲೂ ಪ್ರಸಿದ್ಧವಾಗಿರುವ **ತೆಯ್ಯಂ** ಆರಾಧನೆ. ಮಲಬಾರಿನ ಆರಾಧನಾ ಕಲೆಯಾಗಿರುವ 'ತೆಯ್ಯಂ' ತುಳುನಾಡಿನ 'ಭೂತ'ಕ್ಕೆ ಸಂವಾದಿಯಾದುದು. 'ವಿಷ್ಣುಮೂರ್ತಿ' ಮಲಬಾರಿನ ದೈವವಾದರೂ, ಅದರ **ತೋತ್ತಂ** ಹಾಡಿನಲ್ಲಿ ಸೂಚಿತವಾಗುವಂತೆ, ಅದು ಮೂಲತಹ ಮಂಗಳೂರಿನಲ್ಲಿ ಉದ್ಭವಿಸಿದ ದೈವ. ವಿಷ್ಣುವಿನ **ಉಗ್ರನರಸಿಂಹ**ನ ರೂಪವೇ **ವಿಷ್ಣುಮೂರ್ತಿ.** ಕೇರಳದ ನೀಲೇಶ್ವರದ ಬಳಿಯ **ಕೋಟ್ಟಪ್ಪುರಂ** ಎಂಬಲ್ಲಿನ ಬಿಲ್ಲವ (ತೀಯ) ಜಾತಿಯ ಕಣ್ಣನ್ ಎಂಬವನು ಮಂಗಳೂರಿಗೆ ಬಂದು ನೆಲೆಸಿ, ಇಲ್ಲಿಂದ ತನ್ನ ಹುಟ್ಟೂರಿಗೆ ಮರಳಿದಾಗ ತನ್ನೊಂದಿಗೆ ಈ ದೈವವನ್ನು ಅಲ್ಲಿಗೆ ಒಯ್ದಿದ್ದ. ಆತನ ಕೊಲೆಯಾದಾಗ **ದೈವ** ತನ್ನ ಮಹಿಮೆಯನ್ನು ತೋರಿಸಿ, ಆ ಊರಲ್ಲಿ ತನಗೆ ಮೊದಲ **ಸ್ಥಾನ**ವನ್ನು ಪಡೆದುಕೊಂಡಿತು. ಅನಂತರ 'ಕೋಲತ್ತ್‌ನಾಡಿ'ನ ದೊರೆ (ಕೋಲತ್ತಿರಿ)ಗೆ ತನ್ನ ಮಹಿಮೆ ತೋರಿಸಿ **ಕೋಲತ್ತಿರಿ ಕೋಟೆ**ಯಲ್ಲಿ ದೈವ ನೆಲೆಸಿತು. ಆ ಬಳಿಕ 'ವಿಷ್ಣುಮೂರ್ತಿ'ಯ ಸ್ಥಾನಗಳು ಮಲಬಾರಿನ ಹಾಗೂ ದಕ್ಷಿಣ ಕನ್ನಡದಲ್ಲಿ ವಿಶೇಷ ಎನ್ನುವಂತೆ ಹರಡಿತು. ಈ ದೈವ ಮಂಗಳೂರಿ ನಿಂದ ಉತ್ತರಕ್ಕೆ ಹಬ್ಬಿಲ್ಲ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳ ಕೊಲ್ಲಪದವು, ಸುಳ್ಯಪದವು, ಕುಳ, ಬೆರಿ ಪದವು, ಗೂವೆತಪಡ್ಪು, ಮುಂಡಿತಡ್ಕ, ಬೇಳ, ಆರ್ಯಾಪು, ಸುಬ್ರಹ್ಮಣ್ಯ, ಎಡನೀರು, ಮಾನ್ಯ, ಮಾಯಿಪ್ಪಾಡಿ, ಕನ್ಯಾನ, ಕುಕ್ಕುಜಡ್ಕ, ಅಡೂರು, ಕೂಡ್ಲು, ಅನಂತಪುರ ಮೊದ ಲಾದವು **ವಿಷ್ಣುಮೂರ್ತಿ** ಆರಾಧನೆಯ ಮುಖ್ಯ ಕೇಂದ್ರಗಳು.

ಈ ದೈವವನ್ನು 'ಮಲಯನ್' ಜಾತಿಯ ಮಲಯಾಳಿಗಳು **ಕಟ್ಟಿಆಡುತ್ತಾರೆ.** ದೈವದ **ನುಡಿ** ಕೊಡುವುದು ಮಲಯಾಳ ಭಾಷೆಯಲ್ಲೇ. ಈ ದೈವಕ್ಕೆ 'ತೀಯ' (ಬಿಲ್ಲವ) ಜಾತಿಯ ಜನರು ಬಲು ಆಪ್ತರು. ಮಂಗಳೂರು ಕಡೆಯ ಬಿಲ್ಲವರ ಆರಾಧನಾ ಸಂಪ್ರದಾಯ ಕೇರಳಕ್ಕೆ ವಲಸೆ ಹೋಗಿರಬೇಕೆಂಬ ಅಂಶ ಈ ದೈವದ ಚರಿತ್ರೆಯಿಂದ ತರ್ಕಿಸಬರುತ್ತದೆ.

'ವಿಷ್ಣುಮೂರ್ತಿ' ತೆಯ್ಯಂ ಅನ್ನು ಎರಡು ರೂಪಗಳಲ್ಲಿ ಆರಾಧಿಸುತ್ತಾರೆ, ಒಂದು **ಬಯಲಕೋಲ** (ಮಲಯಾಳದಲ್ಲಿ **ವಯಲ್‌ಕೋಲಂ**). ಇನ್ನೊಂದು **ಒತ್ತೆಕೋಲ** (ಒತ್ತೆಕೋಲಂ). ಮೊದಲನೆಯದು ದೈವದ ಸ್ಥಾನದಲ್ಲಿ (ಗುಡಿಯ ಮುಂದೆ) ಅಥವಾ ಆರಾಧಕರ ಕೃಷಿ ಭೂಮಿಯ **ಬಯಲಿ**ನಲ್ಲಿ ನಡೆಯುವಂಥದು. ಒತ್ತೆಕೋಲವನ್ನು **ತೀಕ್ಕೋಲಂ** (ಬೆಂಕಿಯ ಕೋಲ) ಎಂದೂ ಕರೆಯುವರು. ದೈವವು ಕೆಂಡದ ರಾಶಿ ಯನ್ನೇರಿ, ಅದರಲ್ಲಿ ಹೊರಳಾಡಿ, ತನ್ನ ಮಹಿಮೆಯನ್ನು ಒತ್ತೆಕೋಲವು ತೋರುವುದು.

'ಬಯಲುಕೋಲ' ನಡೆದರೆ ದೈವಕ್ಕೆ ಪೂರ್ಣತೃಪ್ತಿ ಇಲ್ಲ. ದೈವಕ್ಕೆ ಸಂತೃಪ್ತಿ 'ಒತ್ತೆಕೋಲ' ದಲ್ಲೆ. ಇದಕ್ಕೆ ಖರ್ಚು ಹೆಚ್ಚು. ಹಾಗಾಗಿ ಅರಾಧಕರು ಇದನ್ನು ಸಾಧ್ಯವಾದಷ್ಟು ಮಟ್ಟಿಗೆ ಹಿಂದಕ್ಕೆ ಹಾಕುವುದಿದೆ. 'ಬಯಲಕೋಲ' ಆಗುವಾಗಲೆಲ್ಲ ದೈವವು 'ಸ್ಥಾನ'ದ ಮುಖ್ಯಸ್ಥರಲ್ಲಿ ಕೇಳುವುದಿದೆ: ''ವಿಷ್ಣುಮೂರ್ತಿ ಇನ್ನೂ ಚಳಿಯಲ್ಲಿ ನಡುಗುತ್ತಿದ್ದಾನಲ್ಲ. ಇವನ ಚಳಿ ಬಿಡಿಸುವುದು ಯಾವಾಗ?" ಎಂದು.'ಬಯಲು ಕೋಲ' ವರ್ಷವೂ ನಡೆಯುವು ದಾದರೆ' ಒತ್ತೆಕೋಲ' ಹಲವು ವರ್ಷಗಳಿಗೊಮ್ಮೆ ಗಡುವಾಗಿ ನಡೆಸುವುದು ಇದೆ.

'ಬಯಲುಕೋಲ' ಒಂದು ಮುಸ್ಸಂಜೆಯಿಂದ ಮರುದಿನ ಮಧ್ಯಾಹ್ನದವರೆಗೆ ಸಾಗುವ ಕೋಲವಾದರೆ 'ಒತ್ತೆಕೋಲ' ಮುಸ್ಸಂಜೆಯಿಂದ ಮುಂಜಾನೆವರೆಗೆ ನಡೆಯುವಂಥದು.

ಒಂದು ಆರಾಧನಾ ರಂಗಕಲೆಯಾಗಿ 'ತೆಯ್ಯಂ' ಅನ್ನು ಸ್ವೀಕರಿಸಿದರೆ, 'ವಿಷ್ಣುಮೂರ್ತಿ' ದೈವವನ್ನು ಚಿತ್ರಿಸಿದ ರೀತಿಗೆ ಬೆರಗಾಗುತ್ತೇವೆ. ಪಾತ್ರದ ಗುಣಸ್ವಭಾವಗಳನ್ನು ಮುಖ ವರ್ಣಿಕೆಯಲ್ಲಿ ಉಡುಗೆತೊಡುಗೆಗಳಲ್ಲಿ ಸಾಂಕೇತಿಸುವ ವೈಶಿಷ್ಟ್ಯ **ಯಕ್ಷಗಾನ ಬಯಲಾಟ** ದಲ್ಲಿ ಕಾಣಸಿಕ್ಕಿದರೆ, ದೈವದ ಕತೆಯನ್ನೂ ಬಿಂಬರಚನೆಯೊಳಗೆ ಅಳವಡಿಸುವ ಜಾಣ್ಮೆ **ತೆಯ್ಯಂ**ನಲ್ಲಿದೆ. ''ಕಂಬದಲ್ಲೂ ನಿನ್ನ ದೇವನಿದ್ದಾನೋ" ಎಂಬ ಹಿರಣ್ಯಕಶೀಪುವಿನ ಪ್ರಶ್ನೆಗೆ ಮಗ ಪ್ರಹ್ಲಾದ ''ಇದ್ದಾನೆ" ಎಂದು ಹೇಳಿದೊಡನೆ ಕಂಬಕ್ಕೆ ಹಿರಣ್ಯಕಶೀಪು ಗದೆ ಬೀಸಿದಾಗ, ಕಂಬದಿಂದ ಎದ್ದು ಬಂದವನು **ನರಸಿಂಹ**. 'ವಿಷ್ಣುಮೂರ್ತಿ' ದೈವದ ಬಿಂಬ ರಚನೆ ಆ ಕತೆಯನ್ನು ಪ್ರತಿನಿಧಿಸುತ್ತದೆ. ಒಂದು ಮುರಿದ ಟೊಳ್ಳು ಕಂಬದಿಂದ ಒಬ್ಬನು ತಲೆ ಮತ್ತು ಕೈಗಳನ್ನು ಹೊರಚಾಚಿದರೆ ಹೇಗಿರುತ್ತದೆ, ಹಾಗಿದೆ 'ವಿಷ್ಣುಮೂರ್ತಿ' ದೈವದ ಆಕೃತಿ ಎನ್ನುತ್ತಾರೆ.

'ಬಯಲಕೋಲ'ದಲ್ಲೂ 'ಒತ್ತೆಕೋಲ'ದಲ್ಲೂ ಮೂರು ಅಂಗಗಳಿವೆ. ಒಂದು 'ತುಡಂಗಲ್', ಎರಡನೆಯದು 'ಕುಳಿಚ್ಚೋತ್ತಂ'. ಮೂರನೆಯದು 'ಕೋಲಂ'. ಎರಡೂ 'ಕೋಲ'ದ ವೇಷಭೂಷಣಗಳಲ್ಲಿ ಸ್ಪಷ್ಟವಾದ ವ್ಯತ್ಯಾಸ ಇದೆ.

**ರಂಗ :** ಬಯಲಾಟದಂತೆ ನಾಲ್ಕು ಕಂಬಗಳ 'ರಂಗಸ್ಥಳ' ತೆಯ್ಯಂ ಹಾಗೂ ಭೂತಾರಾಧನೆ ಗಿಲ್ಲ. ವೃತ್ತಾಕಾರ ಅಥವಾ ಅಂಡಾಕೃತಿಯಲ್ಲಿ ಸೇರಿನಿಲ್ಲುವ ಅಥವಾ ಕುಳಿತಿರುವ ಸಭೆಯ ಆವರಣವೆ 'ತೆಯ್ಯಂ'ನ ರಂಗಸ್ಥಳ. ಆ ಆವರಣದ ಉದ್ದಗಲಗಳಲ್ಲಿ ಓಡಾಡುತ್ತ ಅಭಿ ನಯಿಸುವ 'ತೆಯ್ಯಂ' ಜನರು ಇದ್ದಲ್ಲಿಗೇ ಹೋಗಿ ಅಭಯ ನೀಡುತ್ತದೆ. ಆರಾಧನಾ ಕಲೆ ಇದಾಗಿರುವುದರಿಂದ ಎಲ್ಲರ ಗಮನ ಶ್ರದ್ಧಾಭಕ್ತಿಗಳಿಂದ ದೈವದ ಮೇಲೆ ಕೇಂದ್ರೀಕೃತ ಆಗಿ ರುವುದರಿಂದ ಪಾತ್ರವನ್ನು ಇತರ ಪ್ರೇಕ್ಷಕರೊಂದಿಗೆ ಹೋಲಿಸಿ ನೋಡುವ ಪ್ರಮೇಯ ಇಲ್ಲ. ಆರಾಧನಾ ಸ್ಥಳದಲ್ಲಿ ಕಲ್ಲಿನಿಂದ ಕಟ್ಟಿದ ಕಟ್ಟೆ (ವೇದಿಕೆ)ಯೊಂದಿರುತ್ತದೆ. ಇದನ್ನು ಮೂರು ಬದಿ ಹಾಗೂ ಮೇಲುಗಡೆ ತೆಂಗಿನ ಸೋಗೆಯಿಂದ ಮುಚ್ಚಿ ತಳಿರುತೋರಣಗಳಿಂದ ಸಿಂಗರಿಸುತ್ತಾರೆ. ಇದಕ್ಕೆ 'ಕುಡಿಯಾತ್ತಂ' ಎಂದು ಹೆಸರು. ಇದೇ ಈ ಆರಾಧನಾ

ಸ್ಥಳದ ಗರ್ಭಗುಡಿ. ಇದರಲ್ಲಿ ದೈವದ ಖಡ್ಗ, ಬಿಲ್ಲುಬಾಣ, ಚೌರಿ (ಚಾಮರ) ಹಾಗೂ ದೈವದ ಕಂಚಿನ ಮುಖವಾಡ ಇವುಗಳನ್ನು ಇರಿಸುತ್ತಾರೆ. ಗುಡಿಯಲ್ಲೂ ಇವುಗಳಿಗೇ ಆರತಿ ಮತ್ತು ಪೂಜೆ.

**ತುಡಂಗಲ್ :** 'ತುಡಂಗಲ್' ಎಂದರೆ ಮಲಯಾಳದಲ್ಲಿ 'ತೊಡಗುವುದು' ಎಂದರ್ಥ. 'ಕುಡಿಯಾತ್ತಂ'ನ ಮುಂದೆ ದೈವದ ಪಾತ್ರ ಧರಿಸಲಿರುವ ಮಲಯನ್ (ಪಾತ್ರಿಯು) ಪ್ರಾರ್ಥನೆ ಸಲ್ಲಿಸಿ ದೈವದ ಸ್ತೋತ್ರವನ್ನು ತನ್ನಲ್ಲಿ ಆವಾಹಿಸಿಕೊಳ್ಳಲು ಹಾಗೂ ಆ ಬಗೆಯ ನಡತೆಯನ್ನು ನೀಡಲು ತನ್ನ ಮನಸ್ಸನ್ನು ಹದಕ್ಕೆ ತರುವುದು ಈ ವಿಧಿಯ ಮುಖ್ಯ ತಾತ್ಪರ್ಯ. 'ತೆಯ್ಯಂ' ಕಲಾವಿದ ಸೊಂಟಕ್ಕೆ ಕೆಂಪುಬಟ್ಟೆಯೊಂದನ್ನು ಸುತ್ತಿಕೊಳ್ಳು ವುದೇ ಇಲ್ಲಿನ ವೇಷವಿಶೇಷ. 'ಬಯಲುಕೋಲ'ಕ್ಕೂ 'ಒತ್ತೆಕೋಲ'ಕ್ಕೂ ಇದು ಸಮಾನ. 'ಒತ್ತೆಕೋಲ'ದಲ್ಲಿ ಈ ವಿಧಿ ಮುಗಿದ ತತ್‌ಕ್ಷಣ ದೈವದ ಬೆಳ್ಚಪ್ಪಾಡರೊಂದಿಗೆ ರಥದ ಆಕೃತಿಯಲ್ಲಿ ಪೇರಿಸಿದ ಮರದ ಒಟ್ಟಲಿಗೆ 'ಅಗ್ನಿಸ್ಪರ್ಷ' ಮಾಡುವ ವಿಧಿಯು ಮಾತ್ರ ಹೆಚ್ಚುವರಿಯಾಗಿ ಇದೆ.

**ತೋತ್ತಂ :** ಮಲಯನ್ (ಪಾತ್ರಿಯು) ತನ್ನ ತಂಡದವರೊಂದಿಗೆ ಹಾಡುವ ಸ್ತೋತ್ರಕ್ಕೆ ಮಲಯಾಳದಲ್ಲಿ 'ತೋತ್ತಂ' ಎನ್ನುತ್ತಾರೆ. 'ಭೂತಾರಾಧನೆ'ಯಲ್ಲಿ ಇದಕ್ಕೆ 'ಪಾಡ್ದನ' ಎಂದು ಹೆಸರು. ಈ ಹಾಡಿನ ರಚನೆ ಮಲೆಯಾಳದಲ್ಲಿದೆ. ದೈವದ ಮಹಿಮೆಯು ಸ್ತವನ ಹಾಗೂ ಚರಿತ್ರೆ ಇದರಲ್ಲಿದೆ, ತಾಳಾನುಸಾರಿಯಾದ ರಚನೆ ಹಾಗೂ ತಾಳಕ್ಕೆ ಅಳವಡದೆ ಇರುವ ವಚನ ರೂಪದ ರಚನೆಗಳು 'ತೊತ್ತಂ'ನಲ್ಲಿವೆ. 'ತೊತ್ತಂ'ನಲ್ಲಿ ಖಂಡ ನಡೆಯು ಝಂಪೆ ತಾಳ ಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. ಚೆಂಡೆಯನ್ನು ತಾಳವಾದ್ಯವಾಗಿಯೂ, ಅದರ ನಾದವನ್ನು 'ಆಧಾರಶ್ರುತಿ'ಯಾಗಿಯೂ ಬಳಸುತ್ತಾರೆ. **ಪಾತ್ರಧಾರಿ** (ಪಾತ್ರಿಯು) ಕೈಯಲ್ಲಿ 'ಚಕ್ರತಾಳ' (ಎಲತ್ತಾಳಂ) ವನ್ನು ಬಾರಿಸುತ್ತಾನೆ. ಅನಂತರ ಮಿಾಹಕ್ಕೆ ಪಾತ್ರಿಯು ಎಣ್ಣೆ ಸ್ವೀಕರಿಸುತ್ತಾನೆ. 'ತೊತ್ತಂ' ಮೂರು ಕಂತುಗಳಲ್ಲಿ ನಡೆಯುತ್ತದೆ. ಒಂದು- 'ತುಡಂಗಲ್' ನಲ್ಲಿ, ಎರಡು- ಕುಳಿಚ್ಚೋತ್ತಂ' **ಭೂಷಣ** ಕಟ್ಟಿಕೊಳ್ಳುವಾಗ, ಮೂರು- 'ಕೋಲ'ದ **ವೇಷ** ಕಟ್ಟಿಕೊಳ್ಳುವಾಗ.

**ಕುಳಿಚ್ಚೋತ್ತಂ :** 'ಕುಳಿಚ್ಚೋತ್ತಂ' ಎಂದರೆ 'ಕುಳಿಚ್ಚು'(ಮಿಂದು) 'ತೋತ್ತಂ' (ಸ್ತುತಿ) ಎಂದರ್ಥ. ಮಹಾವಿಷ್ಣುವಿನ ಸೌಮ್ಯರೂಪದ ವೇಷಧಾರಣೆ ಮಾಡಿ ನರಸಿಂಹಾವತಾರದ ವರೆಗಿನ ನಾಲ್ಕು ಅವತಾರಗಳ ಸಾಂಕೇತಿಕ ಸ್ವರೂಪಕವನ್ನು ಇಲ್ಲಿ ಕಾಣಬಹುದು. ಕುಣಿತ ಹಾಗೂ ಓಡಾಟಗಳಲ್ಲಿ ಇವುಗಳ ಒಂದು ಸಂಕುಚಿತ ಪ್ರದರ್ಶನದ ಆರಾಧನೆಯು ಈ ಭಾಗ ದಲ್ಲಿದೆ. 'ಕುಳಿಚ್ಚೋತ್ತಂ' ಪಾತ್ರದ ಬಿಂಬರಚನೆಗೆ 'ಕಥಕಳಿ'ಯ ಕಿರೀಟದ ವೇಷದ ಹೋಲಿಕೆ ಇದೆ. ಮಲಯನ್ ಪಾತ್ರಿಗಳು (ಕಲಾವಿದರು) 'ತೆಯ್ಯಂ' ಅನ್ನು 'ಅರೆ ಕಥಕಳಿ' ಆಗಿ ಪರಿಗಣಿಸುತ್ತಾರೆ. ಇದೇ 'ಕಥಕಳಿ ಕಲೆ'ಗೆ ಮೂಲವಾಗಿರಬಹುದು.

'ಕುಳಿಚ್ಚೋತ್ತಂ' ವೇಷಕ್ಕೆ ಮುಖವರ್ಣಿಕೆ ಇಲ್ಲ. ಮುಖಕ್ಕೆ 'ಅರದಾಳ'ವನ್ನು ತೆಳ್ಳಗೆ

ಹಚ್ಚುತ್ತಾರೆ. ಇದಕ್ಕೆ 'ಎಳವರ್ಣಂ' (ಎಳೆಬಣ್ಣ) ಎಂಬ ಹೆಸರು. ಅರದಾಳದ ಕಡಂ ಲೇಪದ ಒಂದು ತಿಲಕವನ್ನು ಹಣೆಗಿಟ್ಟುಕೊಂಡರೆ ಮುಖದ ಪ್ರಸಾಧನ ಮುಗಿಯಿತು. ಕಣ್ಣು, ಹುಬ್ಬುಗಳನ್ನು ತೀಡುವುದಾಗಲಿ, ತುಟಿ, ಮೀಸೆ, ಗಡ್ಡ ಬರೆಯುವುದಾಗಲಿ ಇಲ್ಲ.

'ಕುಳಿಚ್ಚೋತ್ತಂ' ವೇಷದಲ್ಲಿ ಕಾಣಿಸಿಕೊಳ್ಳುವ ಭೂಷಣಗಳನ್ನು ಮೇಲಿನಿಂದ ಕೆಳಕ್ಕೆ ಹೀಗೆ ಗುರುತಿಸಬಹುದು. ತಲೆಗೆ 'ಕಥಕಳಿ' ಹೋಲಿಕೆಯ ಬಟ್ಟಲಾಕೃತಿಯ ಕಿರೀಟ. 'ತೆಂಕು ತಿಟ್ಟಿ'ನ ಯಕ್ಷಗಾನದಲ್ಲಿ ಧರ್ಮರಾಜನಿಗೆ ಇಂಥದೇ ಕಿರೀಟ ಬಳಕೆಯಾಗುತ್ತದೆ. ಕಿರೀಟ ಕಿಸ್ಗಾರ ಹೂವಿನ ಚೆಂಡಿನಮೇಲೆ ಕುಳ್ಳಿರುತ್ತದೆ. ಅದರ ಕೆಳಗೆ ಹಣೆಗೆ 'ತಲಪ್ಪಾಳಿ' ('ಭೂತದ ತಲೆಮಣಿ'. ಬೆಳ್ಳಿಯ ಜಾಲರಿಯ ತುಣುಕುಗಳನ್ನು ಕೆಂಪು ಬಟ್ಟೆಯ ಪಟ್ಟಿಗೆ ಹೊಲಿದು ತಯಾರಿಸುವ 'ತಲಪ್ಪಾಳಿ'ಯಲ್ಲಿ 21 ಗುರುಗಳ ಸಂಕೇತವಾಗಿ 21 ಎಸೆಳುಗಳಿರುತ್ತವೆ. ತಲೆಯ ಹಿಂದುಗಡೆ 'ವಂಜಿ' (ಕೆಂಗೂದಲು) ಹೊಳೆ ಬದಿಯಲ್ಲಿ ಸಿಗುವ 'ವಂಜಿ' ಸಸ್ಯವನ್ನು ಕೊಳೆಯಿಸಿ ಜಜ್ಜಿ ತೆಗೆದ ನಾರಿಗೆ ಕೆಂಬಣ್ಣ ಹಚ್ಚಿ ಈ ಕೂದಲ ಮೆದೆಯನ್ನು ಕಟ್ಟುತ್ತಾರೆ. ಈಚೆಗೆ 'ವಂಜಿ' ನಾರಿನ ಜಾಗದಲ್ಲಿ 'ಪಾಲಿತಿನ್' ಎಳೆಗಳನ್ನು ಬಳಸುತ್ತಿದ್ದಾರೆ. ಮೊದಲು ತಲೆಗೆ ಕೆಂಪು ಬಟ್ಟೆಯ ತುಣುಕೊಂದನ್ನು ಬೆನ್ನಿಗೆ ಇಳಿಬಿಟ್ಟು ಅದರ ಮೇಲೆ 'ವಂಜಿಯನ್ನು' ತಲೆಯಿಂದ ಇಳಿಬಿಡುತ್ತಾರೆ. ಕಿವಿಗೆ ತೆಂಕು ತಿಟ್ಟಿನ ಯಕ್ಷಗಾನದಲ್ಲಿರುವ 'ಕರ್ಣಪತ್ರ'ದ ಹೋಲಿಕೆಯ 'ಕುಟ್ಟಿಕಾದ್' (ಕಿರು ಓಲೆ), ಕೊರಳಿಗೆ ಅರ್ಧಚಂದ್ರಾಕೃತಿಯ ಮರದ ಆಭರಣ. ಇದಕ್ಕೆ ಶೀಸಗಾಜು ಮತ್ತು ಸುಸೇರಿ ಬೇಗಡೆ ಚಿನ್ನದ ಬೆಡಗನ್ನು ತಂದುಕೊಡುತ್ತವೆ. ಇದಕ್ಕೆ 'ಕೊರಳಕಟ್ಟು' ಎಂದು ಹೆಸರು. ಇದರ ಕೆಳಗೆ 'ಕೊರಳಾರಂ' (ಕಥಕಳಿ ಅಥವಾ ಯಕ್ಷಗಾನದ 'ಎದೆ ಪದಕ' ದಂಥ ಮರದ ಆಭರಣ. ಅವುಗಳ ಮೇಲೆ ಮರದ ಗುಂಡುಮಣಿಗಳ ಮಾಲೆ.

'ಕುಳಿಚ್ಚೋತ್ತಂ' ವೇಷದ ಮೈಗೆ ದಗಲೆ ಇಲ್ಲ. ಆದರೆ ತೋಳುಗಳಿಗೆ ಕೆಂಪು ಬಟ್ಟೆಯ 'ಕೈಯಾರ' (ಕೈಹೊದಿಕೆ-Sleeve) ಗಳಿವೆ. ಭುಜಕ್ಕೆ 'ಕುಂಜಿಮರಿ' (ಕಥಕಳಿಯ ಭುಜ ಕೀರ್ತಿಯ ಹೋಲಿಕೆಯದು), ಅದರ ಕೆಳಗೆ ಮರದ ತೋಳಬಳೆ ಹಾಗೂ ಕಿಸ್ಗಾರದ ಹೂವಿನ ಚೆಂಡು. ಕೈಗೆ ಮರದ ಬಳೆ ಹಾಗೂ 'ಕೈಕಟ್ಟ್' (ಕುಸುರಿ ಕೆತ್ತನೆಯ ಮರದ ಆಭರಣ-ಯಕ್ಷಗಾನದಲ್ಲಿ ಇರುವಂಥದು). 'ಕೈಕಟ್ಟ್'ನ ಜಾಗದಲ್ಲಿ ಕಂಚಿನ 'ಚೂಡಂ' ಎನ್ನುವ ಆಭರಣ ಕಟ್ಟಿಕೊಳ್ಳುವುದೂ ಇದೆ. ಕಿಸ್ಗಾರದ ಹೂವಿನ ಚೆಂಡು ಕೈಯ ಅಲಂಕಾರಕ್ಕೂ ಇದೆ.

ಕಿಸ್ಗಾರ ಹೂವಿನ ಚೆಂಡುಗಳು 'ತೆಯ್ಯಂ' ವೇಷಧಾರಣೆಯಲ್ಲಿ ಬಲು ಮುಖ್ಯವಸ್ತು. ಅದಿಲ್ಲದೆ 'ತೆಯ್ಯಂ' ಕಟ್ಟಬಾರದೆಂಬ ವಿಧಿಯೂ ಇದೆ. ಹಾಗಾಗಿ ಕಿಸ್ಗಾರದ ಹೂವು ಸಿಗದ ಜಾಗಕ್ಕೆ ಹೋಗುವಾಗ ಶಾಸ್ತ್ರಕ್ಕಾದರೂ ಬೇಕೆಂದು ಕಲಾವಿದರು ಎಲ್ಲಿಂದಾದರೂ ಒಂದಿಷ್ಟು ಹೂವನ್ನು ಸಂಗ್ರಹಿಸುತ್ತಾರೆ. ಕಿಸ್ಗಾರ ಸಿಕ್ಕದ ವೇಳೆಗೆಂದು ಅದೇ ಕೆಂಬಣ್ಣದ ಹೋಲಿಕೆಯ 'ವುಲನ್' ಚೆಂಡನ್ನು ಪಾತ್ರಿಗಳು (ಕಲಾವಿದರು) ವೇಷಾಲಂಕಾರದಲ್ಲಿ ಬಳಸತೊಡಗಿದ್ದಾರೆ.

'ಕುಳಿಚ್ಚೋತ್ತಂ' ವೇಷದ ಬಲಗೈ ಬೆರಳುಗಳಿಗೆ ಲೋಹದ (ಕಬ್ಬಿಣದ) ಉಗುರುಗಳನ್ನು ಕುಳ್ಳಿರಿಸುತ್ತಾರೆ.

ಕಟಿಯ ಭಾಗದಲ್ಲಿ 'ಕುಳಿಚ್ಚೋತ್ತಂ' ವೇಷ ಕಥಕಳಿಯಂತೆ ಕಾಣಿಸುತ್ತದೆ. ಮಡಿಬಟ್ಟೆಯ ಮಡಿಕೆಗಳಿಂದ ಉಬ್ಬಿಸಿ ಕಟ್ಟಿಕೊಂಡ ಅಂಡಿನಮೇಲೆ ಸೊಂಟಕ್ಕೆ ಕೆಂಪು ಬಟ್ಟೆಯ 'ಕಾಣಿ' ಯನ್ನು ಸುತ್ತುತ್ತಾರೆ. 'ಕಾಣಿ'ಯ ಕೆಳಅಂಚು ಮೊಣಕಾಲ ಅರ್ಧದವರೆಗೆ ಚಾಚಿಕೊಳ್ಳುತ್ತದೆ. ಅಂಚಿನಲ್ಲಿ ಸುಮಾರು ಒಂದೂವರೆ ಅಡಿ ಅಗಲದ ಬಿಳಿ ಕಪ್ಪುರೇಖೆಗಳ ವಿನ್ಯಾಸಗಳಿವೆ. ವಿನ್ಯಾಸ, ಹೊಲಿದು ಮಾಡಿರುವಂಥದು. ಅದರ ಮೇಲೆ ಸೊಂಟಕ್ಕೆ ಬಿಳಿ ಬಟ್ಟೆಯ 'ಚೊರ' (ದಟ್ಟಿ). ಹಿಂದುಗಡೆ ದಟ್ಟಿಯಮೇಲೆ ಅರಕ್ಕೆಟ್ಟ್ (ಜಾಲರಿಡಾಬು). ಮುಂದುಗಡೆ ಯಕ್ಷಗಾನದ 'ವೀರಕಸೆ' ಹೋಲಿಕೆಯ 'ಕೋಣೊಪ್ಪಾಳಿ' ಸೊಂಟದ ಇಕ್ಕೆಲಗಳಲ್ಲಿ 'ಮಫ್ಲರ್' ಹೋಲಿಕೆಯ ಮಿರುಗುವ ಕೆಂಬಣ್ಣದ ಬಟ್ಟೆಯಿಂದ ಮಾಡಿದ 'ಮುನ್ನಾಕ್ಕ್' ಕಾಲಿಗೆ ಯಾವ ಆಭರಣವೂ ಇಲ್ಲ. 'ಕುಳಿಚ್ಚೋತ್ತಂ' ಒಂದು ಬರಿಗಾಲ ವೇಷ.

**ಕೋಲಂ:** 'ಕುಳಿಚ್ಚೋತ್ತಂ' ಪಾತ್ರಾಭಿನಯ ಮುಗಿದು ಸುಮಾರು ಎರಡುಮೂರು ತಾಸುಗಳ ಬಿಡುವಿನ ಬಳಿಕ ನಿಜ 'ಕೋಲ'ದ ವೇಷಧಾರಣೆ ಆರಂಭವಾಗುತ್ತದೆ. 'ವಿಷ್ಣುಮೂರ್ತಿ' ದೈವದ ಮುಖವರ್ಣಿಕೆಯಲ್ಲಿ ಬಯಲ ಕೋಲ'ಕ್ಕೂ 'ಒತ್ತೆ ಕೋಲ'ಕ್ಕೂ ವಿನ್ಯಾಸದಲ್ಲಿ ವ್ಯತ್ಯಾಸ ಇದೆ.

**ಮುಖವರ್ಣಿಕೆ:** 'ಬಯಲು ಕೋಲ'ದ ಮುಖವರ್ಣಿಕೆಗೆ 'ಚುಂಡ್‌ವೆಚ್ಚೆಳುತ್ತ್', 'ವಾರಿವೆಚ್ಚೆಳುತ್ತ್', 'ಕೋಯಪುಷ್ಪಂ' ಎಂದೆಲ್ಲ ಹೆಸರು. ಇಲ್ಲಿ ಬುನಾದಿ ಲೇಪಕ್ಕೆ 'ಅರದಾಳ' ಬಳಸುತ್ತಾರೆ. ಮಲೆಯಾಳದಲ್ಲಿ ಅದಕ್ಕೆ 'ಮನಯೋಲ' ಎಂದು ಹೆಸರು. ಅದು ಎರಡು 'ವರ್ಣಚ್ಛಾಯೆ'ಗಳಲ್ಲಿದೆ. ಒಂದು ಕಡುಹಳದಿ. ಇನ್ನೊಂದು ಕೇಸರಿ (ಕಿತ್ತಳೆ). ತೆಯ್ಯಂ ಪಾತ್ರಿಗಳು ಕಿತ್ತಳೆ ಬಣ್ಣದ 'ಮನಯೋಲ'ವನ್ನೂ ತುಳು 'ಭೂತ'ದ ಪಾತ್ರಿಗಳು ಹಳದಿ 'ಅರದಾಳ'ವನ್ನೂ ಬಳಸುವುದು ಪದ್ಧತಿ. ವಿಷ್ಣುಮೂರ್ತಿ'ಯ ಮುಖ ಸಿಂಹದ್ದಾಗಿರುವ ಕಾರಣ ಇಲ್ಲಿ ಕೇಸರಿ ಬಣ್ಣದ ಬಳಕೆ ಅರ್ಥಪೂರ್ಣ.

ಬುನಾದಿ ಲೇಪವನ್ನು ಪಾತ್ರಧಾರಿಯು ಹಚ್ಚಿಕೊಳ್ಳುತ್ತಾನೆ. ಅರದಾಳವನ್ನ ದಪ್ಪಗೆ ಕಲಸಿ ಹಚ್ಚಲಾಗುತ್ತದೆ. ಕಣ್ಣುಗಳನ್ನು ಕೋಳಿಮೊಟ್ಟೆಯ ಆಕೃತಿಯಲ್ಲಿ ಕಾಡಿಗೆಯಿಂದ ತುಂಬಲಾಗುತ್ತದೆ. 'ತೋತ್ತಂ'ನಲ್ಲಿ ಬರುವ **ಕಾರ್ವರ್ಣ ನೇತ್ರ** ಎಂಬ ವರ್ಣನೆಗೆ ಸರಿಯಾಗಿ ಬುನಾದಿಲೇಪ ಮುಗಿದ ಬಳಿಕ ಆತ ಅಂಗಾತ ಮಲಗುತ್ತಾನೆ. ಮುಖದಲ್ಲಿ ಚಿತ್ರ ಬಿಡಿಸುವ ಕೆಲಸ ಆತನ ಸಹಾಯಕರಿಗೆ. ಹಸಿ ತೆಂಗಿನಗರಿಯ ಕಡ್ಡಿಯನ್ನು ಸೂಜಿ ಮೊನೆಯಾಕಾರಕ್ಕೆ ಕೊಯ್ದು ಅದನ್ನು ಕೆಂಪು ಬಣ್ಣದಲ್ಲಿ ಅದ್ದಿ ಚಿತ್ರ ಬಿಡಿಸಲಾಗುತ್ತದೆ. ಕಾಡಿಗೆಯ ರೇಖೆಗಳೂ, ಬೊಟ್ಟುಗಳೂ ವಿನ್ಯಾಸದಲ್ಲಿ ಇರುತ್ತವೆ. 'ಇಂಗಲೀಕ'ವನ್ನು ತೆಂಗಿನೆಣ್ಣೆಯಲ್ಲಿ ಕಲಸಿ ಕೆಂಬಣ್ಣವನ್ನು ತಯಾರಿಸುತ್ತಾರೆ. ಬಯಲಾಟದ ಕಲಾವಿದರಂತೆ ಮುಖವರ್ಣಿಕೆಯೆಲ್ಲವನ್ನೂ ತಮಗೆ ತಾವೇ ಬರೆದುಕೊಳ್ಳುವ 'ತೆಯ್ಯಂ' ಪಾತ್ರಿಗಳೂ ಇದ್ದಾರೆ.

'ಒತ್ತೆಕೋಲ'ದ ಮುಖವರ್ಣಿಕೆಯಲ್ಲಿ ಬಳಕೆಯಾಗುವ ದ್ರವ್ಯವೆಲ್ಲ ಇವೇ. ಆದರೆ ವಿನ್ಯಾಸಕ್ಕೆ 'ವಟ್ಟೆಳ್‌ತ್ತ್' (ಉರುಟುಬರಹ) ಎಂದು ಹೆಸರು.

**ಕೋಲದ ಆಕೃತಿ :** 'ಬಯಲ ಕೋಲ'ದ ವಿಷ್ಣುಮೂರ್ತಿಯ ಆಕೃತಿಯನ್ನು ಹೀಗೆ ಗುರುತಿಸಬಹುದು. ಹಣೆಯ ಮೇಲೆ ಬೆಳ್ಳಿಯ ಪಟ್ಟಿಯಂಥ 'ವೆಳ್ಳಿಪ್ಪೋಳ' ಅದರ ಮೇಲೆ 'ತಲಪ್ಪಾಳಿ' ಅದರ ಮೇಲೆ ಕಿಸ್ಗಾರದ ಹೂವಿನ ಚೆಂಡು. ಅದರ ಮೇಲೆ ಏಳು ಅಥವಾ ಒಂಭತ್ತು ಹಾವಿನ ಹೆಡೆಯ ಕೆತ್ತನೆಯ ಮರದ ಆಭರಣ 'ಒಡಿಚ್ಚುಕುತ್ತಿ'. ಈ ಸರ್ಪ ಮಾಲಿಕೆಗೆ ಕಿಸ್ಗಾರ ಹೂವಿನ ಸುತ್ತು. ಅದರ ಹಿಂದುಗಡೆ 'ಹರಿವಾಣ'ದಂಥ ವೃತ್ತಾಕಾರದ ಮರದ 'ತಲಮಲ್ಲಿಕ' (ತಲೆಮಲ್ಲಿಗೆ). ಅದರ ಹಿಂದುಗಡೆ ಜುಟ್ಟನ್ನು ಸಂಕೇತಿಸುವ ಮರದ 'ಕೊಪ್ಪಿ'. ತಲೆಯ ಹಿಂದೆ 'ಪಂಜಿ'. 'ಕೊಪ್ಪಿ'ಗೆ ತಾಗಿಕೊಂಡು ತಲೆಗೂದಲನ್ನು ಮೇಲುಗಡೆಯಿಂದ ಮುಚ್ಚಲು 'ಬಾಲ' (ಕನ್ನಡದ ಶಬ್ದವಲ್ಲ) ಎಂಬ ಮರದ ಆಭರಣ. ಅದರ ಜಾಲರಿ ಬಲು ಸುಂದರ. 'ತಲಪ್ಪಾಳಿ'ಯ ಮೇಲಿನ ಕಿಸ್ಗಾರದ ಚೆಂಡಿನಲ್ಲಿ ಬೆಳ್ಳಿಯ ಹೂಗಳನ್ನು ಚುಚ್ಚುತ್ತಾರೆ. ಕಿವಿಯನ್ನು ಮುಚ್ಚಿಕೊಂಡು ಮೇಲುಗಡೆ ತಲೆಮಲ್ಲಿಕದ ಅಂಚುಗಳನ್ನು ಅಂಟಿ ನಿಲ್ಲುವ ಆಭರಣ 'ಲಕ್ಷ್ಮಿಕ್ಕಾದ್'. ಅವುಗಳನ್ನು ಅಲ್ಲಾಡಲು ಬಿಡದಂತೆ ಹಣೆಯ ಇಕ್ಕೆಲಗಳಲ್ಲಿ ಚುಚ್ಚುವಂಥದು ಬೆಳ್ಳಿಯ 'ಚೆನ್ನಿಮಲರ್'. ಕುತ್ತಿಗೆಗೆ ಅರ್ಧಚಂದ್ರಾಕೃತಿಯ ಮರದ ಕಳತ್ತ್‌ಕಟ್ಟ್ ? ಕಿಸ್ಗಾರದ ಚೆಂಡು, ಎದೆಪದಕ, ಮರದ ಗುಂಡುಮಣಿ ಸರಗಳು. ತೋಳಿಗೆ 'ಕೈಯೊರ', 'ಕುಂಜಿಮರಿ'ಯ ಬಳಕೆ 'ಕೋಲ'ದ ಪಾತ್ರದ ಭುಜಗಳಲ್ಲಿಲ್ಲ. ತೋಳಿಗೆ ಮರದ ಬಳೆಗಳು, ಕೆಂಪು ಬಟ್ಟೆಯ ಪಟ್ಟಿಗೆ ಬಿಳಿ ಕವಡೆ, ಕೋದು ತೆಯಾರಿಸಿದ 'ಪಟ್ಟಿ ಪಾಡಂ'. ಕಿಸ್ಗಾರದ ಚೆಂಡು. ಕೈಗೆ ಮರದ ಬಳೆ, ಕಂಚಿನ 'ಚೂಡಂ', ಕಿಸ್ಗಾರದ ಚೆಂಡು ಹಾಗೂ ಮುಷ್ಟಿಯ ಮೇಲುಗಡೆ ತೆಂಗಿನ ಎಳೆಗರಿಯಿಂದ ಕಲಾತ್ಮಕವಾಗಿ ಕತ್ತರಿಸಿ ತಯಾರಿಸಿದ 'ನಖಂ' (ಉಗುರುಗಳ ಹಂತಿ).

ಕಂಕುಳವರೆಗೆ ಚಾಚುವ ತೆಂಗಿನ ಎಳೆಗರಿಯ 'ಅರಬಡ'ವನ್ನು ಸೊಂಟಕ್ಕೆ ಬಿಗಿಯಲಾಗುತ್ತದೆ. 'ಬಕೆಟ್' ಆಕಾರದಲ್ಲಿ ಎಳೆಗರಿಗಳನ್ನು ಹೊಲಿದು ತಯಾರಿಸುವ 'ಅರಬಡ'ದ ಮೇಲು ಭಾಗದಿಂದ ತೆಂಗಿನ ಸೀಳುಗಳು ಜೋತುಬೀಳುವಾಗ ಒಂದು ಕಂಬದ ಆಕೃತಿ ಕಾಣಿಸುತ್ತದೆ. 'ಬಯಲ ಕೋಲ'ದ 'ಅರಬಡ'ದ ಮೇಲುಭಾಗವನ್ನು ಸುಮಾರು ಒಂದು ಅಡಿ ಅಗಲದ ಕೆಂಪು ಬಟ್ಟೆಯಿಂದ ತಯಾರಿಸಿದ 'ವಳಯುನ್' ಎಂಬ ಹೊದಿಕೆಯಿಂದ ಹೊದಿಸಲಾಗುವುದು. 'ವಳಯುನ್'ನಲ್ಲಿ ಸುನೇರಿ ಹಚ್ಚಿದ ಮರದ ಕಡ್ಡಿ ಹಾಗೂ ಗೋಡೆಗಳಿಂದ ಸುಂದರ ಚಿತ್ತಾರವಿದೆ. 'ಅರಬಡ'ದ ಒಳಗಿನಿಂದ ಬಲಹೆಗಲಿನಿಂದಾಗಿ ಒಂದು ಕೆಂಪು ಬಟ್ಟೆಯ ಬಾಲ (ಸಿಂಪದ ಬಾಲ)ವನ್ನು ಅರಬಡದ ಎದುರಿಗೆ ಇಳಿಬಿಡುತ್ತಾರೆ. ಅದರ ತುದಿಯಲ್ಲಿ ತೆಂಗಿನ ಎಳೆಗರಿಯ 'ಕುಚ್ಚು' ಜೋತಾಡುತ್ತದೆ. ಅಭಿನಯದಲ್ಲಿ ಬಾಲದ ಕುಚ್ಚು ಅತಿಅಗತ್ಯ.

ಸೊಂಟಕ್ಕೆ ತೆಂಗಿನ ಎಳೆಗರಿಯ ಸೀಳುಗಳನ್ನು ದಪ್ಪಗೆ ಸುತ್ತಲಾಗುತ್ತದೆ. ಕಾಲಿಗೆ **ಚೆಲಂಬ್** (ಗಗ್ಗರ).

**ಒತ್ತೆಕೋಲದ ಆಕೃತಿ :** 'ಒತ್ತೆ ಕೋಲ'ದ ಬಿಂಬ ರಚನೆಯ ವಿನ್ಯಾಸ 'ಬಯಲ ಕೋಲದ್ದೇ'. ಒಂದು ವ್ಯತ್ಯಾಸ; ಒತ್ತೆ ಕೋಲದ **ಚಮಯಂ** (ಅಲಂಕರಣ) ಸಾಮಗ್ರಿಗಳೆಲ್ಲ ತೆಂಗಿನ ಎಳೆಗರಿ ಮತ್ತು ಹೂದಂಡೆಗಳಿಂದಲೇ ಕೂಡಿರುತ್ತವೆ. ತಲೆಗೆ ಮಾತ್ರ ಒಂದಿಷ್ಟು ಬಟ್ಟೆ ಹಾಗೂ ಮರದ ಅಲಂಕಾರ ವಸ್ತುಗಳಿರುತ್ತವೆ. ಈ ದೈವ ಕೆಂಡದ ರಾಶಿಯಲ್ಲಿ ಉರುಳಲು ಇರುವುದರಿಂದ ಹತ್ತಿಯೆಳೆಯಿರುವ ಸಾಮಗ್ರಿಯ ಬಳಕೆ ಕನಿಷ್ಠ.

ತಲೆಯ ನೀಜಕೂದಲನ್ನು ಮುಚ್ಚಿದ ಕೆಂಪುಬಟ್ಟೆಯಿಂದ ಮೇಲ್ಮುಖವಾಗಿ ಕಿರುಜುಟ್ಟನ್ನು ಕಟ್ಟಲಾಗುತ್ತದೆ. 'ಬಯಲು ಕೋಲ'ದ 'ಕೊಪ್ಪಿ' ಇದುವೆ. ಹಣೆಯ ಮೇಲೆ 'ತಲಪ್ಪಾಳಿ'. ಅದರ ಮೇಲೆ ಕಿಸ್ಗಾರ ಹೂವಿನ ಚೆಂಡು, ಹಿಂದುಗಡೆ ತಲೆಗೆ ಒತ್ತಿಕಟ್ಟಿದ 'ವಂಜಿ'. 'ತಲಪ್ಪಾಳಿ'ಯ ಮೇಲಿನ ಕಿಸ್ಗಾರದ ಚೆಂಡಿನ ಮೇಲೆ ಜುಟ್ಟಿಗೆ ತಾಗಿಕೊಂಡು (ಬಯಲ ಕೋಲವ 'ತಲಮಲ್ಲಿಕ' ಜಾಗದಲ್ಲಿ) ತೆಂಗಿನ ಎಳೆಗರಿಯಿಂದ ಮಾಡಿದ ವೃತ್ತಾಕಾರದ 'ಪಾದರಿಯ', ಕಿವಿಗೆಮರದಿಂದ ಮಾಡಿದ 'ಕುಟ್ಟಿಕ್ಕಾದ್' (ಕರ್ಣಪತ್ರ), ಕೆನ್ನೆಗಳಿಗೆ ಲೋಹದ 'ಚೆನ್ನಿಮಲರ್'.

ಕೊರಳಿಗೆ ಹೂವಿನ ದಂಡೆಗಳು. ತೋಳಿಗೆ, ಕೈಗೆ ಹೂವಿನದೇ 'ಕೈ ತಂಡ', 'ಕೈಕೆಟ್ಟ್'. ಬಯಲು ಕೋಲದಲ್ಲಿ 'ಅರಬಡ' ಪೂರ್ವಸಿದ್ಧವಾದರೆ 'ಒತ್ತೆಕೋಲ'ದಲ್ಲಿ ಸ್ಥಳದಲ್ಲೇ ತಯಾರಾಗುವಂಥದ್ದು. ಬಾಳೆಯ ತೊಗಟೆಯ ಸೀಳಿಗೆ ಸುಮಾರು ಒಂದೂವರೆ ಅಡಿ ಎತ್ತರಕ್ಕೆ 'ಬಕೆಟ್' ಆಕೃತಿಯಲ್ಲಿ ಹೊಲಿದು, 'ಅರಬಡ' ತಯಾರಿಸುತ್ತಾರೆ. ಬಕೆಟ್ ಆಕೃತಿಯ ಮೇಲ್ತುದಿ ಮತ್ತು ಮಧ್ಯಭಾಗದಲ್ಲಿ ತೆಂಗಿನ ಎಳೆಕಡ್ಡಿಗಳ ದಪ್ಪಗಿನ ದಂಡೆಗಳನ್ನು ಹೊಲಿದು 'ಅರಬಡ'ವನ್ನು ಭದ್ರಗೊಳಿಸುತ್ತಾರೆ. ಹೊಲಿಗೆಯ ದಾರ ಕೂಡ ಎಳೆಗರಿಯ ಕಡ್ಡಿಗಳೇ.

'ಬಯಲ ಕೋಲ'ದ 'ಅರಬಡ' ಕಂಕುಳ ಮಟ್ಟಕ್ಕೆ ಇರುವಂಥದ್ದಾದರೆ, 'ಒತ್ತೆಕೋಲ'ದಲ್ಲಿ ಇನ್ನೂ ಮೇಲಕ್ಕೆ, ಮುಖದ ಗದ್ದದ ಮಟ್ಟಕ್ಕೆ ಏರಿ ನಿಲ್ಲುತ್ತದೆ. ತೆಂಗಿನ ಗರಿಯ ಬಾಲ ಬಲಹೆಗಲಿನಿಂದ ಹಾಗೂ ಜನಿವಾರದ ಹೋಲಿಕೆಯ 'ತಂಡವಾಳಿ' ಎಡಹೆಗಲಿಂದ ಹಾದು ಜೋತಾಡುತ್ತವೆ.

'ಒತ್ತೆಕೋಲ' ದೈವಕ್ಕೆ ದಟ್ಟಿ ಬಾಳೆಯ ಸಿಪ್ಪೆಗಳಿಂದಲೇ. ದಟ್ಟಿಯಿಂದ ಇಳಿಬಿಟ್ಟ ಎರಡು ಸೀಳುಗಳನ್ನು ಹಿಡಿದು ದೈವವನ್ನು ಕೆಂಡದ ರಾಶಿಯಿಂದ ಹೊರಗೆಳೆಯಲಾಗುತ್ತದೆ. ಸೊಂಟಕ್ಕೆ ದಪ್ಪಗೆ ತೆಂಗಿನ ಎಳೆಗರಿಯ ಸೀಳುಗಳನ್ನು ಸುತ್ತಲಾಗುತ್ತದೆ.

ಕಾಲಿಗೆ 'ಒತ್ತೆಕೋಲ'ದ ದೈವ ಕಟ್ಟಿಕೊಳ್ಳುವುದು ಗಗ್ಗರವಲ್ಲ, **ಚೆಲಂಗೆ** (ಗೆಜ್ಜೆ).

'ಒತ್ತೆಕೋಲ'ದ ದೈವನ ರೂಪವೇ ಪ್ರಾಕೃತ ಇರಬೇಕು. 'ಬಯಲು ಕೋಲ'ದ ರೂಪ 'ಒತ್ತೆಕೋಲ'ದ ತಿದ್ದಿದ ಆವೃತ್ತಿ.

**ಪಾತ್ರಾಭಿನಯ:** 'ತುಂಡಂಗಲ್'ನಲ್ಲಿ ವಂದಿಸುವುದು, ಕುಳ್ಳಿಚ್ಚೋತ್ತಂ ಹಾಗೂ ಕೋಲ

ನರಸಿಂಹನ ಅತಿಮಾನುಷ ಪಾತ್ರಾಭಿನಯ ಕಾಣಿಸಿಕೊಳ್ಳುತ್ತದೆ. ಪೀಠದಲ್ಲಿ ಕುಳಿತು ಆಭರಣಗಳನ್ನೂ ಇತರ ಭೂಷಣಗಳನ್ನೂ ಕಟ್ಟಿಕೊಳ್ಳುವುದು ಕೂಡ ಇಲ್ಲಿ ಆರಾಧನಾ ವಿಧಿಯ ಅಂಗವೇ ಆಗಿದೆ. **ಚಮಯಂ** ಅಲಂಕರಣ ಮುಗಿದೊಡನೆ **ಕಲಾಶಕ್ಕೊಟ್ಟ್** ಎಂದು ಪರಿಚಿತವಾದ ಚೆಂಡೆಯ ಭೋರ್ಗರೆತ ಕೇಳಿಸುತ್ತದೆ. ಆಗ ಪಾತ್ರಧಾರಿ ಕನ್ನಡಿ ನೋಡಲು ಇದೆ. ಕನ್ನಡಿಯಲ್ಲಿ ತನ್ನ ಮುಖದರ್ಶನವಾದೊಡನೆ 'ವಿಷ್ಣುಮೂರ್ತಿ'ಯ ಆರ್ಭಟ, ಆ ಆವೇಶದೊಂದಿಗೆ 'ಕುಡಿಯಾತ್ತಂ'ನ ಮುಂದೆ ಬಂದು ಆರ್ಭಟ ನೀಡಿ ಪೀಠದ ಮೇಲೆ ಬಾಲದ ಕುಚ್ಚನ್ನು ಇರಿಸಿ ಹಿರಣ್ಯಕಶೀಪುವಿನ ಕರುಳು ಬಗೆದು ತೆಗೆಯುವ ಅಭಿನಯ ನಡೆಯುತ್ತದೆ. ಈ ಅಭಿನಯವು 'ಕುಳಿಚ್ಚೋತ್ತಂ' ವೇಳೆಯಲ್ಲೂ ನಡೆಯುತ್ತದೆ. 'ಕುಳಿಚ್ಚೋತ್ತಂ' ವೇಳೆ ಈ ಅಭಿನಯಕ್ಕೆ **ಕುರುನೀರ**ನ್ನು ಇರಿಸಿದ ಹರಿವಾಣದ ಬಳಕೆಯಾಗುತ್ತದೆ.

'ಕುಳಿಚ್ಚೋತ್ತಂ' ವೇಷ ಬಲಗೈಯಲ್ಲಿ ಖಡ್ಗ ಮತ್ತು ಚೌರಿ (ಚಾಮರದ ಗೊಂಡೆ) ಎಡಗೈಯಲ್ಲಿ ಬಿಲ್ಲುಬಾಣ ಹಿಡಿದು ಮಾಡುವ ಅಭಿನಯ ತುಂಬ ಆಕರ್ಷಕ. ಈ ವೇಷದಲ್ಲಿ ಹೆಚ್ಚುಗಾರಿಕೆ ಕಡಿಮೆ. ಕಣ್ಣು, ಹುಬ್ಬು, ತುಟಿ, ಕೆನ್ನೆಗಳ ನವಿರಾದ ಸ್ಪಂದನಗಳಿಂದ ಕಥಕಳಿಯ ಹೋಲಿಕೆಯ ಮುಖಾಭಿನಯ ನಡೆಯುತ್ತದೆ. ಜತೆಗೆ ಓಡಾಟದಲ್ಲಿ ಚೆಲುವಿದೆ. ಇಬ್ಬರು ಮಲಯನ್ ಕಲಾವಿದರು ಎರಡು ಕೈಗಳನ್ನು ಹಿಡಿದು ದೈವದ ಆವೇಶಭರಿತ ಓಟದಲ್ಲಿ ಪಾಲುಗಾರರಾಗುತ್ತಾರೆ. 'ಒತ್ತೆಕೋಲ'ದ 'ಕುಳಿಚ್ಚೋತ್ತಂ' ಓಟದಲ್ಲಿ ವಿಶೇಷ ಆಕರ್ಷಣೆ ಇದೆ. ದೈವ ಓಡುತ್ತ ಆರ್ಧ ಉರಿದ ಕೆಂಡದ ರಾಶಿಯನ್ನು ಸುತ್ತುವರಿಯುತ್ತ ಕೆಂಡಕ್ಕೆ ಬೀಳುವ ಪ್ರಯತ್ನ ಮಾಡುತ್ತ, ತೀಯರಿಂದ ತಡೆಯಲ್ಪಟ್ಟು, ಮರಳುವ ಓಡಾಟದ ದೃಶ್ಯ ಕುತೂಹಲಕರವಾಗಿರುತ್ತದೆ.

'ಒತ್ತೆಕೋಲ'ದಲ್ಲಿ ಪ್ರಧಾನ ದೈವಕ್ಕೆ ನೃತ್ಯದ ಭಾಗವಿಲ್ಲ. ಕೆಂಡದ ರಾಶಿ (ಇದಕ್ಕೆ **ನೇಲೇರಿ** ಎಂದು ಹೆಸರು) ಮೇಲೆ ಬೀಳುವುದೇ ಇಲ್ಲಿನ ಪ್ರಧಾನ ಕೃತ್ಯ. ಬಯಲಕೋಲದಲ್ಲಿ **ಕೋಲಂ** ವೇಷ ಖಡ್ಗ, ಬಿಲ್ಲುಬಾಣ ಹಿಡಿದು ಸುಂದರವಾದ ಹೆಜ್ಜೆಗಾರಿಕೆಯಿಂದ ಎರಡು ಮೂರು ಕಂತುಗಳಲ್ಲಿ ನರ್ತಿಸುತ್ತದೆ. 'ವಿಷ್ಣುಮೂರ್ತಿ'ಯ ಖಡ್ಗಕ್ಕೆ ವಿಶಿಷ್ಟ ಆಕೃತಿ ಇದೆ. ಈ ಆಕೃತಿ ಹೊಯ್ಸಳ ಶೈಲಿಯದೆಂದು ಗುರುತಿಸಲಾಗಿದೆ ಕೂಡ. ಕೇರಳದ ಇತರ ದೈವಗಳ ಖಡ್ಗದ ವಿನ್ಯಾಸಕ್ಕೆ ಪ್ರತ್ಯೇಕ ಬಾಗುಗಳಿವೆ.

'ಒತ್ತೆಕೋಲ'ದಲ್ಲಿ ಒಂದೆರಡು ಆಳು ಎತ್ತರಕ್ಕೆ ಶಂಕು ಆಕೃತಿಯಲ್ಲಿ ಪೇರಿಸಿದ ಕೆಂಡಕ್ಕೆ ದೈವ ಬೀಳುವುದು ಒಂದು ಕೌತುಕದ ರಂಗಕ್ರಿಯೆ. ದೈವ ಕೆಂಡವನ್ನು ಪ್ರವೇಶಿಸುವ ಮೊದಲು 'ಕುಡಿಯೋತ್ತಂ'ನ ಪೂಜಾರಿ ಹಾಗೂ 'ವಿಷ್ಣುಮೂರ್ತಿ' ದೈವದ ಆವೇಶ ಹೊಂದಿರುವ **ಬೆಳ್ಚಪ್ಪಾಡ**ರು ಬರಿಗಾಲಲ್ಲಿ ಓಡುತ್ತ ಈ ಕೆಂಡದ ರಾಶಿಯನ್ನು ಏರಿ ಇಳಿಯುತ್ತಾರೆ. ದೈವ ಕೆಂಡದ ಮೇಲೆ ಕವುಚಿ ಬೀಳುವುದು, ಅಂಗಾತ ಬೀಳುವುದು,

ಉರುಳುವುದು ಇತ್ಯಾದಿಗಳಲ್ಲಿ ತೊಡಗುತ್ತದೆ. ಈ ಭೀಕರ ಅಗ್ನಿಪ್ರವೇಶದಲ್ಲಿ ದೈವ ಸುಮಾರು 60 ಬಾರಿ ಕೆಂಡಕ್ಕ ಬೀಳುವುದಿದೆ.

'ಒತ್ತೆಕೋಲ'ದಲ್ಲಿ **ಅರಬಡ** ಕಟ್ಟಿಕೊಳ್ಳುವ ಮೊದಲು ಮೈಗೆ 'ಕುಡಿಯಾತ್ತಂ'ನಿಂದ ಕೊಡುವ ನೀರಲ್ಲಿ ಕಲಸಿದ ಅಕ್ಕಿಹಿಟ್ಟನ್ನು ಲೇಪಿಸಲಾಗುತ್ತದೆ. ಇದರಲ್ಲಿ ಅರಸಿನ, ಲೋಳೆ ಸರದ ರಸ ಇರುತ್ತದೆಂದೂ ಹೇಳುತ್ತಾರೆ. ಚರ್ಮಕ್ಕೆ ಸುಟ್ಟಗಾಯಗಳಾಗದಿರಲು ಈ ರಕ್ಷಣೆಯ ಕ್ರಮ.

'ಬಯಲಕೋಲ'ದಲ್ಲಿ ಆರಂಭಿಕ ಆವೇಶ, ನರಸಿಂಹಾಭಿನಯ, ಆದ ಬಳಿಕ ದೈವ ಸ್ಥಳೀಯ ದೇವಸ್ಥಾನ ಅಥವಾ ತನ್ನದೇ ಸ್ಥಾನಕ್ಕೆ ಭೇಟಿ ನೀಡವ ಕಾರ್ಯಕ್ರಮ ಇದೆ. ಆಗ ಬೀದಿಯಲ್ಲಿ ಮಕ್ಕಳು ಕೂಗು ಹಾಕುತ್ತ ದೈವದ ಹಿಂದೆ ಹೋಗುವುದು ಒಂದು ಮೋಜಿನ ವಿಷಯ. ಈ ವಿಧಿ 'ಒತ್ತೆಕೋಲ'ಕ್ಕೆ ಇಲ್ಲ.

**ಬಾರಣೆ** ವೇಳೆ ಎರಡೂ ಕೋಲಗಳಲ್ಲಿ ದೈವ 'ಮುಖವಾಡ' ಧರಿಸಿ ಅಭಯ ನೀಡುವ ಕಾರ್ಯಕ್ರಮ ಇದೆ. ಮುಖವಾಡ ಧರಿಸುವಾಗ ದೈವದ 'ಅರಬಡ' ಎಳೆಗರಿಯ ಸೀಳುಗಳು ತಾನಾಗಿಯೇ ಸಿಂಹದ ಮುಖದ ಕೇಸರಗಳಾಗಿ ಮಾರ್ಪಡುವುದು ಒಂದು ವಿಶೇಷ.

**ಬೆಳ್ಚಪ್ಪಾಡರು :** ಬ್ರಾಹ್ಮಣ, ನಾಯರ್, ಬಂಟ, ಇತ್ಯಾದಿ ಮೇಲು ಜಾತಿಯವರನ್ನೂ, ಹರಿಜನರನ್ನೂ ಉಳಿದು ಮಿಕ್ಕೆಲ್ಲ ಕೃಷಿಕ ಮತ್ತಿತರ ಕುಲಕಸುಬಿನ ಜಾತಿಯವರು 'ಬೆಳ್ಚಪ್ಪಾಡ'ರಾಗುತ್ತಾರೆ. ಒಂದು ಅಪವಾದವೆನ್ನುವಂತೆ ಕಾಸರಗೋಡು ತಾಲೂಕಿನ **ಕಾನ** ಎಂಬಲ್ಲಿ **ಜುಮಾದಿ** ದೈವಕ್ಕೆ ಬ್ರಾಹ್ಮಣ 'ಬೆಳ್ಚಪ್ಪಾಡ'ರನ್ನು ಕಾಣಬಹುದು. 'ಬೆಳ್ಚಪ್ಪಾಡ'ರೆಂದರೆ ದೈವದ ಆವೇಶ 'ಮೈ ನಡುಕ' ಹೊಂದುವ ಆರಾಧಕರು. ಅವರು ಹೇಳಿಕೆ ಇಲ್ಲದೆಯೂ 'ವಿಷ್ಣುಮೂರ್ತಿ'ಯ ಆರಾಧನೆಯ ತಾವಿಗೆ ಬರಬಲ್ಲರು. 'ಬೆಳ್ಚಪ್ಪಾಡರು' ಹೆಚ್ಚಿದಷ್ಟೂ **ದೈವಕ್ಕೆ** ಸಂತೋಷ, ದೈವದ ಕೋಲ ನಡೆಯುವಲ್ಲಿ ಇಲ್ಲಿನ ಅಬ್ಬರ, ಹಿಮ್ಮೇಳದ ಗುಂಗಿನಲ್ಲಿ ಯಾರಿಗಾದರೂ ಮೈನಡುಕ, ಕೂಗು ಕಂಡುಬಂದರೆ ಒಡನೆಯೆ ದೈವ ಆತನ ಹಿರಿಯರ ಒಪ್ಪಿಗೆ ಪಡೆದು ಆತನ ಕೈಗೆ ಖಡ್ಗವಿತ್ತು 'ಬೆಳ್ಚಪ್ಪಾಡ'ನೆಂದು ಸಾರುತ್ತದೆ. ಅನಂತರ ಆತ ತನ್ನದೆ ಆರಾಧನೆಯ ಖಡ್ಗವನ್ನು ಇರಿಸಿಕೊಳ್ಳುತ್ತಾನೆ. ಬೇರೆ ದೈವಗಳಿಗೂ 'ಬೆಳ್ಚಪ್ಪಾಡ'ರು (ಭಗವತಿಯ ಬೆಳ್ಚಪ್ಪಾಡರಿಗೆ **ಕೋಮರಂ** ಎಂದು ಹೆಸರು.) ಇದ್ದಾರಾದರೂ ಅವರಲ್ಲೆಲ್ಲ ಅಗ್ರಸ್ಥಾನ 'ವಿಷ್ಣುಮೂರ್ತಿ'ಯ ಬೆಳ್ಚಪ್ಪಾಡರಿಗೇ. ಬೆಳ್ಚಪ್ಪಾಡರು 'ಸ್ಥಾನ'ಗಳಲ್ಲಿ ಪೂಜಾರಿಗಳಿಗೆ ಸಮನಾದ ಪಾವಿತ್ರ್ಯ ಉಳ್ಳವರಾಗಿರುತ್ತಾರೆ. ಅವರ ಸ್ಥಾನಮಾನ ಇತರ ಸಭೆಗಳಲ್ಲೂ ಎತ್ತರದಲ್ಲಿರುತ್ತದೆ.

**ಮಲಯರು :** 'ವಿಷ್ಣುಮೂರ್ತಿ' ದೈವವನ್ನು ಕಟ್ಟಿ ಆಡುವವರು 'ಮಲಯನ್' ಜಾತಿಯ ಮಲಯಾಳಿ ಕಲಾವಿದರು. ಅದು ಅವರ ಕುಲ (ವೃತ್ತಿ) ನೇಮ. ಈ ದೈವದ ಬಿಂಬ ರಚನೆಯನ್ನು ಮೊದಲಾಗಿ ರಚಿಸಿಕೊಟ್ಟವನು ಈ ಜಾತಿಯವನಾದ **ಪಾಲಾಯಿ ಪರಪ್ಪನ್** ಎಂಬುವನು.

ಮಲಯನ್ ಕಲಾವಿದರ ಪರಿಣತಿ, ಅನುಭವ ಹೆಚ್ಚಿದಂತೆ ಅವರಿಗೆ 'ಪಣಿಕ್ಕರ್'. 'ಪೆರು ಮಲಯನ್' ಇತ್ಯಾದಿ ಶ್ರೇಣಿಗಳು ಸಿಗುತ್ತವೆ. ಈ ವೃತ್ತಿಯಲ್ಲಿರುವುದು ಈ ಜನರಿಗೆ ಲಾಭಕರ ಏನೂ ಅಲ್ಲ. ಇಲ್ಲಿ **ಪಡಿತರ**ವಾಗಿ ಸಿಗುವ ಅಕ್ಕಿ, ತೆಂಗಿನಕಾಯಿ, ತೆಂಗಿನೆಣ್ಣೆ, ಇತ್ಯಾದಿ ಸಾಮಗ್ರಿಗಳು ಹಾಗೂ ಹಣ ಇವತ್ತಿನ ಪರಿಸ್ಥಿತಿಗೆ ಮಾತ್ರವಲ್ಲ ಯಾವ ಕಾಲ ಘಟ್ಟದಲ್ಲೂ ತೃಪ್ತಿಕರವಾಗಿ ಇರಲಿಲ್ಲ. ಹಣ (ಕರೆನ್ಸಿ) ಪ್ರಾಮುಖ್ಯ ಪಡೆದ ಬಳಿಕವಂತೂ ಇವರ ವರಮಾನದ ಸಮತೋಲನ ತೀರ ಕೆಟ್ಟಿದೆ. 'ನಾಟಿ ಮದ್ದು', 'ಮಂತ್ರವಾದ' ಇಂಥ ವಂಶಪಾರಂಪರ್ಯವಾದ ಉಪವೃತ್ತಿಗಳಿಂದ ಅವರ ದಿನ ಸಾಗಬೇಕು.

ವಿಜ್ಞಾನ ಪ್ರಸಾರ, ವಿದ್ಯಾಭ್ಯಾಸಗಳಿಂದಾಗಿ ಮಲಯನ್ ಜನಾಂಗದವರಲ್ಲಿ ಈ ಆರಾಧನಾ ಪ್ರದರ್ಶನದ ವೃತ್ತಿ ಅವಲಂಬನೆ ಕಡಿಮೆಯಾಗುತ್ತಿದೆ. ಕುಲವೃತ್ತಿಯಲ್ಲಿ ನಿಲ್ಲುವವರ ಸಂಖ್ಯೆ ಕ್ಷೀಣಿಸುತ್ತಿದೆ.

**ಮಾಹಿತಿ ಋಣ :** ಟಿ.ಕೆ. ರಾಮನ್ ಪಣಿಕ್ಕರ್, ಮಾನ್ಯ ಉಪೇಂದ್ರನ್ ಮಾಸ್ಟರ್, ಕಾಸರಗೋಡು, ಅಂಬು ಮಲಯನ್, ಅಡೂರು, ಎಂ.ಎಸ್. ಕೃಷ್ಣನ್, ಮಂಗಳೂರು, ಎ. ಈಶ್ವರಯ್ಯ, ಅನಂತಪುರ.

# ದಕ್ಷಿಣ ಕನ್ನಡದ ಆಚರಣೆಗಳು- ಒಂದು ಟಿಪ್ಪಣಿ

-ಕ.ನೆಂ.ರಾಜಗೋಪಾಲ

1. ದ. ಕನ್ನಡದ ಆಚರಣೆಗಳಲ್ಲಿ ಸಿರಿ, ಡಕ್ಕೆಬಲಿ, ನಾಗಮುಂಡಲ ಮತ್ತು ಭೂತಾರಾಧನೆಗಳು ಜನಪ್ರಿಯವಾಗಿವೆ. ಇವುಗಳಲ್ಲಿ ಮೊದಲ ಮೂರೂ 'ನಾಗಾರಾಧನೆ'ಗೆ ಸೇರಿದ್ದು ಭೂತಾರಾಧನೆಯು ಫಲವಂತಿಕೆಯು, ಮಾಂತ್ರಿಕ ಪದ್ಧತಿ ಹಾಗೂ ಪಿತೃ ಸ್ಮರಣೆಗಳ ಆರಾಧನೆ-ಎನ್ನಬಹುದಾಗಿದೆ.

ಸಿರಿ, ಡಕ್ಕೆಬಲಿ ಮತ್ತು ನಾಗಮುಂಡಲಗಳಲ್ಲಿ ಸ್ತ್ರೀಯರೇ ಪ್ರಮುಖವಾಗಿ ಪಾಲುಗೊಳ್ಳುವುದು ಸಿರಿಯಾದರೆ, ಪುರುಷರು ಪ್ರಧಾನವಾಗಿ ಪಾಲುಗೊಳ್ಳುವುದು ಡಕ್ಕೆಬಲಿ ಮತ್ತು ನಾಗಮುಂಡಲಗಳಾಗಿವೆ. ಭೂತಾರಾಧನೆ ಕೂಡ ಪುರುಷ ಪ್ರಧಾನವಾದುದಾಗಿದೆ. ಇಂತಹ ಆಚರಣೆಗಳಲ್ಲಿ ವಿದ್ಯಾವಂತಿಕೆಯು ಗೌಣವಾಗಿ ನಾಗರಿಕತೆಯ ಪ್ರಭಾವವಿಲ್ಲದೆ ಇರುವ ಸಾಮಾಜಿಕ ಮತ್ತು ಸಾಮೂಹಿಕ ಜೀವನದ ನಂಬಿಕೆಗಳಾಗಿ 'ತೋಂಡಿ' ಸಂಪ್ರದಾಯವನ್ನು ಆಧರಿಸಿಕೊಂಡಿರುವ ಆಚರಣೆಗಳೆಂದೂ ಇವುಗಳನ್ನು ಪರಿಗಣಿಸಬಹುದಾಗಿದೆ. ಆದುದರಿಂದ ಈ ಭಾಗದ ಹಿಂದುಳಿದ ಬುಡಕಟ್ಟು ಜನಾಂಗಗಳ ಸಾಮಾನ್ಯ ಬಳಕೆಯ ಭಾಷೆಯಾದ 'ತುಳು ಭಾಷೆ'ಯು ಇಲ್ಲೆಲ್ಲಾ ಪ್ರಯೋಜನಕಾರಿಯಾಗಿರುವಂತಿದೆ.

ಈ ಆಚರಣೆಗಳಿಗೆಲ್ಲಾ ಬಂಟ-ಬಿಲ್ಲವರ ಪ್ರಮುಖವಾದ ಸಮಾಜವು ಆಧಾರಭೂತವಾಗಿರುವಂತಿದೆ. ಆದುದರಿಂದ ಫಲವಂತಿಕೆಯ ನಂಬಿಕೆಗಳು ಚಲಾವಣೆಯಲ್ಲಿರುವಂತೆ ಈ ಆಚರಣೆಗಳಲ್ಲಿ 'ತುಳು' ಬಳಕೆಯಾಗುವುದಲ್ಲದೆ 'ಜೀವಿತವಾದ'(ಅನಿಮಿಸಂ-Animism) ವು ಆಧಾರವಾಗಿರುತ್ತದೆ. ಈ ಜನಗಳು ಬದುಕಿನ ಉಳಿದ ವಿಚಾರಗಳಲ್ಲಿ ಆಧುನಿಕತೆಗೆ ಹಾಗೂ ವಿಜ್ಞಾನದ ಪ್ರಭಾವಕ್ಕೆ ಒಳಗಾಗಿದ್ದರೂ ತಮ್ಮ 'ಆಧ್ಯಾತ್ಮಿಕ'ವೆನ್ನಬಹುದಾದ ನಂಬಿಕೆಗಳಲ್ಲಿ ಮಾತ್ರ ತುಂಬ ಹಳೆಯದಾದ 'ಒಂದು ಸಂಸ್ಕೃತಿಯ'ನ್ನು ರಕ್ಷಿಸಿಕೊಂಡು ಬಂದಂತಾಗಿದೆ.

ಇವರಿಗೆ ವೈದಿಕ ನಂಬಿಕೆಗಳು 'ಆತ್ಮಗತ'ವಾಗುವುದಿಲ್ಲ ಅಥವಾ ಅಂತರಂಗಕ್ಕೆ ಸೇರುವುದಿಲ್ಲ. ಆದುದರಿಂದ ಸ್ವರ್ಗ-ನರಕಗಳ ಕಲ್ಪನೆಯು ಇರಲಾರದು. ಬದುಕಿರುವ 'ಜೀವ'ಗಳಂತೆಯೇ(?) ಮಡಿದವರ ಜೀವಗಳೂ ಜೊತೆಗಿರುತ್ತವೆ-ಎನ್ನುವಂತೆ, ತೋರುತ್ತದೆ. ಆದುದರಿಂದ ನಾಗದೈವದ ಆವಾಹನೆಯಂತೆಯೇ ಮಡಿದವರ ಜೀವಗಳ ಆವಾಹನೆಯೂ ಸಾಧ್ಯವಾಗುತ್ತದೆ. ಆದರೆ ಇವೆರಡೂ ಸಂದರ್ಭಗಳಲ್ಲಿ ವಿಧಿವಿಧಾನಗಳು ಬಹುಶ ಕ್ರಿ.ಶಕದ ಆರಂಭದ ದಿನಗಳಿಂದಲೂ ಬಳಕೆಯಲ್ಲಿರಬಹುದಾಗಿವೆ. ಎಂದರೆ ಈ ಆಚರಣೆಗಳಲ್ಲಿ ಕಾಲವನ್ನು ಎಷ್ಟು ಹಳೆಯದೆಂದು ಹೇಳುವುದು, ಕಠಿಣವೇ ಆಗಿದೆ. ನಮ್ಮ ಬುಡಕಟ್ಟು ಜನಾಂಗಗಳ ಅಧ್ಯಯನದಿಂದ ಇವುಗಳಿಗೆ 'ಬೃಹತ್ ಶಿಲಾಯುಗ'ದ ಸಂಬಂಧವಿರಲೇಬಹುದೆಂದು ತರ್ಕಿಸಬಹುದಾಗಿದೆ. ಅಲ್ಲದೆ ಇವುಗಳಲ್ಲೆಲ್ಲಾ ತಾಂತ್ರಿಕ-ಮಾಂತ್ರಿಕ ಲಕ್ಷಣಗಳಿವೆ-ಎನ್ನಬಹುದು. ಅಂದರೆ Magic and Religion = ಮಾಂತ್ರಿಕ ಧರ್ಮದ ಅವಿಭಾಜ್ಯತೆಯನ್ನು

ಈ ಆಚರಣೆಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಇವೆರಲ್ಲೆಲ್ಲಾ ಪೂಜೆಗೆ ಸಂಬಂಧಿಸಿದ ಪ್ರಾರ್ಥನೆ, ಪೂಜೆ, ಅಲಂಕಾರಭರಿತ ಹಾಗೂ ಅದ್ಭುತ-ರಮ್ಯ ಮೆರವಣಿಗೆ ಮತ್ತು ಬದುಕಿನ ವಿಶ್ವಾಸದ ಸಂರಕ್ಷಣೆಗಳು-ಕಂಡುಬರುತ್ತವೆ. ಇಂತಹ 'ತೋಂಡಿ' ಸಂಪ್ರದಾಯಕ್ಕೆ ಹಿಂದುಳಿದ ವರ್ಗಗಳ ಸಾಮಾನ್ಯ ಭಾಷೆಯಾದ 'ತುಳು' ಬಳಕೆಯಾಗುತ್ತಿದೆ. ಆದುದರಿಂದ ಇವುಗಳನ್ನು 'ತುಳುವರ ಆಚರಣೆಗಳು' ಎಂದು ಗುರುತಿಸಿದ್ದಲ್ಲದೆ ಇಂತಹ ಸನ್ನಿವೇಶದಲ್ಲಿ ಕಲಾನುಭೂತಿಯ ಅಂಶಗಳನ್ನು ಅವುಗಳ ಆಶಯಗಳ ರೀತಿನೀತಿಯಲ್ಲಿಯೇ ಗುರುತಿಸಲು ಪ್ರಯತ್ನಿಸಲಾಗಿದೆ. ಆದುದರಿಂದ ಈ ಹಿಂದಿನ ಲೇಖನಗಳಲ್ಲಿ-'ತುಳುವರ ಆಚರಣೆಗಳಲ್ಲಿ ಕಲಾವಂತಿಕೆ'ಯನ್ನು ಪರಿಶೀಲಿಸಲಾಗಿದೆ.

2. ನಾಗಾರಾಧನೆ ಮತ್ತು ಭೂತಾರಾಧನೆಗಳ ವ್ಯಾಪ್ತಿ ವೈಶಿಷ್ಟ್ಯತೆಯ ಆಧಾರದಿಂದ ನೋಡಿದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಇಂದಿನ ಗಡಿಗಳನ್ನು ದಾಟುವುದು ಖಂಡಿತ. ಉತ್ತರಕ್ಕೆ ಉ.ಕನ್ನಡ ಜಿಲ್ಲೆಯೂ ದಕ್ಷಿಣಕ್ಕೆ ಕೇರಳದ ಉತ್ತರ ಭಾಗವಾದ ಮಲಬಾರಿನ ಪ್ರದೇಶವೂ ಹಾಗೆಯೇ ಪೂರ್ವಭಾಗದ 'ಘಟ್ಟದ ಮೇಲಿ'ನ ಭಾಗಗಳೂ ಇಂತಹ ಆಚರಣೆಗಳ ವ್ಯಾಪಕತೆಗೆ ಬರುತ್ತವೆ. ಆದುದರಿಂದ ಕೇರಳದ ಅಶುದ್ಧವೆನ್ನಬಹುದಾದ ಮಲಯಾಳಂ ಆಡುವ ಬುಡಕಟ್ಟುಗಳಲ್ಲದೆ 'ಮಲೆಯರು, ಕುರುಚಿಗಳು 'ನಾಯಿರಿ'ಗಳಲ್ಲಿಯೂ ಈ ಆಚರಣೆಗಳು ಕಂಡುಬರುತ್ತವೆ. ಹಾಗೆಯೇ ಉ.ಕನ್ನಡ ಭಾಗದಲ್ಲಿ ಬಹಳ ಹಿಂದೆ ಕದಂಬರ ಕಾಲದಲ್ಲಿ ಜನಪ್ರಿಯ ಸಂಸ್ಕೃತಿಗೆ ಸೇರಿದ್ದಿರಬಹುವಾಗಿವೆ. ಆದುದರಿಂದ ಈ ಆಚರಣೆಗಳು ಮಲಯಾಳಂ, ತುಳು, ಮತ್ತು ಕನ್ನಡ-ಈ ಮೂರೂ ಭಾಷೆಗಳ **ಪೂರ್ವಸ್ಥಿತಿ**ಗೆ ಸೇರಬಹುದೆಂದು ಹೇಳಬಹುದು.

ಈ ಆಚರಣೆಗಳಲ್ಲಿ ತುಳು-ಕನ್ನಡ, ಇವೆರಡೂ ಬಳಕೆಯಾಗುತ್ತವೆಯಾದರೂ ಕನ್ನಡದಂತೆ ತುಳು-ಭಾಷೆಯು ಅಶೋಕನ ಬ್ರಾಹ್ಮಿಯಿಂದ ಲಿಪಿಯನ್ನು ಪಡೆದುಕೊಳ್ಳದೆ ಮಲಯಾಳಂನಂತೆ, (ಆದರ ನಂತರದಲ್ಲಿ ಅಂದರೆ 15-16ನೇ ಶತಮಾನಗಳಲ್ಲಿ) ಒಂದು ಬಗೆಯ 'ಬೆರತ ಲಿಪಿ'ಯನ್ನು ಬಳಸಲು ಮೇಲುವರ್ಗದವರಿಂದ ಪ್ರಯತ್ನವಾಗಿ ತೋಂಡಿ ಸಂಪ್ರದಾಯವನ್ನು ಗೆಲ್ಲಲಾರದೆಹೋದಂತಿದೆ-ಇಂತಹ ಪ್ರಯತ್ನದ ಹಿನ್ನೆಲೆಯಲ್ಲಿ ಈ ಭಾಗದ ಎಲ್ಲಾ ವರ್ಗಗಳೂ ಈ ಆರಾಧನೆಗಳನ್ನು ರಕ್ಷಿಸಿಕೊಂಡು ಬಂದಿರುವುದನ್ನು ಅಥವಾ ಎಲ್ಲರೂ ಇವುಗಳಲ್ಲಿ ಭಾಗಿಗಳಾಗುವುದನ್ನು ಕಾಣುತ್ತೇವೆ. ಇಲ್ಲಿ ಕನ್ನಡ ಮತ್ತು ತುಳು ಭಾಷೆಗಳೆರಡನ್ನೂ ಅಶೋಕನ ಶಾಸನದ ಕಾಲದವರೆಗೆ ಗುರುತಿಸಬಹುದಾಗಿದೆ.(ಅಕ್ಸಿರಿಂಕಸ್ ಪ್ಯಾಪಿರಿಯ ಪ್ರಹಸನವು ಸೂಚಿಸುವ ಪ್ರದೇಶವು ದ.ಕನ್ನಡವಾದರೂ ಭಾಷೆಯಲ್ಲಿ ಸಂದಿಗ್ಧತೆಯು ಮಾತ್ರ ಪರಿಹಾರವಾಗಿರುವುದಿಲ್ಲ.)

ಮೇಲಿನ ವಿಚಾರಗಳಿಂದ ಈ ಆಚರಣೆಗಳ ಹಳೆತನವನ್ನು ಇಲ್ಲಿಯ ಬುಡಕಟ್ಟು ಜನಾಂಗಗಳ ಅಂದರೆ ಬಂಟ-ಬಿಲ್ಲವ, ಕೊರಗ, ಮೊಗೇರ ಮೊದಲಾದವರ ನಂಬಿಕೆಗಳಲ್ಲಿಯೇ ಕಂಡುಕೊಳ್ಳಬೇಕಾಗಿದೆ. ಆದುದರಿಂದ ದ.ಕನ್ನಡ ಜಿಲ್ಲೆಯ ಸ್ಥಳನಾಮಗಳಲ್ಲಿ ಬೃಹತ್ ಶಿಲಾಯುಗದ ಗುರುತಾದ ಕಲ್ಲು = ಊರು ಎಂಬ ಸೂತ್ರಕ್ಕೆ ಸೇರುವ ಸುರತ್‌ಕಲ್ಲು,

ಮಣಿಕಲ್ಲು, ನಿಡುಗಲ್ಲು ಮತ್ತು ಕಲ್ಲೂರು-(ಇವುಗಳ ಸಮೀಪದಲ್ಲಿ ಬೃಹತ್ ಶಿಲಾಯುಗದ ಅವಶೇಷಗಳು ಕಂಡುಬರುತ್ತಿವೆ). ಇಂತಹ ಆಧಾರದಿಂದ ಗುರುತಿಸುವುದಂತೂ ಸಾಧುವಾಗುತ್ತದೆ. ಏಕೆಂದರೆ ಇಂತಹ ಹಳೆತನದಲ್ಲಿ ಜೀವಿತವಾದ (Animism)ವು ದೃಢವಾದುದಾಗಿದೆ.

ನಾಗಾರಾಧನೆಯ ಹಳೆತನವನ್ನು ಕೊಂಚ ವಿಚಾರ ಮಾಡಬಹುದು. ಇದರಲ್ಲಿ 'ಡಕ್ಕೆ ಬಲಿ'ಯು ಜರುಗುವ ಬ್ರಹ್ಮಸ್ಥಾನಗಳಲ್ಲಿ ತುಂಬ ಹಳೆಯ ನಾಗಬನಗಳಿವೆಯಷ್ಟೆ. ಈ ಬನಗಳಲ್ಲಿ ಹಳೆಯಂದಾದ ಒಂದು ವಿಶಿಷ್ಠ ನಾಗಾಶಯವು-ಐದು ತಲೆಗಳು ದೊಡ್ಡ ಹೆಡೆಯು ದೇಹದಲ್ಲಿ ಎರಡು ಬಾರಿ 'ಬ'ದಂತೆ ಇರುವ ದೇಹದಪಲುಕು-ಕಂಡುಬರುತ್ತದೆ. ನಂದಳಿಕೆ, ಎಡಪದ, ಹಿರಿಯಡ್ಕ, ಕವತಾರ ಮತ್ತು ಉಡುಪಿಯಲ್ಲಿರುವ ಹಳೆಯ ನಾಗಬನಗಳಲ್ಲಿಯೂ ಈ 'ಆಶಯ'ದ ನಾಗಪ್ರತಿಮೆಗಳಿವೆ. ಇದನ್ನೇ ಐತಿಹಾಸಿಕವಾಗಿ ಶಿಲ್ಪದ ಮಾದರಿಯಾಗಿ ಬನವಸೆಯ 'ಮಹಾಭೋಜ-ನಾಗಸಿರಿ-ನಟಕ'-ಇವರ ಸಂಬಂಧದ ಶಾಸನದಲ್ಲಿ ಕಾಣುತ್ತೇವೆ. ಇದು ಪ್ರಾಕೃತ ಶಾಸನ, ಚುಟುಕುಲಕ್ಕೆ ಸಂಬಂಧಿಸಿದುದೂ ಆಗುತ್ತದೆ, ಅಲ್ಲದೆ ಕ್ರಿ.ಶ. ಪೂರನೆಯ ಶತಮಾನದೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ನಾಗಸಿರಿಯು ಒಂದು ತಟಾಕವನ್ನು ಕಟ್ಟಿಸಿದುದಲ್ಲದೆ ಬೌದ್ಧ ವಿಹಾರಗಳನ್ನೂ ಕಟ್ಟಿಸಿ ಈ ನಾಗಪ್ರತಿಮೆಯನ್ನು ಪ್ರತಿಷ್ಠೆ ಮಾಡಲು ಕಾರಣಗಳಾಗುತ್ತಾಳೆ. ಇಲ್ಲಿಯ 'ನಟಕ'ನು ಈ ನಾಗನನ್ನು ಮಾಡಿದವನೂ ಹೌದು. ಈ ನಟಕ = ನರ್ತಕ ಎಂದೂ ಗುರುತುಮಾಡಲಾಗಿದೆ. ವಾಸ್ತವವಾಗಿ ಇಂದಿಗೂ ನಾಗರಕಲ್ಲನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾಪಿಸುವವರು ಅಥವಾ ಪ್ರತಿಷ್ಠೆ ಮಾಡುವವರು ತಂತ್ರಿಗಳು. ಇವರೇ ವೈದ್ಯರೂ ನಾಗಾರಾಧನೆಗೆ 'ಆಧಾರ'ವೂ ಆಗಿರುತ್ತಾರೆ. ಪಾಣಾರ ಎಂಬ ಹಿಂದುಳಿದ ವರ್ಗದವರನ್ನೂ ಫಣಿಯರರು = ನಾಗಾರಾಧಕರು ಎಂದೇ ಗುರುತಿಸಬೇಕಾಗುತ್ತದೆ. ಇವರೇ ಇಂದಿಗೂ ಡಕ್ಕೆಬಲಿಯ ನಾಗಪಾತ್ರಿಗಳಾಗಿದ್ದಾರೆ. ವೈದ್ಯರೆನ್ನುವವರು-ಮಾಂತ್ರಿಕ ಮೊದಲಾದ 64 ವಿದ್ಯೆಗಳನ್ನು ಬಲ್ಲವರು; ಇವರ ಸ್ವಂತ ಆಚರಣೆಯೆನ್ನುವಂತೆಯೇ ಇಂದಿಗೂ 'ನಾಗಾರಾಧನೆ'ಯು ಉಳಿದುಬಂದಿದೆ. ನಾಗ ಮಂಡಲ ಮತ್ತು ಡಕ್ಕೆಬಲಿ-ಇವೆರಡೂ ಮಂಡಲಗಳಲ್ಲಿನ ಆಶಯವು ಒಂದೇ ಆಗಿದೆ. ವೈದ್ಯರ ಪದ್ಧತಿಯೆನ್ನುವುದು ಸಾರ್ವಜನಿಕವಾದಂತೆ (ಒಂದು ಕಾಲದಲ್ಲಿ ರಾಜಮನ್ನಣೆಯನ್ನು ಪಡೆದ ಕಾರಣದಿಂದ) ವೈಭವದಿಂದ ಮೆರೆಯುತ್ತದೆ. ಆದರೆ ಕೆಳದರ್ಜೆಯ ಅಥವಾ ವರ್ಗಗಳ ಆತ್ಮೀಯ ಆಚರಣೆಯಂತೆ ಡಕ್ಕೆಬಲಿಯು ಜರುಗುತ್ತದೆ. ಇದರ ಫಲವಂತಿಕೆಯನ್ನು ಮಾತ್ರ ಮೇಲುವರ್ಗದ (ಭಟ್ಟರು ಮತ್ತು ಇತರರು) ವೈದಿಕರು 'ಆಶ್ಲೇಷ ಬಲಿ' ಎಂದು ಜರುಗಿಸುವುದೂ ಇದೆ.

ಹೀಗೆ ನಾಗಮಂಡಲದಲ್ಲಿ (ಡಕ್ಕೆ ಬಲಿಯಲ್ಲಿ ಕೂಡ) ಮೂಲ ದೈವವಾಗಿ ವರ್ತಿಸುವ ಬನವಾಸಿಯ ನಾಗಸಿರಿಯ 'ಕಲ್ಲು'-ಆಗಲಿ ತುಳುವ ಸ್ತ್ರೀಯರು ಸಾಮೂಹಿಕವಾಗಿ ಐದಾರು ಕಡೆ ಆಚರಿಸುವ 'ಸಿರಿ ಜಾತ್ರೆ'ಯಾಗಲಿ 'ಫಲವಂತಿಕೆ'ಯ ಉದ್ದಿಶ್ಯದಿಂದ ಜರುಗುವಂಥದಾಗಿವೆ.

ಆದುದರಿಂದಲೇ ಸಿರಿ ಎಂಬುದು ಪ್ರಸಿದ್ಧವಾಗಿದೆ. ಅಲ್ಲದೆ ಇಲ್ಲಿಯ ವಿಷಯದಲ್ಲಿ ಬನವಾಸಿಯ ನಾಗಸಿರಿಯ ಸಂಬಂಧವು ಅರ್ಥಪೂರ್ಣವಾದುದು. ಈ ಶಾಸನವು ಸೂಚಿಸುವಂತೆ ಇದೊಂದು ಬೌದ್ಧ ತಾಂತ್ರಿಕ ಸಂಬಂಧದ ಆಚರಣೆಯಾಗಿದ್ದು ಸನ್ನತಿ(ಗುಲ್ಬರ್ಗಾ ಜಿಲ್ಲೆ, ಕನ್ನಡನಾಡು) ಎಂಬಲ್ಲಿ ದೊರೆತಿರುವ ನಾಗಪ್ರತಿಮೆಯೂ ಬನವಾಸಿಯ ಪ್ರತಿಮೆಯ ಆಶಯದ್ದೇ ಆಗಿರುವುದಲ್ಲದೆ ಅದರ ಬೌದ್ಧ ಸಂಬಂಧವು ಸ್ಪಷ್ಟವಾಗಿದೆ. (ಗುಲ್ಬರ್ಗದ ಮ್ಯೂಸಿಯಂನಲ್ಲಿ ಮುಖ್ಯಸ್ಥರಾಗಿದ್ದ ಗೆಳೆಯ ಸಿದ್ಧಣಗೌಡ ಪಾಟೀಲರಲ್ಲಿ ಇದರ ಸ್ಪಷ್ಟ ವಿಚಾರ ಮಾಡಿದ್ದೇನೆ.)

'ಸಿರಿ'ಯ ಆಚರಣೆಯು 'ಬಂಟ' ಜನಾಂಗದಲ್ಲಿ ಒಂದು ಮುಖ್ಯವಾದ ಪದ್ಧತಿಯಾಗಿ ಬೆಳೆದಂತಿದೆ. ಈ ನಂಬಿಕೆಗೆ ಒಳಗಾದವರು ಹಿರಿಯಡ್ಕ, ಕವತಾರ, ಪಾಂಗಳ, ನಂದಳಿಕೆ-ಇಂಥ ಕೆಲವೇ ಸ್ಥಳಗಳಿಗೆ ವೈಶಾಖಪೌರ್ಣಿಮೆಯಂದು ನಾಗದರ್ಶನಕ್ಕೆ ಸೇರುತ್ತಾರೆ. ಇದು ಅಂದಿನ ಇರುಳು ಜರುಗುತ್ತದೆ. ಸಿರಿಯನ್ನು ಕುರಿತ ಪಾಡ್ದನವು ಇಲ್ಲಿ ಕೇಳಿಬರುವ ಪ್ರಾರ್ಥನೆಯಾಗಿರುತ್ತದೆ. ಆವೇಶಕ್ಕೆ ಒಳಗಾದವರು 'ಬುಸು'ಗುಡುತ್ತಾ ವರ್ತಿಸುವ ರೀತಿಯಲ್ಲಿ ನಾಗಾವೇಶದ ಲಕ್ಷಣಗಳನ್ನೂ ಕಾಣಬಹುದಾಗಿದೆ. (ಈ ವಿಷಯದಲ್ಲಿ ಡಾ. ಪೀಟರ್ ಕ್ಲಾಸ್ ಅವರ ಸಂಶೋಧನೆಯನ್ನು 'ತುಳುದರ್ಶನ' ಎಂಬ ಅನುವಾದಿತ ಗ್ರಂಥವನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ.) ಇಂತಹ ಪದ್ಧತಿಯೊಂದು 'ನಾಗಮಂಡಲ'ದ ಆಚರಣೆಗೂ ಬೆಂಬಲವಾಗಿದೆ-ಎಂಬುದು ಮುಖ್ಯವಾಗುತ್ತದೆ.

o o o o o o

ಭೂತಾರಾಧನೆಯು ಕೂಡ ತುಳುವರ ವಿಶಿಷ್ಟ ಆಚರಣೆಯಾಗಿದೆ. ಇದರಲ್ಲಿ ದಕ್ಷಿಣ ಕನ್ನಡ ಜನತೆಯ 'ಕಲಾನುಭೂತಿ'ಯು (ಒಂದು ಸಾಮೂಹಿಕ ಪ್ರಜ್ಞೆ) ಒಂದು ಅಖಂಡ ರೀತಿಯೆನ್ನುವಂತೆ ತೊಡಗಿದೆ-ಎನ್ನಬಹುದು. ನಾಗಮಂಡಲದ ರಚನೆಯಲ್ಲಿ ವೈದ್ಯರು ತೋರುವ ಕಲಾವಂತಿಕೆಯ ಅರಿವು ಮುಖ್ಯವಾಗಿರುವಂತೆಯೇ ಭೂತಾಲಂಕಾರದಲ್ಲಿಯೂ ಪರವ ಪಂಬದ, ನಲ್ಕೆಯವರ ಅರಿವೂ ಮುಖ್ಯವಾಗಿದೆ. ಈ ಎರಡೂ ಆಚರಣೆಗಳೂ ದಕ್ಷಿಣ ಕನ್ನಡದ 'ಸಮಾರಾಧನೆ'ಗಳು ಎನ್ನಬಹುದು. ಹಾಗೆ ಜರುಗುತ್ತವೆ. ಇಲ್ಲಿ ಕಂಡುಬರುವ ಶಿಲ್ಪವೈವಿಧ್ಯ, ಪಂಚವರ್ಣಗಳ ಬಳಕೆ, ನೃತ್ಯ-(ಸಂ)ಗೀತಗಳ ಜಾನಪದ ಸ್ವರೂಪ-ಮೊದಲಾದವು ತುಂಬ ಆಕರ್ಷಕವಾಗಿವೆ.

ಈ ಆಚರಣೆಗಳ ಬಲದಿಂದ ಇಲ್ಲಿಯ ಜನತೆಯ 'ಕಲಾಭಿಜ್ಞತೆ'ಯೂ ರೂಪತಾಳಿದೆಯೆನ್ನಿಸುತ್ತದೆ. 'ಯಕ್ಷಗಾನ-ಬಯಲಾಟ'ವು ಸಾಹಿತ್ಯದ ವಸ್ತುವೈವಿಧ್ಯವನ್ನೂ ಒಳಗೊಂಡು 'ಒಂದು ಕಲೆ'ಯೆನ್ನುವಷ್ಟು ಸತ್ವಯುತವಾಗಿದೆ (ರಂಗಕಲೆಯೆನ್ನುವುದು ಎಲ್ಲಾ ಕಲೆಗಳ ಒಂದು ಸಮಾವೇಶ-ಎನ್ನಬೇಕಾಗುತ್ತದೆ). ಅಲ್ಲದೆ ಅದು ಮತೀಯವೆನ್ನಬಹುದಾದ ಮಿತಿಗಳನ್ನೆಲ್ಲಾ ಮೀರಿ ಬೆಳೆದುದಾಗಿದೆ. ಆದರೆ ನಾಗಾರಾಧನೆ ಮತ್ತು ಭೂತಾರಾಧನೆಗಳು ಇಂದಿಗೂ ಶುದ್ಧ ಆಚರಣೆಗಳೇ ಆಗಿ ಉಳಿದಿವೆ. ಇವುಗಳಲ್ಲಿ ಎಲ್ಲಾ ಬಗೆಯ ಕಲಾವಂತಿಕೆಯೂ ಆಚರಣೆಯ ಕ್ರಿಯೆಗೆ ಸೇವಕರಂತೆ ದುಡಿಯುತ್ತವೆ.

ಸಿರಿ, ನಾಗಾರಾಧನೆ ಮತ್ತು ಭೂತಾರಾಧನೆಗಳು ತಮಗೆ ಉಪಯುಕ್ತವಾಗುವ ಮಟ್ಟಿ ದಲ್ಲಿ 'ಶಿಲ್ಪ'ಕಲೆಯನ್ನು ಅಳವಡಿಸಿಕೊಂಡಿರುವುದನ್ನು ಗುರುತಿಸುವಲ್ಲಿ ಭೂತಾರಾಧನೆಯ ಮುಖವಾಡಗಳು ಮುಖ್ಯವಾಗಿವೆ. ಈ ಆರಾಧನೆಗಳಿಗೆ ರಾಜಾಶ್ರಯವು ಬೆಳೆದಂತೆ ಇವು ಗಳ ವೈಭವವೂ ಬೆಳೆದಿದೆ. ಅಡಿಕೆ ಹಾಳೆಯಿಂದ ರಚಿತವಾಗುತ್ತಿದ್ದ ಮುಖವಾಡಗಳು ಲೋಹ, ಚಿನ್ನ-ಬೆಳ್ಳಿಯನ್ನೂ ಬಳಸಿಕೊಳ್ಳುವಷ್ಟು ಪ್ರಸಿದ್ಧವಾಗಿವೆ. ಮುಕ್ಕೆಕಟ್ಟೆಯ ಉರು ಗಳನ್ನು ಇಲ್ಲಿ ಮರೆಯುವಂತಿಲ್ಲ-ಇವು ಪ್ರಾದೇಶಿಕವಾಗಿ ದೊರೆಯುವ ಮರಗಳಿಂದ ರಚಿತ ವಾಗುತ್ತಿವೆಯಷ್ಟೆ-ಇಂತಹ ಪ್ರಯತ್ನಗಳೆಲ್ಲವೂ ಕೇವಲ ಸಾಂಪ್ರದಾಯಿಕವಾಗಿ ಉಳಿದಿರುವ 'ಕಸಬು'ಗಳಾಗಿವೆ.

ಕಲೆಗಳ ಪತಿಯಿಂದ ಹೀಗೆ ವಿಚಾರಮಾಡುವಲ್ಲಿ ಕಲಾಭಿಜ್ಞತೆಯು ಈ ಜನತೆಯಲ್ಲಿ ಕೇವಲ ಆಚರಣೆಗಳ ಅಡಿಯಾಳಾಗಿ ದುಡಿಯುತ್ತಿದೆ-ಎಂಬುದನ್ನು ಗುರುತಿಸಿಯೂ ಈ ಸತ್ವವನ್ನು ಕಡೆಗಣಿಸುವಂತಿಲ್ಲ. ಏಕೆಂದರೆ ಈ ಆಚರಣೆಗಳಲ್ಲಿ ಒಂದು ಜೀವಂತ ಸಂಸ್ಕೃತಿಯು ಸುರಕ್ಷಿತ ವಾಗಿರುವಂತಿದೆ. ಇಂತಹ ಕವಚವು ನಮ್ಮದೇ ಆದ 'ಕಲೆಗಳ ಇತಿಹಾಸ'ಕ್ಕೆ ಬುನಾದಿ ಯೆಂದೂ ಪರಿಗಣಿಸಬಹುದು. ಇಲ್ಲಿ ದೊರಕುವ ವಸ್ತುವೈವಿಧ್ಯ ಹಾಗೂ ಜಾಣ್ಮೆಯಿಂದ ನಮ್ಮ ಆಧುನಿಕ ಕಲೆಗಳಿಗೆ ಒಂದು 'ಸ್ವಂತಿಕೆ'ಯ ಆಶ್ವಾಸನೆ ಕೂಡ ಇಲ್ಲಿ ದೊರಕಬಹು ದಾಗಿದೆ,

ಇಂತಹ 'ಕಲೆಗಳ ಇತಿಹಾಸ ರಚನೆ'ಯ ಅವಶ್ಯಕತೆಯಂತೂ, ಎಂದಿಗಿಂತಲೂ ಇಂದು ನಮ್ಮ ಭವಿಷ್ಯತ್ತಿಗಾಗಿ ಬೇಕೇಬೇಕೆಂದು ಹೇಳಲಿಚ್ಛಿಸುತ್ತೇನೆ.


**ಆಧಾರಗಳು : 1. ತುಳುವ ದರ್ಶನ**1987 : ಡಾ. ಪೀಟರ್ ಕ್ಲಾಸ್. ಕನ್ನಡಕ್ಕೆ: ಆರ್. ರಾವದೇವ ಶೆಣೈ ಮತ್ತು ಎ.ವಿ. ನಾವಡ. ಕುಂದಾಪುರ, ದ.ಕ.

**2. ತುಳುನಾಡು**1963 : ಪಿ. ಗುರುರಾಜ ಭಟ್, ಉಡುಪಿ, ದ.ಕ.

**3. ತುಳು ಜನಪದ ಸಾಹಿತ್ಯ** 1985 : ಡಾ. ಬಿ. ಎ. ವಿವೇಕ ರೈ, ಮಂಗಳಗಂಗೋತ್ರಿ ಮಂಗಳೂರು, ದ.ಕ.

**4. ಮಂಗಳ ತಿಮರು**1987: ಸಂ: ಏರ್ಯ ಲಕ್ಷ್ಮೀನಾರಾಯಣ ಆಳ್ವ, ಬಂಟ್ವಾಳ, ದ.ಕ.

**5. ತೆಂಕನಾಡು** 1947 : ಸೇಡಿಯಾಪು ಕೃಷ್ಣಭಟ್ಟ, ಎಂ. ಕೆ. ನಾರಾಯಣ, ಕಯ್ಯಾರ ಕಿಂಞಣ್ಣ ರೈ, ಕೆ. ಶ್ರೀನಿವಾಸ ಶರ್ಮ, ದ.ಕ.

6. Tribes of Mysore1956-7 : A.A.D. Luiz

7. Special study Report on Bhuta cult in South Canara Dt. 1971 Census report 14, P. Padmanabha I.A.S.

8. The Devil worship of the Tuluvas1882 : A.C. Burnell

9. Ethnology of South India1906 : Edgar Thurston

10. Bhnta worship1984 : Dr. U. P. Upadhyaya & Dr. Susheela Upadhyaya, Udupi, S.K.

## ಟಿಪ್ಪಣಿ ಎರಡು

The Devil worship of the Tuluvas(1882)-ತುಳುವರ ಭೂತಾರಾಧನೆ ಎಂಬ ಈ ಕೃತಿಯು, ಹಸ್ತಪ್ರತಿಯಾಗಿ ಬಾ(ಸೆ)ಲ್ ಮಿಷನ್ ಮ್ಯೂಸಿಯಂ, ಮಂಗಳೂರು. ಇಲ್ಲಿ ಉಳಿದುಬಂದಿದೆ. (ಇದರ ಒಂದೆರಡು ಉಪಪ್ರತಿಗಳೂ ದೊರಕುತ್ತಿವೆ. ಇಂಥದೊಂದನ್ನು ನಾನು ಉಡುಂಪಿಯಲ್ಲಿ ಕಾಣಲು ಸಾಧ್ಯವಾಯಿತಷ್ಟೆ.) ಇದನ್ನು ರಚಿಸಿದ A.C. ಬರ್ನೆಲ್. ಅವರು 1882ರಲ್ಲಿ ತೀರಿಕೊಂಡರು. ಆ ವೇಳೆಗೆ ಕೃತಿಯನ್ನು ಬಾಸೆಲ್ ಮಿಷನ್-ಅವರಿಗೆ ಅಚ್ಚುಮಾಡಲು ಕಳಿಸಿದ್ದಂತೆ ತಿಳಿದುಬರುತ್ತದೆ. ಇದರಲ್ಲಿ 325 ಹಾಳೆಗಳಿದ್ದು(ಕ್ವಾರ್ಟೋ ಬರಹದ ಹಾಳೆಗಳು) ಎರಡೂ ಕಡೆಗೆ ಬರೆದಂಥವು. ಆದುದರಿಂದ ಒಟ್ಟು 650 ಪುಟಗಳ ವ್ಯಾಪ್ತಿಯಿದೆ. ಇದರಲ್ಲಿ 10 ಬಣ್ಣದ ಹಿತ್ತಾಳೆಯ ತಗಡಿನಲ್ಲಿ ರಚಿಸಿದ ಬಣ್ಣದ ಚಿತ್ರಗಳಿದ್ದು ಅವೆಲ್ಲಾ ಭೂತದ ಚಿತ್ರಗಳಾಗಿರುವುದೇ ವಿಶೇಷ. ಅಷ್ಟನ್ನೂ ಬರ್ನೆಲ್-ರು ದೇಶಿಯ ಕಲಾವಿದರಿಂದ ಮಾಡಿಸಿದ್ದಾರೆಯಾದರೂ ಅವರ ಹೆಸರುಗಳು ಮಾತ್ರ ದೊರಕುವಂತಿಲ್ಲ. ಇವುಗಳ ವಿವರಗಳನ್ನು(ಪುಟ ಮತ್ತು ಹೆಸರು) ಇಂಡಿಯನ್ ಅಂಟಿಕ್ವೆರಿಯ ಸಂಪಾದಕರಾಗಿದ್ದ ಮೇಜರ್ R.C. ಟೆಂಪಲ್ CIE, ISC, ಅವರು ಇಂ.ಅನ್.ಯ XXIII-1894ರ ವಾಲ್ಯೂಂನಲ್ಲಿ ಸೇರಿಸಿದ್ದಾರೆ. ಅಗ್ಗೆ ಈ ಭೂತಗಳ ಚಿತ್ರದ ತಗಡುಗಳನ್ನು ಬಳಸಲು ಶ್ರೀ ಗ್ರಿಗ್ಸ್ ಎಂಬವರಿಂದ ಬಣ್ಣದ ಪ್ರತಿಗಳನ್ನಾಗಿ ಮಾಡಿಸಿದಾಗ ಆರು ಮಾತ್ರ ದೊರಕುವಂತಾಗಿದೆ. ಅವುಗಳನ್ನೇ ಈಚಿನ ಇಂ.ಅನ್,ಯ ಪುನರ್ಮುದ್ರಣದಲ್ಲಿ ಕಾಣುತ್ತೇವಷ್ಟೆ.

ಈ ಗ್ರಂಥದಲ್ಲಿ 1872ರಷ್ಟು ಹಿಂದಿನ ಚಿತ್ರಗಳೂ-ಪಾಡ್ದನಗಳೂ ಇತರ ವಿವರಗಳೂ (ಪ್ರತ್ಯಕ್ಷ ರೂಪದಲ್ಲಿ) ದೊರಕುತ್ತವೆ. ಒಬ್ಬಾತ ಕುರುಡನಾದ ಕಾಂತಾ ಎಂಬ ಪಂಬದನಿಂದ ಸಂಗ್ರಹಿಸಿದ ಪಾಡ್ದನಗಳೂ, ಜೊತೆಗೆ ಸಂಗ್ರಹಿಸಿದ 28 ಭೂತಗಳ ಹೆಸರುಗಳೂ (ಟಿಪ್ಪಣಿ ಸಮೇತ) ದೊರಕುತ್ತವೆ. ಇಂಥ ಸಂಗ್ರಹದಿಂದ ಆರು-1 ತೊಡಕಿನಾರ್, 2 ಮೂಡದೇರ್ ಕಾಲಭೈರವ, 3 ಕೋಟಿ ಚನ್ನಯ, 5 ಜುಮಾದಿ ಮತ್ತು 6 ಪಂಜುರ್ಲಿ-ಫೋಟೊಪ್ರತಿ ತೆಗೆದು ನಮ್ಮ ಕಲಾವಿದರ ಗಮನಕ್ಕೆ ತರಲು ಇಲ್ಲಿ ಪ್ರಯತ್ನಿಸಲಾಗಿದೆ. ಇವುಗಳನ್ನು ಅಚ್ಚುಮಾಡಲು ಅನುಕೂಲ ಮಾಡಿಕೊಟ್ಟ ಮಹನೀಯ ಶ್ರೀ ಗ್ರಿಗ್ಸ್ ಯಾರೆಂಬುದು ಮಾತ್ರ ಸ್ಪಷ್ಟವಾಗಿ ದೊರಕುತ್ತಿಲ್ಲ. ಇವರೂ ಬಾಸೆಲ್ ಮಿಷನ್‌ಗೆ ಸೇರಿದವರಿದ್ದು ಭಾರತದಲ್ಲಿದ್ದವರೆಂದು ಊಹಿಸಲು ಸಾಧ್ಯವಿದೆ.

ಈ ಚಿತ್ರಗಳು ಪಂಚವರ್ಣಗಳಲ್ಲಿದ್ದು ಒಂದು ಶತಮಾನದ ಹಿಂದಿನವು ಎಂಬುದು ತುಂಬ ಮಹತ್ವದ ವಿಷಯವೇ ಆಗಿದೆ. ಏಕೆಂದರೆ ಈ 'ಪಂಚವರ್ಣ'ಗಳನ್ನು ತುಳುವರ ಆಚರಣೆಗಳಲ್ಲಿಯೂ ಯಕ್ಷಗಾನ ವೇಷ ಹಾಗೂ ನಾಗಮಂಡಲದ ರಚನೆಯಲ್ಲಿಯೂ ಅಲ್ಲದೆ ಭಿತ್ತಿ ಚಿತ್ರಗಳಲ್ಲಿ ಮತ್ತು ಲೆಪ್ಪದ(ಸ್ಟಕ್ಕೋ) ಪ್ರತಿಮೆಗಳಲ್ಲಿಯೂ ಕಾಣುತ್ತೇವೆ.

-ಸಂ.

**ಟಿಪ್ಪಣಿ-ಮೂರು :**

**ಪಂಚವರ್ಣಗಳು :** 1. ಬಿಳಿ, ಕೆಂಪು, ಕಪ್ಪು, ಹಳದಿ ಮತ್ತು ಹಸಿರು (ಪಚ್ಚೆ)-ಎಂದು 1895ರ ನಾನಾರ್ಥ ಶಬ್ದಾವಳಿ ಮತ್ತು ಸಂಜ್ಞಾರ್ಥಗಳುಬಾ(ಸೆ)ಲ್ ಮಿಷ್ಞ ಪ್ರೆಸ್ಸಿನಲ್ಲಿ ಅಚ್ಚಾಗಿದೆ) B.R. ಎಂಬ ಗ್ರಂಥದಲ್ಲಿ ವಿವರವಿದೆ.

**2. ಸಹಸ್ರಾರ್ಥ ವೃಕ್ಷಾದಿಗಳ ವರ್ಣನೆ**-ಇದರ ಮೊದಲ ಸಂಗ್ರಹ ಪ್ರಕಟಣೆಯನ್ನು ಶ್ರೀಯುತರಾದ C. ಸ್ಟೊಲ್ಜ್ ಮತ್ತು G. ಪ್ಲೆಸ್ಟ್, ಬಾ(ಸೆ)ಲ್ ಮಿಷನ್ ಸಂಸ್ಥೆ-ಇವರು ಸಂಗ್ರಹಿಸಿ ಪ್ರಕಟಿಸಿದ್ದಾರೆ-(ಕ್ರಿ.ಶ. 1881.) ಇದರಲ್ಲಿನ ಅನುಬಂಧ XIIರಲ್ಲಿ ವರ್ಣಕ್ಕೆ ಉಪಯೋಗಿಸುವ ವೃಕ್ಷಾದಿಗಳು Dyes-ಎಂಬುದು ತುಂಬ ಉಪಯುಕ್ತವಾದುದಾಗಿದೆ :

-1. **ಕೆಂಪುವರ್ಣ**-ಪತಂಗದ ಮರ, ರಕ್ತಚಂದನದ ಮರ, ಮದರಂಗಿಯ ಎಲೆ, ದಾಸಾಲದ ಹೂವು, ಮಂಜಿಷ್ಠದ ಬೇರು. ಸಪ್ಪಂಗದ ಚೆಕ್ಕೆ ಮತ್ತು ಬೇರು, ಅಡಿಕೆ, ಕಚೋರಗಿಡದ ಗಡ್ಡೆ, ಚಾಯ ಬೇರು, ತಗಚೆಗಿಡದ ಬೀಜ, ಮಂಜೆಟ್ಟಿ ಮರ, ಮುತ್ತುಗದ ಬೇರು, ಹಳದಿ ಪಾವಟೆಯ ಬೇರು, ಪುನ್ನಾಗದ ಕಾಯಿ.

-2. **ಹಳದಿ ವರ್ಣ**-ಆವರಿಕೆಯ ಚೆಕ್ಕೆ, ಕೊಂದೆ ಮರದ ಚೆಕ್ಕೆ, ಮುತ್ತುಗದ ಹೂ, ಬೊಗರಿ ಮರದ ಚೆಕ್ಕೆ, ಬಂಗಾರ ಕಾಯಿ, ದೊಡ್ಡಮರದರಸಿನ, ಪಾರಿಜಾತದ ಹೂವು, ಸಪ್ಪಂಗದ ಬೇರು, ಅರಸಿನದ ಗಡ್ಡೆ, ಜೋಗಿಯರಳೆಯ ಕಾಯಿ, ಕರಿಜಾಲಿಯ ಚೆಕ್ಕೆ, ಕುಂಕುಮದ ಹೂವು, ಕುಸುಂಬೆ ಗಿಡದ ಹೂವು, ಜಾರಿಗೆ ಹುಳಿ, ಬಿಕ್ಕೆ ಗಿಡದ ಚಿಗುರು. ದೇವಗರಿಗೆಯ ಕಾಯಿ, ಹುಣಸೆಯ ಎಲೆ.

-3. **ನೀಲಿವರ್ಣ**-ನೀಲಿಯ ಸೊಪ್ಪು, ಹಲ್ಲುನೋವು ಮರದ ಎಲೆ(ಹಾಲೆ ಮರ-Ivory wood)

-4. **ಹಸಿರು ವರ್ಣ**-ತೊಟ್ಲ ಗಿಡದ ಎಲೆ(ದೀಪದ ಎಣ್ಣೆಗೂ, ವಸ್ತ್ರಕ್ಕೆ ಹಸುರು ಬಣ್ಣ ಹಾಕುವುದಕ್ಕೂ ಆಗುತ್ತದೆ.)

-5. **ಕಪ್ಪು ವರ್ಣ**-ಕಾಚಿನ ಮರ, ನಸುಗುನ್ನಿ ಬಳ್ಳಿಯ ಸೊಪ್ಪು, ಅಣಿಲೆಕಾಯಿ, ಗೇರು ಬೀಜ-ಚೆಕ್ಕೆ ಕೂಡ, ಕೊಟ್ಟಗಿಡ, ಗೇರ್ಕಾಯಿ, ಚುಬುಕು ಮರದ ಚೆಕ್ಕೆ, ನೆಲ್ಲಿ ಚೆಕ್ಕೆ, ಬಸುರಿ ಮರದ ಬೇರು, ಬೆಲಪತ್ರೆ, ಮುತ್ತುಗದ ಮರ, ಮೊಂಡುಗಳ್ಳಿ, ರತ್ನಗಂಧಿ ಮರ, ಲೋಳಿ ಸರ(ರಸ), ವಳಾಗ್ರದ ಚೆಕ್ಕೆ-ಎಲೆಯೂ(ಕಾಡು ಬಾದಾಮಿ)

ಇವುಗಳನ್ನು ನಮ್ಮ ದೇಶಿಯ ಕಸಬುದಾರರು ಬಳಸುತ್ತಿದ್ದರೆಂಬುದಕ್ಕೆ ಅನುಮಾನವಿಲ್ಲ.

**–ಸಂ**

## ಪಂಚವರ್ಣದ ಇತಿಹಾಸ :

ಭಾರತೀಯ ಆಚರಣೆಗಳು ಮತ್ತು ಕಲೆಗಳ ವಿಚಾರದಲ್ಲಿ ಕೆಂಪು, ಬಿಳಿ, ಹಳದಿ, ಹಸಿರು ಮತ್ತು ಕಪ್ಪು (ಅಥವಾ ನೀಲಿ). ಅಂದರೆ ಇವು ಐದೂ ಪ್ರಮುಖವಾಗಿವೆ. ಮುತ್ತೈದೆ-ಎಂಬ ಆಚರಣಾ-ಕಲ್ಪನೆಯಲ್ಲಿ ಕೂಡ ಈ ಐದು ಬಣ್ಣಗಳು ಆಧಾರಭೂತವಾಗಿವೆ ಎಂದರೆ ಆಶ್ಚರ್ಯವಾಗಬಹುದು. ಇದು ಐತಿಹಾಸಿಕವಾಗಿ ತುಂಬ ಹಳೆಯದು ಎನ್ನುವುದಕ್ಕೆ ಜೈನಾಚರಣೆಗಳಲ್ಲಿ ಆಧಾರಗಳಿವೆ. ಅದರ ಬಹುಮುಖ್ಯವಾದ ತೀರ್ಥಂಕರ(24)ರ ಕಲ್ಪನೆಗಳಲ್ಲಿ ಪ್ರತಿಮೆಗಳನ್ನು ಈ ಐದು ವರ್ಣಗಳಲ್ಲಿ ರಚಿಸಲಾಗಿದೆ. ಇದರ ರಚನೆಗಿಂತಲೂ ಈ ವಿಚಾರವು ಧಾರ್ಮಿಕವೂ ಹಳೆಯದೂ ಆಗಿದೆಯಷ್ಟೆ.

ಇಲ್ಲಿಯ 24 ಪ್ರತಿಮೆಗಳಲ್ಲಿ ಹದಿನಾರು, ಹಳದಿ(ಯಾ ಬಂಗಾರ)ಯಾಗಿದ್ದು ಉಳಿದ 8ರಲ್ಲಿ ಎರಡೆರಡು ಕೆಂಪು, ಹಸಿರು, ಬಿಳಿ ಮತ್ತು ಕಪ್ಪು(ಇಂದ್ರನೀಲ = ಕಡುನೀಲಿ) ಎಂದು ಹಂಚಿ ಹೋಗಿವೆ. ಇವುಗಳಿಗೆ ಶಾಸ್ತ್ರಾಧಾರವು ಸ್ಪಷ್ಟವಾಗಿಯೂ ಇರುವಂತಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಸುಪ್ರಸಿದ್ಧ ಜೈನಕೇಂದ್ರವಾದ ಮೂಡಬಿದರೆಯ ಬಸದಿಗಳಲ್ಲಿ ಐತಿಹಾಸಿಕವಾಗಿ ಹಳೆಯದೆನ್ನಿಸಿಕೊಂಡಿರುವ ಬಸದಿಯನ್ನು 'ಲೆಪ್ಪದ ಬಸದಿ' ಎಂದು ಕರೆಯುತ್ತಾರೆ. ಇದರಲ್ಲಿನ ಸುಮಾರು ಎರಡೂಕಾಲು ಅಡಿ ಎತ್ತರದ 24 ತೀರ್ಥಂಕರ ಪ್ರತಿಮೆಗಳಿವೆ. ಇವೆಲ್ಲಾ ಗೋಡೆಗೆ ಅಂಟಿಕೊಂಡಂತೆಯೂ ನಿಂತಿವೆ. ಇವುಗಳಲ್ಲಿ ಐದು ವರ್ಣಗಳ ಬಳಕೆಯಿದೆ. ಇದರ ಶಾಸ್ತ್ರೋಕ್ತಿಯನ್ನು **ಶಾಸ್ತ್ರಸಾರ ಸಮುಚ್ಚಯ**ದಲ್ಲೂ **ಜೈನಶಿಲ್ಪ** ಶಾಸ್ತ್ರದಲ್ಲೂ ಕಾಣಬಹುದು. ಅದರ ಸಿಂಹೇಂದ್ರ-ಎಂಬ ಅರ್ಚಕರು ಹೇಳುವಂತೆಯೂ ಇದೆ-

ಶ್ಯಾಮೋ ಪಾರ್ಶ್ವ ಸುಪಾರ್ಶ್ವ ದ್ವೌ ನೀಲಾಂಭೌ ನೇಮಿಸುವ್ರತೌ ॥
ಚಂದ್ರ ದಸ್ತಾಸಿತೌ ಸೋಣೌ ಪದ್ಮಪೂಜ್ಯೌ ಪರೇಪರೇ ॥ ೧ ॥
ಶೇಷಾಷೋಡಶ ಹೇಮಾಭಾಃ ಕುಮಾರಾಃ ಪಂಚದೀಕ್ಷಕಾಃ ॥
ವಾಸುಪೂಜ್ಯಜಿನೋ ಮಲ್ಲಿನೇಮಿಃ ಪಾರ್ಶ್ವೋಽಥ ಸನ್ಮತಿಃ ॥ ೨ ॥ (ಶಾ.ಸಾ.ಸ.)

ಮೂಡಬಿದರೆಯ ಹಳೆಯ ಬಸದಿಯು ಐತಿಹಾಸಿಕವಾಗಿ ಹಳೆಯದು-ಸುಮಾರು ಹತ್ತನೇ ಶತಮಾನದ್ದಿರಬಹುದು.(ಕೆಲವರು, ಜೈನರು ಇದನ್ನು 7-8ನೇ ಶತಮಾನದ್ದಿರಬಹುದೆನ್ನುತ್ತಾರೆ) ಈ ದಿವ್ಯ ದೇಹಗಳ 'ಪ್ರಭೆ'ಯನ್ನು ಪಂಚವರ್ಣಗಳಲ್ಲಿ ಗುರುತಿಸಿರುವ ಶಿಲ್ಪಿಗಳು ಎಂದಿನಿಂದಲೂ ವಿಶ್ವಕರ್ಮರು. ಈ ಲೆಪ್ಪದ ಕಲೆಯನ್ನು ಇಂದಿಗೂ ಕಾಪಾಡಿಕೊಂಡು ಬಂದಿರುವವರೂ ಅವರೆ. **ವಿಷ್ಣುಧರ್ಮೋತ್ತರ ಪುರಾಣ**ದಲ್ಲಿ ಈ ಕಲೆಯ ವಿವರವೂ ದೊರೆಯುತ್ತದೆ. ಇದು ಭಿತ್ತಿಚಿತ್ರಗಳ ರಚನೆಗೂ ಆಧಾರವಾಗಿರುತ್ತದೆಯಷ್ಟೆ.

ಇಷ್ಟು ಹಳೆಯ ವಿಚಾರದಲ್ಲಿ; ಶಾಸ್ತ್ರದಲ್ಲಿಯೂ, ಪಂಚವರ್ಣಗಳು 'ದಿವ್ಯ'ವೆಂಬ ಮುದ್ರೆಯನ್ನು ಪಡೆದಂತಿದೆ. ಇವನ್ನೇ ಭಾರತೀಯ 'ಮಿಸ್ಟಿಕ್' ವರ್ಣಗಳೆಂದು ಹೇಳಬಹುದು. ಇದರ ಪರಿಣಾಮವಾಗಿ ದಕ್ಷಿಣ ಕನ್ನಡದ ಆಚರಣೆಗಳಲ್ಲಿ ಈ ಐದು ವರ್ಣಗಳು ಪ್ರಭಾವಯುತವಾಗಿ ಕಂಡುಬರುತ್ತಿವೆ.

ಮೊದಲಿಗೆ **ನಾಗಮಂಡಲ**ವನ್ನು ಹೇಳಬಹುದು-ಅದರ ಹಳದಿ ಪ್ರಧಾನವಾದ ದೇಹದಲ್ಲಿ ಕೆಂಪು-ಎಳೆ ಮತ್ತು ಅಂಚುಗಳಿಗೆ ಕಪ್ಪು ಕಂಡರೆ ಹಸಿರು ಮತ್ತು ಬಿಳಿ ವರ್ಣಗಳೂ ಇವೆ. ವಾಸ್ತವವಾಗಿ ಶಿಲ್ಪ-ಚಿತ್ರಗಳ ವಿಷಯದಲ್ಲಿ ಶಾಸ್ತ್ರಗಳು(ಜೈನೇತರ) ವಾಸ್ತವತೆಯನ್ನು ಗಮನಿಸಬೇಕೆಂದೇ ಹೇಳುತ್ತವೆ. **ಅಗ್ನಿ ಪುರಾಣ**ವು ಅಷ್ಟನಾಗಗಳನ್ನೂ-ಅವುಗಳ ಸಂತತಿ ಮೊದಲಾದುವನ್ನು ಹೇಳಿದರೂ ಬಣ್ಣಗಳನ್ನು ಹೇಳುವುದಿಲ್ಲ. ಸಾಮಾನ್ಯವಾಗಿ ತಿಳಿದಂತೆ ನಾಗವರ್ಣವು ರಂಗೋಲಿಯದು, ಕಾಳಿಂಗ ಮಾತ್ರ ಕಪ್ಪು ಪ್ರಕಾಶವನ್ನುಳ್ಳುದು. ಹಳದಿ, ಕೆಂಪು, ಬಿಳಿ-ಹಾವುಗಳಿರಲಾರವು.(ಮಣ್ಣಿನ ಬಣ್ಣಕ್ಕೆ ಬರುವ ಹಾವೂ ಇದೆಯಷ್ಟೆ) ಆದರೆ, **ನಾಗಮಂಡಲ**ದ ಆಚರಣೆಯಲ್ಲಿ **ಪಂಚವರ್ಣ**ದ ಬಳಕೆಯಿದೆ. ಅದರ ಶಿಲ್ಪಿ(ವೈದ್ಯರು)ಯು ಐದು ಬಗೆಯ ವರ್ಣಗಳಿಂದ ಚಿತ್ರ-ಶಿಲ್ಪವನ್ನು ರಚಿಸುತ್ತಾನೆ. ಅಲ್ಲದೆ, ಈ ಐದು ವರ್ಣಗಳೂ ಸೇರಿ **ಮಂಗಳ**ಕರವೆಂಬ ನಂಬಿಕೆ ದೃಢವಾಗಿದೆ.

ಹೀಗೆ **ಪಂಚವರ್ಣ**ದ ಆಧ್ಯಾತ್ಮಿಕ(ಮಿಸ್ಟಿಕ್) ಎನ್ನಬಹುದಾದ ನಂಬಿಕೆಯು **ಭೂತಾರಾಧನೆ**ಯಲ್ಲಿ ಕೂಡ ಕಂಡುಬರುತ್ತದೆ. ಯಕ್ಷಗಾನ ಬಯಲಾಟದ ಅಲಂಕರಣದಲ್ಲಿಯೂ(ದಕ್ಷಿಣ ಕನ್ನಡದಲ್ಲಿ) ಇಂಥ ಪ್ರಭಾವವಿರುತ್ತದೆ. ದ.ಕ.ದ ಆಚರಣೆಗಳಲ್ಲಿ ಜೈನ ಪ್ರಭಾವವು ಸುಮಾರು 10ನೇ ಶತಮಾನದಿಂದಲಾದರೂ ಇದ್ದೀತೆಂಬುದಕ್ಕೆ ಈ **ಪಂಚವರ್ಣ**ದ ವೈಖರಿಯಂತೂ ಆಧಾರವಾಗಿರುತ್ತದೆ.

**ವಿಶೇಷ :** ನಮ್ಮ ಕಲಾವಿದರು ಇಂದಿಗೂ ತಮ್ಮ ಪ್ರತಿಭೆಯನ್ನು 'ಸೂರೆಹೊಯ್ಯಲು' ಈ ಐದು ಬಣ್ಣಗಳು ಸಾಕಾಗುತ್ತವೆ. ನಮ್ಮ ದೇಶದ ಚಿತ್ರಕಲೆಯಲ್ಲಿ ಸುಮಾರು 1600 ಕ್ರಿ.ಶ.ರ ವೇಳೆಗೆ ರಚಿತವಾದುದೆಂದು ಸಕಾರಣವಾಗಿ ಗುರುತಿಸಲಾಗಿರುವ 'ಚೌರಪಂಚಾಶಿಕಾ' ಎಂಬ 4 ವರ್ಣಚಿತ್ರಗಳು(ಚಿಕಣಿ ಚಿತ್ರಗಳು-ಗುಜರಾತ್) ಕಲ್ಹಣನ **ರಾಜತರಂಗಿಣಿ**ಯನ್ನು ನೆನಪಿಸುವ ಆಶಯ-ಕಥನವನ್ನು ಪರಿಶೀಲಿಸಬಹುದು. ಇವು ಭಾರತೀಯ ಸಂಪ್ರದಾಯ ಮತ್ತು ಶ್ರೇಷ್ಠ ಕಲಾಭಿವ್ಯಕ್ತಿತ್ವಕ್ಕೆ ಆಧಾರವಾಗುತ್ತವೆ. ಇಲ್ಲಿ ಸಂಕೇತಗಳೂ ಬಳಕೆಯಾಗಿವೆ. ಭಾವನೆಯ ಸ್ವಚ್ಛತೆ ಹಾಗೂ ವರ್ಣವೈಭವ-ಎರಡೂ ಮಿಳಿತವಾಗಿವೆ. ಇದರ ಪ್ರಭಾವವನ್ನು ಜೆಮಿನಿರಾಯ್‌ರ ಚಿತ್ರಗಳಲ್ಲೂ ಕಾಣಬಹುದಾಗಿದೆ. ಇಲ್ಲಿ ಜಾನಪದ ಮತ್ತು ಕ್ಲಾಸಿಕಲ್ ಅಂಶಗಳು ಪ್ರಕಾಶಿಸುತ್ತವೆ. ಇದೊಂದು ಶೃಂಗಾರಪೂರಿತ ಸಂದರ್ಭವೆಂದರೆ ಸಾಹಿತ್ಯದ ಪಂಡಿತರಿಗೂ ಆಸಕ್ತಿಯುಂಟಾಗಬಹುದು-ಇದರ ಶೈಲಿಯಲ್ಲಿ ಬಳಕೆಯಾಗಿರುವ ಬಣ್ಣಬಣ್ಣದ ಚೌಕಗಳು-ಚೌಕಟ್ಟುಗಳೂ ಸಹಜ-ಸರಳ ಸ್ವರೂಪಗಳನ್ನು ಮುರಿದು ಆಕರ್ಷಿಸುವ ರೇಖೆಗಳೂ ಗಮನಾರ್ಹವಾಗಿವೆ.

ಈಗಂತೂ **ಪಂಚವರ್ಣ**ಗಳ ಇತಿಹಾಸವನ್ನೂ ವೈಭವವನ್ನೂ ನಾವು ಕಳೆದುಕೊಂಡಂತಾಗಿದೆ. ಅಲ್ಲದೆ ಇವು ಸಂಕೇತ-ಭಾವಗಳ ಆಶಯಗಳಾಗಿ ಉಳಿದ ಸಂಕೇತಗಳನ್ನು ಜೀವಂತಗೊಳಿಸಬಲ್ಲುವೆಂಬುದಕ್ಕೆ 'ಚೌರಪಂಚಾಶಿಕಾ'-ದ ನಾಲ್ಕು ಚಿತ್ರಗಳು ಉದಾಹರಣೆಗಳಾಗುತ್ತವೆ-ಈ ಬಣ್ಣಗಳು **ಮಂಗಳ**ಕರವೆಂದು ಹೇಳುವುದರಲ್ಲಿಯೂ ಜೈನ ಧರ್ಮದ ನೆನಪಾಗಬಹುದಾಗಿದೆ. **-ಸಂ.**

## ಲೇಖಕರು

**ಅಮೃತ ಸೋಮೇಶ್ವರ**-ಕವಿ, ಕಾದಂಬರಿಕಾರ, ಯಕ್ಷಗಾನಕಾರ, ನಾಟಕಕಾರ, ವಿಮರ್ಶಕ, ಜಾನಪದ ವಿದ್ವಾಂಸ, ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರು, ಸ್ಥಳ : ಕೋಟೇಕಾರ್, ಮಂಗಳೂರು, ದ.ಕ.-574452

**ಮುಕುಂದಪ್ರಭು, ಮಂಜೇಶ್ವರ**-ಹಿರಿಯ ಸಂಶೋಧಕರು, ದಕ್ಷಿಣ ಕನ್ನಡದ ಆಚರಣೆಗಳನ್ನು ಅನುಭವದ ಆಧಾರಗಳಿಂದ ಪರಿಶೀಲಿಸುವ ವಿದ್ವಾಂಸರು. 729-1, ನ್ಯೂ ರೋಡ್, ಮಂಗಳೂರು, ದ.ಕ. 572004

**ಎ.ವಿ. ನಾವಡ-ಕುಂದ ದರ್ಶನ** ಮತ್ತು **ವೈದ್ಯರ ಹಾಡು**ಗಳಿಂದಲ್ಲದೆ ಡಾ. ಪೀಟರ್ ಕ್ಲಾಸ್ ಅವರ ಸಹಯೋಗಿಯಾಗಿ 'ತುಳುವ ದರ್ಶನ' ಎಂಬ ಕೃತಿಯ ಅನುವಾದ ಮಾಡಿದವರಲ್ಲಿ ಪ್ರಮುಖರು. ಕುಂದಾಪುರದ ಭಂಡಾರಕರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು, ಕುಂದಾಪುರ, ದ.ಕ. 576201

**ಡಾ. ಕೆ. ಚಿನ್ನಪ್ಪಗೌಡ**-ಭೂತಾರಾಧನೆಯನ್ನು ವಿಶೇಷವಾಗಿ ಅಧ್ಯಯನ ಮಾಡಿದವರು. ಭೂತಾರಾಧನೆ, ಜಾಲಾಟ-ಕೃತಿಗಳು ಪ್ರಸಿದ್ಧವಾಗಿವೆ. ಇದೇ ವಿಷಯದಲ್ಲಿ ಪಿ.ಎಚ್.ಡಿ. ಈಗ ಮಂಗಳೂರಿನ ಮಂಗಳ ಗಂಗೋತ್ರಿಯಲ್ಲಿ ಬೋಧಕರಾಗಿರುತ್ತಾರೆ. ಮಂಗಳೂರು, ದ.ಕ. 574199

**ಲೀಲಾಭಟ್ ಬಿ.-ಭೂತನಾಗರ ನಡುವೆ** ಎಂಬ ವಿಶಿಷ್ಟ ಗ್ರಂಥವನ್ನು ರಚಿಸಿದ ಜಾನಪದ ವಿದ್ವಾಂಸರು. ಈಗ ಪುತ್ತೂರಿನಲ್ಲಿದ್ದಾರೆ. ಇತಿಹಾಸದ ಬೋಧಕರಾಗಿ ನಿವೃತ್ತರು. ಪೊಲೀಸ್ ಠಾಣೆಯ ಬಳಿ. ಪುತ್ತೂರು, ದ.ಕ. 574201

**ಡಾ. ಪುರುಷೋತ್ತಮ, ಬಿಳಿಮಲೆ**-'ಸುಳ್ಯದ ಗೌಡ ಜನಾಂಗವನ್ನು ಕುರಿತ ಮಹಾಪ್ರಬಂಧವನ್ನು ರಚಿಸಿ ಪಿ.ಎಚ್.ಡಿ. ಪಡದಿದ್ದಾರೆ. ಜಾನಪದ ಅಧ್ಯಯನದಲ್ಲಿ ಪ್ರಸಿದ್ಧ ತರುಣರು, ಈಗ ಮಂಗಳೂರಿನ ಮಂಗಳ ಗಂಗೋತ್ರಿಯಲ್ಲಿ ಬೋಧಕರಾಗಿದ್ದಾರೆ. ಮಂಗಳೂರು, ದ.ಕ. 574199

**ಎಸ್.ಎ. ಕೃಷ್ಣಯ್ಯ**-ಉಡುಪಿಯ R.R.C. ಕೇಂದ್ರದಲ್ಲಿ ರಿಸರ್ಚರ್ ಆಗಿ ದುಡಿಯುತ್ತಿದ್ದಾರೆ. ಜಾನಪದದಲ್ಲಿ ಎಂ.ಎ. ಅಲ್ಲದೆ ಕಂಸಾಳೆ ಮತ್ತು ಗೊಂಬೆಯಾಟಗಳಲ್ಲಿ ಪರಿಣತರು. ಈಚೆಗೆ ಗೊಂಬೆಯಾಟವನ್ನು ಕುರಿತ ಒಂದು ಗ್ರಂಥವನ್ನು ಇಂಗ್ಲಿಷ್‌ನಲ್ಲಿ ರಚಿಸಿರುತ್ತಾರೆ. R.R.C., M.G.M. Campus, ಉಡುಪಿ. ದ.ಕ. 576102

**ಅ. ಲ. ನರಸಿಂಹನ್** ಎಂ.ಎ.-ಕರ್ನಾಟಕ ಗೆಜೆಟಿಯರ್‌ನಲ್ಲಿ ಶೋಧಕರಾಗಿರುವ ತರುಣ, ಕರ್ನಾಟಕದ ಚಿತ್ರಕಲೆಯನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ತರುಣ ಕಲಾವಿದರೂ ಹೌದು. ಕರ್ನಾಟಕ ಗೆಜೆಟಿಯರ್, ಕಾವೇರಿ ಬಿಲ್ಡಿಂಗ್ಸ್, ಬೆಂಗಳೂರು-560009

**ರಾಘವ ನಂಬಿಯಾರ್ ಕೆ. ಎಂ.**-ವೃತ್ತಿಯಲ್ಲಿ ಪತ್ರಿಕಾಕರ್ತರಾಗಿ 'ಉದಯವಾಣಿ' ಮಣಿಪಾಲಿನಲ್ಲಿ ದುಡಿಯುವವರಿದ್ದಾರೆ. ಕನ್ನಡ-ಮಲಯಾಳಂ-ಎರಡೂ ಭಾಷೆಗಳಲ್ಲಿ ಹತೋಟಿಯಿದ್ದು ಒಳ್ಳೆಯ ಸಂಶೋಧಕರೂ ಆಗಿರುತ್ತಾರೆ. ಸಹಸಂಪಾದಕರ ವಿಭಾಗ, ಉದಯವಾಣಿ ಪ್ರೆಸ್, ಮಣಿಪಾಲ, ಉಡುಪಿ. ದ,ಕ. 576119

## ಚಿತ್ರ ವಿವರ

**ನಾಗಮಂಡಲ :**

1. ಮಂಟಪದ ಅಲಂಕರಣ : ಸ್ಥಳ-ಉಡುಪಿ, ದ.ಕ.
2. ಮಂಡಲದ ಚಿತ್ತಾರ : ಸ್ಥಳ-ಅದ್ಯಪಾಡಿ, ಬಜಪೆ, ಮಂಗಳೂರು, ದ.ಕ.
3. ಆಚರಣೆಯಲ್ಲಿ ವೈದ್ಯ ಮತ್ತು ಪಾತ್ರಿ : ಸ್ಥಳ-ಉಡುಪಿ, ನರಸಿಂಹ ವೈದ್ಯ, ನಾಗಪಾತ್ರಿ.
4. ಆಶ್ಲೇಷ ಬಲಿಯ ಚಿತ್ತಾರ : ಸ್ಥಳ-ಅಲೆವೂರು, ಉಡುಪಿ, ದ.ಕ. (ಫೋಟೊ : ಡಾ. ಯು.ಪಿ. ಉಪಾಧ್ಯಾಯ)

**ಭೂತಾರಾಧನೆ :**

5. ಭೂತದ ಸ್ಥಾನ : ಸ್ಥಳ-ಹಿರಿಯಡ್ಕದ ಹಾದಿಯಲ್ಲಿ ಸೋಮೇಶ್ವರದ ಕಡೆಗೆ, ದ.ಕ.
6. ಪಂಜುರ್ಲಿಯ ಮುಖವಾಡ ತರುವುದು : ಸ್ಥಳ-ಅನಂತಾಡಿ, ಬಂಟವಾಳ, ದ.ಕ.
7. ಮೈಸಂದಾಯ ಪಾತ್ರಿ : ಸ್ಥಳ-ಕಾಜರಗುತ್ತು, ದ.ಕ.
8. ಪಿಲಿಚಾವುಂಡಿ-ಭೂತ ಕಟ್ಟುವಾಗ.
9. ಭೂತದ ಭಂಡಾರ-ಆರಾಧನೆಯ ಮಂಟಪದಲ್ಲಿ : ಸ್ಥಳ-ಉಡುಪಿ, ದ.ಕ.

10-1. ಉಳ್ಳಾಲ್ತಿಯ ರಕ್ತ ಚಂದನದ ಮುಖವಾಡ: ಸ್ಥಳ-ಅನಂತಾಡಿ, ಬಂಟವಾಳ, ದ.ಕ.

-2. ಉಳ್ಳಾಲ್ತಿ-ಸಾಲಂಕೃತ ರೂಪ, ಹಗಲು ಉತ್ಸವದ ದೇವಿ-ಮುಖವಾಡದಲ್ಲಿ : ಸ್ಥಳ-ಅನಂತಾಡಿ, ಬಂಟವಾಳ, ದ.ಕ.

**ಮುಖವರ್ಣಿಕೆ :**

11. ಕೊಡಮಣಿತ್ತಾಯ : ಸ್ಥಳ-ಮಂಗಳೂರು ತಾಲೂಕು.
12. ಪಿಲಿಚಾಮುಂಡಿ : ಸ್ಥಳ-ಬೆಳ್ತಂಗಡಿ ತಾಲೂಕು, ದ.ಕ.
13. ಗಿಳಿರಾಮ-ಸಾಲಂಕೃತ. ತೆಂಗಿನಗರಿಯ ಕದಿರ್ಮುಡಿ : ಸ್ಥಳ-ಬೆಳ್ತಂಗಡಿ ತಾ., ದ.ಕ.
14. ಪಂಜುರ್ಲಿ : ಸ್ಥಳ-ಬಂಟವಾಳ ತಾಲೂಕು, ದ.ಕ.

(ಫೋಟೊ : 11, 12, 13,14-ಕೆ. ಚಿನ್ನಪ್ಪಗೌಡ-ಲೇಖಕ.)

15. ವಿಷ್ಣುಮೂರ್ತಿ-ಬಯಲಾಟಕೋಲದ ವೇಷ
16. ವಿಷ್ಣುಮೂರ್ತಿಯ ಬೆಳ್ಚಪ್ಪಾಡಿ.

(ಫೋಟೊ : 15, 16-ಈಶ್ವರಯ್ಯ)

**ಮೆಕ್ಕೆಕಟ್ಟೆಯ ಉರುಗಳು :**

17. ಖೇಚರಾವುತ-ಆನೆ ಮತ್ತು ಇತರ ಉರುಗಳು : ಸ್ಥಳ-ಮೆಕ್ಕೆಕಟ್ಟೆ, ದ.ಕ.
18. ಇಕ್ಕೋಡು ನಂದಿ ಮತ್ತು ಇತರ ಉರುಗಳು, ಸಪ್ತಮಾತೃಕೆಯರು ; ಸ್ಥಳ-ಅದೇ.
19. ನಂದಿಕೇಶ್ವರನ ಗಣಗಳು : ಸ್ಥಳ-ಅದೇ.
20. ಗಡ್ಡ-ಟೋಪಿಗಳ ಬಳಕೆ, ಪೋರ್ಚುಗೀಸ ಪ್ರಭಾವ : ಸ್ಥಳ-ಅದೇ.

**ಸಿರಿಯ ಬಳಗ :**

21. ಸೊನ್ನೆ. ಅಬ್ಬಗ, ದಾರಗ, ಗಿಂಡಿ: ಸ್ಥಳ-ಕವತ್ತಾರು, ದ.ಕ.

22. ಅಬ್ಬಗ, ದಾರಗ, ಕುಮಾರ : ಸ್ಥಳ-ಪಾಂಗಳ, ಉಡುಪಿ, ದ.ಕ.(ಫೋ:-ಕ.ವೆಂ.ರಾ)

23. ಉರುಗಳು-ನಂದಿಗೋಣ ಮತ್ತು ಚಿಕ್ಕು: ಸ್ಥಳ-ಉಡುಪಿ, ದ.ಕ.

24. ವೈದ್ಯರ ಕುಟುಂಬ : ಸ್ಥಳ-ಅಂಪಾರು, ದ.ಕ.

25. ಅಣ್ಣುಪಾಣಾರ ಮತ್ತು ಸಂಗಡಿಗರು : ಸ್ಥಳ-ಪಾಲ್ಯೂರು, ಕಾವರಾಡಿ ಹಳ್ಳಿ, ಕುಂದಾಪುರ ತಾಲೂಕು. ದ.ಕ.

(ಫೋಟೊ-23, 24, 25-ಎಸ್.ಎ. ಕೃಷ್ಣಯ್ಯ)

26. ಡಕ್ಕೆಬಲಿ-ಮಂಡಲ: ಸ್ಥಳ. ಉಡುಪಿ, ದ.ಕ.(ಚಿತ್ರ-ಕ.ವೆಂ.ರಾ)

27. ಪಾಣಾರಾಟದ ಅಂತಿಮ ದೃಶ್ಯ-ಹಾಳೆಯ ನಾಗರ: ಸ್ಥಳ-ಕೊಡೆಬೈಲೂರು, ದ.ಕ. (ಫೋಟೊ-ಎಸ್.ಎ. ಕೃಷ್ಣಯ್ಯ)

**ಹಾಳೆಯ ಮುಖವಾಡಗಳು:**

28-1. ಮೈಸಂದಾಯ. -2. ಪಿಲಿಭೂತ. -3. ಪಂಜುರ್ಲಿ. (ಹಾಳೆ ಮುಗಗಳ ನಿರ್ಮಾಣ ; ಡಂಗುಪಾಣಾರ, ಹಿರಿಯಡ್ಕ, ದ.ಕ.) -4. ಗುಳಿಗ.(ಕೃಪೆ-ವೆಂಕಟರಾಜ ಪುಣಿಚತ್ತಾಯ. ಎಡನೀರು, ಕಾಸರಗೋಡು ಪ್ರಾಂತ್ಯ. (ನೆರವು-ಎಸ್.ಎ. ಕೃಷ್ಣಯ್ಯ-ಲೇಖಕ)

**ಆರಾಧನೆಯ ಸಲಕರಣೆ:**

29. ಬಲಿಪ್ರಭೇದ.

30. ಆಯುಧಗಳು: ಕಡ್ಸಲೆ, ದಂಡ, ತ್ರಿಶೂಲ, ಬೆತ್ತ.

31-1. ಗಗ್ಗರ-ಕಂಚು. -2. ಅಣಿ ಪ್ರಭೇದ-ಬಟ್ಟೆಹಾಳೆ. -3. ಚಕ್ಕೆ ಅಪರೊಂಬು-ಬೆಳ್ಳಿ. -4. ತಲೆಪಟ್ಟಿ-ಬೆಳ್ಳಿ.

(ಚಿತ್ರಗಳು: ಕೆ. ಚಿನ್ನಪ್ಪಗೌಡ-ಲೇಖಕ)

**ಗೊಂಬೆಯಾಟ :**

32. ಕೊಗ್ಗಕಾಮತರ ಆಟದಲ್ಲಿ ಒಂದು ಸಂದರ್ಭ.

33-1. ಕೊಗ್ಗ ಕಾಮತರ ಹಿಡಿತ. -2. ಸೂತ್ರದಲ್ಲಿನ ಗೊಂಬೆ.

(ಸಂಗ್ರಹ: ಕ.ವೆಂ.ರಾ)

**ಭಿತ್ತಿ ಚಿತ್ರಗಳು:**

34-1. ಮೂಡಬಿದರೆಯ ಶ್ರೀ ಮಠದಲ್ಲಿ. -2. ಅದೇ. -3. ಅದೇ. -4. ಅದೇ. -5. ಸೇಂಟ್ ಅಲಾಯಸಿಸ್ ಚರ್ಚ್‌ನಲ್ಲಿ, ಮಂಗಳೂರು, ದ.ಕ. -6. ಅದೇ. -7. ಉಗ್ಗಲ್ ಬೆಟ್ಟುವಿನಲ್ಲಿ ಯಕ್ಷಗಾನದ ವೇಷಗಳು: ಸ್ಥಳ-ಬ್ರಹ್ಮ ವೈದ್ಯರ್ಕಳ ಗರಡಿ, ಉಡುಪಿ, ದ.ಕ. -8. ಲೆಪ್ಪದ ಪ್ರತಿಮೆಗಳು-ಮೂಡಬಿದರೆಯ ಹಳೆಯ ಜೈನ ಬಸತಿ, ದ.ಕ.

(ಫೋಟೊ: ಅ.ಲ. ನರಸಿಂಹನ್-ಲೇಖಕ)

**ಬಣ್ಣದ ಚಿತ್ರಗಳು :**

$A_1$. ಕೋಟಿ. $A_2$. ಚನ್ನಯ $B_1$. ಜುಮಾದಿ $B_2$. ತೊಡಕಿನಾರ್ $C_1$. ಮೂಡದೇರು (ಕಾಲಭೈರವ) $C_2$. ಪಂಜುರ್ಲಿ

(ಕೃಪೆ : ಮಿಥಿಕ್ ಸೊಸೈಟಿ, ಬೆಂಗಳೂರು-1, ಫೋಟೊ : ಅ.ಲ.ನರಸಿಂಹನ್)

$D_1$. ನಾಗಮಂಡಲ-ಅರ್ಧ ಮಂಡಲ, 8 ಪವಿತ್ರಗಳು.

$D_{2-1}$. ಶ್ರೀ ಅಣ್ಣಪ್ಪಸ್ವಾಮಿ, ಮುಖವಾಡ, ಧರ್ಮಸ್ಥಳ, ದ.ಕ.

(ಕೃಪೆ : ಮಂಗಳತಿಮರು-ಏರ್ಯ ಲಕ್ಷ್ಮೀನಾರಾಯಣಆಳ್ವ : ಸಂಪಾದಕರು)

-2. ಮಾಂಕಾಳಿ ಮುಗ.

(ನಿರ್ಮಾಣ : ಡಂಗುಪಾಣಾರ, ಹಿರಿಯಡ್ಕ, ದ.ಕ.)

ವಿಶೇಷ ಕೃಪೆ : 1-$A_1$, $A_2$, $B_1$, $B_2$, $C_1$, $C_2$- ಇವು ಆರು ಚಿತ್ರಗಳನ್ನೂ The Indian Antiquary vol. XXIII, 1894-ಇದರ ಪುನರಾವೃತ್ತಿಯಿಂದ ಗ್ರಹಿಸಲಾಗಿದೆ. ಮಿಥಿಕ್ ಸೊಸೈಟಿ, ಬೆಂಗಳೂರು-1-ಇವರಿಗೆ ಕೃತಜ್ಞತೆಗಳು.

-2. Regional Resources centre for Folk Performing Arts, M.G.M. College Campus, Udupi-576102' Karnataka, India, ಇವರು ಒದಗಿಸಿದ ಚಿತ್ರಗಳು-1ರಿಂದ 10, 17ರಿಂದ 21, 23ರಿಂದ 25, 27, $D_1$-ಇವರಿಗೆ ಕೃತಜ್ಞತೆಗಳು.

ಭೂತ ಭಂಡಾರ
ಸ್ಥಳ: ಉಡುಪಿ

10. ಉಳ್ಳಾಲ್ತಿಯ ರಕ್ತಚಂದನದ ಮುಖವಾಡ
ಸ್ಥಳ: ಅನಂತಾಡಿ, ಬಂಟವಾಳ



10a. ಉಳ್ಳಾಲ್ತಿ - ಅಲಂಕೃತ
ಸ್ಥಳ: ಅನಂತಾಡಿ, ಬಂಟವಾಳ





11. ಕೊಡಮಣಿತ್ತಾಯಭೂತ - ಅಲಂಕರಣ
ಸ್ಥಳ: ಮಂಗಳೂರು ತಾಲೂಕು



12. ಪಿಲಿಚಾಮುಂಡಿ - ಅಲಂಕರಣ
ಸ್ಥಳ: ಬೆಳ್ತಂಗಡಿ ತಾಲೂಕು



15. ವಿಷ್ಣುಮೂರ್ತಿಯ ವೇಷ
ಸ್ಥಳ: ಕಾಸರಗೋಡು



16. ಬೆಳ್ಚಪ್ಪಾಡಿಯ ಆವೇಶ
ಸ್ಥಳ: ಕಾಸರಗೋಡು



19. ನಂದಿಕೇಶ್ವರ ಗಣಗಳು
ಸ್ಥಳ: ಮೆಕ್ಕೆಕಟ್ಟೆ



20. ಪರಕೀಯ ಉರುಗಳು
ಸ್ಥಳ: ಮೆಕ್ಕೆಕಟ್ಟೆ

24. ಕೋಟಿಲಿಂಗ ವೈದ್ಯರ ಕುಟುಂಬ
ಸ್ಥಳ: ಅಂಪಾರು

25. ಅಣ್ಣು ಪಾಣಾರ-ಸಂಗಡಿಗರು
ಸ್ಥಳ: ವಾಲ್ತೂರು




26. ಡಕ್ಕೆಬಲಿಯ ಚಿತ್ರ
ಸ್ಥಳ: ಉಡುಪಿ



27. ಪಾಣಾರಾಟದಲ್ಲಿ ನಾಗತಲೆಕಟ್ಟು
ಸ್ಥಳ: ಕ್ರೋಡೇಬೈಲೂರು



28/1. ಮೈಸಂದಾಯ ಮುಗ
ಸ್ಥಳ: ಹಿರಿಯಡ್ಕ



28/2. ಹುಲಿಯಮುಗ
ಸ್ಥಳ: ಹಿರಿಯಡ್ಕ

28/3. ಪಂಜುರ್ಲಿಮುಗ
ಸ್ಥಳ: ಹಿರಿಯಡ್ಕ





28/4. ಗುಳಿಗನಮುಗ
ಸ್ಥಳ: ಕಾಸರಗೋಡು




ಚಿತ್ರಸಂಖ್ಯೆ: 29. ಬಲಿಪ್ರಭೇದ ಬಲಿಪ್ರಭೇದ








ಚಿತ್ರಸಂಖ್ಯೆ— 30. ಆಯುಧಗಳು ಆಯುಧ ಪ್ರಭೇದಗಳು (ಕತ್ತಿ, ದಂಡ, ತ್ರಿಶೂಲ, ಚಿತ್ರ)



ಚಿತ್ರಸಂಖ್ಯೆ: 31/1. ಗಗ್ಗರ 'ಗಗ್ಗರ'



ಚಿತ್ರಸಂಖ್ಯೆ: 31/2. ಬಟ್ಟೆಹಾಳೆಯ ಅಣಿ ಅಣಿ ಪ್ರಭೇದ—
(ಬಟ್ಟೆ-ಹಾಳೆ)



ಚಿತ್ರಸಂಖ್ಯೆ: 31/3. ಚಕ್ಕೆ ಅಪರೊಂಬು (ಬೆಳ್ಳಿ)



ಚಿತ್ರಸಂಖ್ಯೆ 31/4. ತಲೆಪಟ್ಟ (ಬೆಳ್ಳಿ)

**ಗೊಂಬೆಯಾಟ** 32. ಕಾಮತರ ಗೊಂಬೆಗಳು



33/1. ಕಾಮತ್



33/2. ಗೊಂಬೆ



ನಾಗಮಂಡಲದ ಪಾತ್ರಿ ಮತ್ತು ವೈದ್ಯರ ನೃತ್ಯ

## ಕರ್ನಾಟಕ ಲಲಿತಕಲಾ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು-560 002

### ಕರ್ನಾಟಕದ ಕಲೆ

1. **ಚಾಲುಕ್ಯ ವಾಸ್ತು ಶಿಲ್ಪ**
   ಡಾ|| ಶಿವರಾಮಕಾರಂತ ರೂ. 10-50
2. **ದೇವಾಲಯದ ಶಿಲ್ಪಗಳು**
   ಎಸ್.ಎನ್. ಸ್ವಾಮಿ ರೂ. 30-00
3. **ಕರ್ನಾಟಕ ಕಲಾವಿದರ ಪರಿಚಯಾವಳಿ**
   ಎಸ್.ಎನ್. ಚಂದ್ರಶೇಖರ ರೂ. 35-00
4. **ಕರ್ನಾಟಕದ ಭಿತ್ತಿ ಚಿತ್ರಗಳು**
   ಪಿ.ವಿ.ಕೆ. ಶಾಸ್ತ್ರಿ ರೂ. 10-00

### ಕರ್ನಾಟಕ ಕಲಾವಿದರ ಮಾಲೆ

1. **ಜಿ.ಎಸ್. ದಂಡಾವತಿಮಠ**
   ಪಿ.ಕೆ. ಹಿರೇಮಠ
2. **ಎಂ.ವಿ. ಮಿಣಜಗಿ**
   ಗವೀಶ್ ಹಿರೇಮಠ
3. **ಎನ್.ಜಿ. ಪಾವಂಜೆ**
   ಎಂ.ಟಿ.ವಿ. ಆಚಾರ್ಯ
4. **ಕೆ. ವೆಂಕಟಪ್ಪ**
   ಪಿ.ಆರ್. ತಿಪ್ಪೇಸ್ವಾಮಿ
5. **ಡಿ.ಜಿ. ಬಡಿಗೇರ್**
   ಅನ್ನದಾನಿ ಹಿರೇಮಠ
6. **ಅಮೀನ ಸಾಹೇಬ್ ಕಮಡೋಳಿ**
   ಪಿ.ಕೆ. ಹಿರೇಮಠ
7. **ಎಂ.ಎ. ಚೆಟ್ಟಿ**
   ಅನ್ನದಾನಿ ಹಿರೇಮಠ
8. **ರೂಪಶಿಲ್ಪಿ ಬಸವಯ್ಯ**
   ಎಂ .ಎಚ್. ಕೃಷ್ಣಯ್ಯ
9. **ಎಂ. ವೀರಪ್ಪ**
   ಪಿ.ಆರ್. ತಿಪ್ಪೇಸ್ವಾಮಿ
10. **ಶಂಕರರಾವ್ ಆಳಂದಕರ**
    ಡಾ|| ಎಂ.ಜಿ. ಬಿರಾದಾರ
11. **ಕೆ.ಕೆ. ಹೆಬ್ಬಾರ್**
    ಎನ್ ಮರಿಶಾಮಾಚಾರ್
12. **ವೈ ಸುಬ್ರಹ್ಮಣ್ಯರಾಜು**
    ಎಸ್.ಎನ್. ಚಂದ್ರಶೇಖರ್
13. **ಎಸ್.ಆರ್. ಅಯ್ಯಂಗಾರ್**
    ಆ.ಲ. ನರಸಿಂಹನ್
14. **ಡಿ.ವಿ. ಹಾಲಭಾವಿ**
    ಎಸ್.ಕೆ. ಹೂಗಾರ್
15. **ರಂಜಾಳ ಗೋಪಾಲ ಶಣೈ**
    ಪಿ.ಪಿ. ಬಾಯಿರಿ
16. **ಕೆ. ವೆಂಕಟಪ್ಪ ಸವಿನೆನಪು**
    ಎಸ್.ಎನ್. ಚಂದ್ರಶೇಖರ್ | ರೂ. 25-00
17. **ಸಮಕಾಲೀನ ಕಲೆ**
    ಪಿ.ವಿ.ಕೆ. ಶಾಸ್ತ್ರಿ ರೂ. 15-00 ಸಚಿತ್ರ
18. **ಪ್ರಶಸ್ತಿ ಪಡೆದ ಕಲಾವಿದರು (1965-86)**
    ಸೋಮಶೇಖರ್ ಸಾಲಿ ಮತ್ತು ಪಿ.ಆರ್. ತಿಪ್ಪೇಸ್ವಾಮಿ

ಎಲ್ಲ ಪ್ರಕಟಣೆಗಳಿಗೂ ರಿಯಾಯಿತಿಯನ್ನು ಕೊಡಲಾಗುವುದು.

ಪ್ರಕಾಶಕರು: ಬಿ.ಸಿ. ವೆಂಕಟಪ್ಪ, ರಜಿಸ್ಟ್ರಾರ್,
ಕರ್ನಾಟಕ ಲಲಿತಕಲಾ ಅಕಾಡೆಮಿ,
ನೃಪತುಂಗ ರಸ್ತೆ, ಬೆಂಗಳೂರು-560 002

# ದಕ್ಷಿಣ ಕನ್ನಡ ಜಿಲ್ಲೆ

ಕರ್ನಾಟಕ



ಉತ್ತರ ಕನ್ನಡ ಜಿಲ್ಲೆ
ಬೈಂದೂರು
ಕೊಲ್ಲೂರು
ಶಿವಮೊಗ್ಗ ಜಿಲ್ಲೆ
ಚಕ್ರನಾಡಿ ನದಿ
ಹಳದಿ ನದಿ
ಕುಂದಾಪುರ
ಸೋಮೇಶ್ವರ
ಸೀತಾನದಿ
ಹೆಬ್ರಿ
ಸ್ವರ್ಣ ನದಿ
ಉಡುಪಿ
ಚಿಕ್ಕಮಗಳೂರು ಜಿಲ್ಲೆ
ಕಾರ್ಕಳ
ಮೂಡುಬಿದರೆ
ಫಲ್ಗುಣಿ ನದಿ
ಚಾರ್ಮಾಡಿ
ಗುರುವಾಯನಕೆರೆ
ಉಜಿರೆ
ಬೆಳ್ತಂಗಡಿ
ಧರ್ಮಸ್ಥಳ
ಸುರತ್ಕಲ್
ಗುರುಪುರ ನದಿ
ಮಂಗಳೂರು
ನೇತ್ರಾವತಿ ನದಿ
ಬಂಟ್ವಾಳ
ಉಪ್ಪಿನಂಗಡಿ
ಹಾಸನ ಜಿಲ್ಲೆ
ಪುತ್ತೂರು
ಸುಬ್ರಹ್ಮಣ್ಯ
ಪಯಸ್ವಿನಿ ನದಿ
ಸುಳ್ಯ
ಕೇರಳ
ಕೊಡಗು ಜಿಲ್ಲೆ